# ಆಷಾಢಭೂತಿ ವಿದ್ಯಾನಂದಮುನಿ

( ಸತ್ಯಶೋಧನಾತ್ಮಕ ಜೀವನ ಚರಿತ್ರೆ )

# ಆಷಾಢಭೂತಿ
# ವಿದ್ಯಾನಂದಮುನಿ

(ಸತ್ಯಶೋಧನಾತ್ಮಕ ಜೀವನ ಚರಿತ್ರೆ)

ಬಿ. ಎಸ್. ನಂದಕುಮಾರ್

ಕುಂದಕುಂದ ಪ್ರಕಾಶನ
58; 'ತಿಮ್ಮರಾಯಸ್ವಾಮಿ ಪ್ರಸನ್ನ' ಹೊಸಮನೆ, ಭದ್ರಾವತಿ
ಭದ್ರಾವತಿ – 577301

ASHADABHOOTHI VIDYANANDAMUNI
(Vidyanandamuni — A hypocrite)
—By B. S Nandakumar, M.A., Lecturer in Kannada, Sir M. V. College, Bhadravati-577301. Published by Kundakunda Prakashana 58, 'Thimmarayaswamy Prasanna' (Upstairs) Upperhutta, Bhadravati-577301. (Karnataka State) First Edition: 1982, pp, VIII + 232. Price: Rs. 18-00. Calico: Rs. 25-00.

ಮೊದಲ ಮುದ್ರಣ : 1982

© ಹಕ್ಕುಗಳು ಲೇಖಕರವು

ಮುಖಚಿತ್ರ : ಕೆ. ಎಲ್. ವೆಂಕಟೇಶ್

ಬೆಲೆ : ಹದಿನೆಂಟು ರೂಪಾಯಿಗಳು

ಉತ್ತಮ ಪ್ರತಿ : ಇಪ್ಪತ್ತೈದು ರೂಪಾಯಿಗಳು

ಪುಸ್ತಕ ದೊರೆಯುವ ವಿಳಾಸ :

ಕುಂದಕುಂದ ಪ್ರಕಾಶನ
58, 'ತಿಮ್ಮರಾಯಸ್ವಾಮಿ ಪ್ರಸನ್ನ' ಮೇಗಲಹುತ್ತ
ಭದ್ರಾವತಿ–577301

ಮುದ್ರಕರು :

ಶ್ರೀ ರಾಜೇಂದ್ರ ಪ್ರಿಂಟರ್ಸ್, ಮೈಸೂರು

# ಮುನ್ನುಡಿ

"ನಮ್ಮ ಸಮಾಜದವರೆಲ್ಲರೂ ಸೇರಿಕೊಂಡು ಅವರನ್ನು ಸರಿಮಾಡಬೇಕು...."

"ಇಪ್ಪತ್ತೊಂದನೇ ತಾರೀಖು ಚೀಫ್‌ಮಿನಿಸ್ಟರ್ ಬರುತ್ತಾರೆ. ಅವರ ಎದುರಿನಲ್ಲಿ ಎಲ್ಲಾ ಸ್ಪಷ್ಟವಾಗಿ ಹೇಳಿಬಿಡ್ತೀನಿ.. ..."

"ನಾನು ಬಿಡೋಹಾಗಿಲ್ಲ. ಕ್ಷಮೆ ಮಾಡೋದಾದರೂ, ಕ್ಷಮೆ ಮಾಡೋದಿಲ್ಲ."

ಮೇಲಿನ ಸರಿಮಾಡುವ, ಚಾಡಿಹೇಳುವ, ಮತ್ತು ಕ್ಷಮಿಸದಿರುವ ಈ ಮಾತುಗಳನ್ನು ಆಡಿದವರು ಬೇರಾರೂ ಅಲ್ಲ, ಸಂತ ಶಿರೋಮಣಿ, ಏಲಾಚಾರ್ಯ, ಸಿದ್ಧಾಂತ ಚಕ್ರವರ್ತಿ ಎಂದು ಕರೆಸಿಕೊಂಡಿರುವ ಮುನಿ ವಿದ್ಯಾನಂದರು ತಾ. 14–7–1980ರಂದು ಮಂಡ್ಯಜಿಲ್ಲೆಯ ಬೆಳ್ಳೂರಿನಲ್ಲಿ ಬಹಿರಂಗ ಸಭೆಯನ್ನುದ್ದೇಶಿಸಿ ಈ ಮಾತುಗಳನ್ನು ಆಡಿದರು. ತಾವು ದ್ವೇಷಿಸುತ್ತಿದ್ದ ಊರುಜನರ ಹೆಸರನ್ನು ಹೇಳುವುದರ ಮೂಲಕ ಅವರಿಂದ ಈ ಆಕ್ರೋಶಪೂರ್ಣ ನುಡಿಗಳು ಹೊರಬಿದ್ದುವು. ಕಲಹಕಾರಿಯಾದ ಮತ್ತು ಧರ್ಮವಿರುದ್ಧವಾದ ಇಂತಹ ಮಾತುಗಳು ವಿದ್ಯಾನಂದರು ನಿಜವಾದ ಮುನಿಯಲ್ಲ, ವೇಷಧಾರಿಯಾದ ಕಪಟಸನ್ಯಾಸಿ ಎಂಬುದನ್ನು ರುಜುವಾತು ಪಡಿಸಿದುವು.

ತಮ್ಮ ನಿಜರೂಪವನ್ನು ಬಹಿರಂಗಕ್ಕೆಳೆಯುವ ಮಾತುಗಳು ಅಂದು ವಿದ್ಯಾನಂದರಿಂದ ಪ್ರಮಾದವಶಾತ್ ಹೊರಬಿದ್ದಾಗ ಅವರ ಕಪಟತನವನ್ನು ಅರಿತು ಅವರನ್ನು ವಿರೋಧಿಸುವ ವಿಚಾರಪ್ರಜ್ಞೆಯನ್ನು ಜನರು ತೋರಲಿಲ್ಲ. ಬದಲಾಗಿ ಕೆಲವರು ಆಷಾಢಭೂತಿತನಕ್ಕೆ ನೀರೆರೆಯತೊಡಗಿದರು. ಇದರಿಂದಾಗಿ ವಿದ್ಯಾನಂದರ ತಾಮಸ ಗುಣಗಳು ಹುಲುಸಾಗಿ ಬೆಳೆದು ಸಾತ್ವಿಕ ಪ್ರವೃತ್ತಿಗೆ ಕಂಟಕವಾಗತೊಡಗಿತು. ಇಂತಹ ವಿಷಮಯ ಸನ್ನಿವೇಶದಲ್ಲಿ ನಾನು ಮುನಿ ವಿದ್ಯಾನಂದರ ನಿಜಜೀವನವನ್ನು ಬಯಲಿಗೆಳೆಯುವ ದೃಢನಿರ್ಧಾರ ಮಾಡಿ ಅವರ 14-7–80ರ ಬೆಳ್ಳೂರು ಭಾಷಣಕ್ಕೆ ಪ್ರತಿಕ್ರಿಯೆಯಾಗಿ ನಾಲ್ಕು ಪತ್ರಗಳನ್ನು ಅವರಿಗೆ ಬರೆದು ಅವರ ಮಾತುಗಳಿಗೆ ಸ್ಪಷ್ಟೀಕರಣವನ್ನು ಕೇಳಿದೆ. ಸೂಕ್ತಸಮಯದಲ್ಲಿ ನನ್ನ ಪತ್ರಗಳನ್ನು ಪ್ರಕಟಿಸಿ ಸಾರ್ವಜನಿಕರಿಗೆ ಹಂಚಿದೆ. ವಿದ್ಯಾನಂದರಿಂದ ಯಾವ ಪತ್ರಕ್ಕೂ ಸ್ಪಷ್ಟೀಕರಣ ಬರದೇಹೋದಾಗ ನಾನು "ಮುನಿ ವಿದ್ಯಾನಂದರು ಸುಳ್ಳಾಡಿದ್ದೇಕೆ ?" ಎಂಬ ಪುಸ್ತಕವನ್ನು 1981ರ ಜೂನ್ ತಿಂಗಳಲ್ಲಿ ಪ್ರಕಟಿಸಿ ಸಾರ್ವಜನಿಕರಿಗೆ ಉಚಿತವಾಗಿ ಹಂಚಿದೆ.

ಧರ್ಮಿಷ್ಠರ ಮಾನ ಮತ್ತು ಪ್ರಾಣಗಳ ಮೇಲೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಬಹು ಕ್ರೂರವಾಗಿ ಚೆಲ್ಲಾಟವಾಡುವ ಮುನಿಯಾದ ವಿದ್ಯಾನಂದರ ಜೀವನ

ಮತ್ತು ದುಷ್ಕೃತ್ಯಗಳಿಗೆ ಸಂಬಂಧಿಸಿದಂತೆ ನಾನು ವಿಷಯ ಸಂಗ್ರಹಣೆ ಮತ್ತು ಸಾಕ್ಷ್ಯಾಧಾರಗಳ ಸಂಗ್ರಹಣೆಯನ್ನು ಮಾಡುವ ಕಾಲದಲ್ಲಿ ಅನೇಕ ಧರ್ಮಿಷ್ಟರು, ನ್ಯಾಯ ಪಕ್ಷಪಾತಿಗಳು ನನಗೆ ಬಹುವಿಧಗಳಲ್ಲಿ ನೆರವಾಗಿದ್ದಾರೆ. ಶೇಡಬಾಳ ಮತ್ತು ಹೊಂಬುಜಗಳಲ್ಲಿಯ ಅನೇಕ ಜನರು ಈ ವಿಚಾರದಲ್ಲಿ ನನಗೆ ವಿಶೇಷವಾಗಿ ನೆರವಾಗಿದ್ದಾರೆ. ಸತ್ಯವನ್ನು ಬೆಳಕಿಗೆ ತರುವ ಕಾರ್ಯದಲ್ಲಿ ಅವರೆಲ್ಲ ಮಾಡಿರುವ ಉಪಕಾರವನ್ನು ನಾನೆಂದಿಗೂ ಮರೆಯಲಾರೆ. ಏಲಾಚಾರ್ಯ ಪದಕ್ಕೆ ಸಂಬಂಧಿಸಿದಂತೆ ಈ ಪುಸ್ತಕದಲ್ಲಿ ಉಪಯೋಗಿಸಿಕೊಂಡಿರುವ ಅನೇಕ ಹಿಂದಿ ಲೇಖನಗಳನ್ನು ನನ್ನ ಆತ್ಮೀಯ ಮಿತ್ರರಾದ ಶ್ರೀ ವಿ. ಟಿ. ಚಂಚ, ಎಂ. ಎ. ರವರು ಕನ್ನಡಕ್ಕೆ ಅನುವಾದ ಮಾಡಿಕೊಟ್ಟು ಉಪಕರಿಸಿದ್ದಾರೆ. ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ 'ರಾಜೇಂದ್ರ ಪ್ರಿಂಟರ್ಸ್‌ನ' ಮಾಲೀಕರಿಗೆ ನನ್ನ ಅಭಿನಂದನೆಗಳು.

**ಬಿ. ಎಸ್. ನಂದಕುಮಾರ್**

ತಾ. 20-10-1982
ಭದ್ರಾವತಿ

# ಪರಿವಿಡಿ

# ಪ್ರವೇಶ

**ಗೃಹಸ್ಥೋ ಮೋಕ್ಷಮಾರ್ಗಸ್ಥೋ ನಿರ್ಮೋಹೋ ನೈವ ಮೋಹವಾನ್ ।**
**ಅನಗಾರೋ ಗೃಹೀ ಶ್ರೇಯಾನ್ ನಿರ್ಮೋಹೋ ಮೋಹಿನೋ ಮುನೇಃ ॥**

**—ಆಚಾರ್ಯ ಸಮಂತಭದ್ರ**

"ಮೋಹವಿಲ್ಲದ ಶ್ರಾವಕನು ಮೋಕ್ಷಮಾರ್ಗದಲ್ಲಿ ಸ್ಥಿರವಾಗಿರುತ್ತಾನೆ. ಆದರೆ ಮೋಹವುಳ್ಳವನು ಮುನಿಯಾಗಿದ್ದರೂ ಕೂಡ ಮೋಕ್ಷ ಮಾರ್ಗದಲ್ಲಿ ಸ್ಥಿರನಾಗಿರುವುದಿಲ್ಲ. ಅಂತಲೇ ಮೋಹವುಳ್ಳ ಮುನಿಗಿಂತ ಮೋಹವಿಲ್ಲದ ಗೃಹಸ್ಥನು, ಶ್ರಾವಕನು ಶ್ರೇಷ್ಠನಾಗಿರುತ್ತಾನೆ."

1981ರ ಜೂನ್ ತಿಂಗಳಲ್ಲಿ 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ' ಎಂಬ ಪುಸ್ತಕ ಪ್ರಕಟವಾದ ಮೇಲೆ ಅದನ್ನು ನಾನು ತಾ. 23-11-81ರಂದು ಅಧಿಕೃತವಾಗಿ ವಿದ್ಯಾನಂದಮುನಿಗಳಿಗೆ ರಿಜಿಸ್ಟರ್ಡ್ ಅಂಚೆಯ ಮೂಲಕ ಕಳುಹಿಸಿಕೊಟ್ಟೆ. ಅವರು ನನ್ನ ಹಿಂದಿನ ಎರಡು ರಿಜಿಸ್ಟರ್ಡ್ ಅಂಚೆಗಳನ್ನು ತಿರಸ್ಕರಿಸಿದಂತೆ ಈ ಪುಸ್ತಕವನ್ನು ಸಹ ನಿರಾಕರಿಸಿ ಅಂಚೆಯನ್ನು ಹಿಂದಕ್ಕೆ ಕಳುಹಿಸಿದರು.

ಸುಳ್ಳನ್ನು ಹೇಳುವುದರಲ್ಲಿ ವಿದ್ಯಾನಂದರಿಗಿರುವ ಸಾಮರ್ಥ್ಯ, ಸತ್ಯಸಂಧರ ಮೇಲೆ ಸುಳ್ಳು ಆಪಾದನೆ ಮಾಡುವ ಅವರ ಪಿಶುನತನ. ತಮ್ಮ ಸತ್ಕಾರ ಮೆರವಣಿಗೆಗಳಿಗೆ ಅಕ್ರಮಮಾರ್ಗದಿಂದ ಹಣ ಒದಗಿಸಲು ಒಪ್ಪದವರ ಮೇಲೆ ಅವರು ಜನರನ್ನೆತ್ತಿ ಕಟ್ಟಲು ಮಾಡಿದ ಎತೂರಿ ಒಳಸಂಚು—ಈ ಮುಂತಾದ ಧರ್ಮಬಾಹಿರ ಕೃತ್ಯಗಳನ್ನು ನನ್ನ ಪುಸ್ತಕವು ದಾಖಲೆಗಳ ಸಹಿತವಾಗಿ ರುಜುವಾತು ಪಡಿಸಿದೆ. ಜೊತೆಗೆ ವಿದ್ಯಾನಂದರನ್ನು ವಿದ್ಯಾನಂದರ ಇಚ್ಛೆಯಂತೆ ಕರ್ನಾಟಕಕ್ಕೆ ಕರೆತಂದವರಲ್ಲಿ ಒಬ್ಬರಾದ ಶ್ರವಣಬೆಳಗೊಳ ಜೈನಮಠದ ಚಾರುಕೀರ್ತಿಭಟ್ಟಾರಕ ಸ್ವಾಮಿಗಳು ವಂಚನೆಯ ಅಕ್ರಮ ವಿಧಾನಗಳಿಂದ ಸಾರ್ವಜನಿಕರ ಹಣವನ್ನು ಹಗಲುದರೋಡೆ ಮಾಡುತ್ತಿರುವುದನ್ನೂ ಸಹ ಪುಸ್ತಕವು ರುಜುವಾತುಪಡಿಸಿದೆ.

ಪುಸ್ತಕ ಪ್ರಕಟವಾದ ಮೇಲೆ ಜನಜಾಗೃತಿಯ ಉದ್ದೇಶದಿಂದ ಅದರ ಪ್ರಥಮ ಮುದ್ರಣದ ಪ್ರತಿಗಳನ್ನು ಉಚಿತವಾಗಿ ಹಂಚಲಾಯಿತು. ವಿಚಾರಶೀಲರಾದ ಓದುಗರಿಂದ ಪ್ರೋತ್ಸಾಹದಾಯಕ ಪ್ರತಿಕ್ರಿಯೆಗಳು ಬರಲಾರಂಭಿಸಿದುವು. ಅವುಗಳಲ್ಲಿ ಕೆಲವು ಅಭಿಪ್ರಾಯಗಳು ಹೀಗಿವೆ :

ತಾ 28–6–1981ರಂದು ಬೆಳಗಾಂ ಜಿಲ್ಲೆಯು ಶೇಡಬಾಳದವರೊಬ್ಬರು ಬರೆದ ಪತ್ರ ಸಾರಾಂಶ : "ತಾವು ಬರೆದ ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ ? ಎಂಬ ಪುಸ್ತಕವು ಬಂದು ಮುಟ್ಟಿತು. ಪುಸ್ತಕ ಕಳಿಸಿದ್ದ ಬಗ್ಗೆ ತಮಗೆ ಧನ್ಯವಾದಗಳು. ಜನ ಸಾಮಾನ್ಯರಿಗೆ ಯೋಗ್ಯಕಾಲಕ್ಕೆ ಸತ್ಯಾರ್ಥವನ್ನು ತಿಳಿಸಿದ ನಿಮ್ಮ ಸೇವೆ ಅಮೂಲ್ಯ ವಾದದ್ದು. ಕರ್ನಾಟಕದ ಪತ್ರಿಕೆಗಳಲ್ಲಿ ತಮ್ಮ ಲೇಖನ ಪ್ರಕಟಿಸಿದರೆ ಇನ್ನೂ ಜನ ಜಾಗ್ರತೆಗೆ ಹೆಚ್ಚು ಉಪಯೋಗವಾಗಬಹುದೆಂದು ನನ್ನ ತಿಳುವಳಿಕೆ ಇದೆ. ಧರ್ಮದ ಹೆಸರಿನಲ್ಲಿ ನಡೆಯುವ ಅವ್ಯವಹಾರಗಳನ್ನು ತಡೆಯಲಿಕ್ಕೆ ತಮ್ಮ ಕೃತಿ ಒಳ್ಳೇ ಉಪ ಯುಕ್ತವಾಗಿದೆ. ಅಂಧಶ್ರದ್ಧೆಯನ್ನು ಕಡಿಮೆಮಾಡುವ ಕೃತಿಯೇ ಒಳ್ಳೇ ಕೃತಿ ಎಂದು ನನ್ನ ತಿಳುವಳಿಕೆ."

ತಾ. 26–6–81ರಂದು ಶೇಡಬಾಳದ ಮಾಸ್ತರರೊಬ್ಬರು ಬರೆದ ಪತ್ರ :

"ತಾವು ಬರೆದ ಪುಸ್ತಕ ಪೂರ್ಣ ಓದಿರುವೆ. ಅದು ಒಳ್ಳೇ ಉದ್ದೇಶದಿಂದ ಬರೆದ ಹೊಸನಮೂನೆಯ ವಿಚಾರಶೀಲ ಪುಸ್ತಕ ಅವೆ ಈ ಬುಕ್‌ನ ಅವಶ್ಯಕತೆ ನಮಗೆ ಬಹಳ ಅದೆ. ಶ್ರೀವಿದ್ಯಾನಂದರು ಶೇಡಬಾಳದವರೇ ಇರುವರೆಂಬುದು ತಮಗೆ ಗೊತ್ತಿದ್ದ ವಿಷಯ. ಈ ಬುಕ್ ಬಹಳ ಜನರಿಗೆ ಓದಲು ಬೇಕಾಗಿದೆ. ಬೇರೆ ಯವರ ಪುಸ್ತಕ ಓದಿ ಕೊಟ್ಟಿರುವೆ. ನನ್ನ ಅಡ್ರೆಸ್ಸಿಗೆ ಒಂದು ಬುಕ್ ಕಳುಹಿಸಿಕೊಡಿ"

ತಾ. 31–7–81ರಂದು ಹಾಸನದವರೊಬ್ಬರು ಬರೆದ ಪತ್ರ :

"ಬೇರೊಬ್ಬರ ಹತ್ತಿರವಿದ್ದ ತಮ್ಮ ಪುಸ್ತಕವನ್ನು ಓದಿದೆ. ಇದು ಬಹಳ ಆಸಕ್ತಿಯನ್ನುಂಟು ಮಾಡುವ ಪುಸ್ತಕ."

ಓದುಗರಿಂದ ಈ ರೀತಿಯ ಅಭಿಪ್ರಾಯಗಳು ಬರುತ್ತಿರುವಾಗ ಇತ್ತ ತಮ್ಮ 14–7–1980ರ ಬೆಳ್ಳೂರು ಭಾಷಣದಲ್ಲಿ ಸಿ. ಬಿ. ಎಲ್. ಚಂದ್ರಯ್ಯ ಮತ್ತು ಎಸ್. ಪಿ. ಶಾಂತರಾಜ್‌ರವರ ವಿರುದ್ಧ ಸಮಾಜದ್ರೋಹ ಮೋಸ ದುರ್ವ್ಯವಹಾರಗಳ ಆಪಾದನೆ ಮಾಡಿ "ನಾನು ಅವರನ್ನು ಬಿಡೋಹಾಗಿಲ್ಲ ! ಕ್ಷಮಾ ಮಾಡೋದಾದರೂ ಕ್ಷಮೆ ಮಾಡೋದಿಲ್ಲ !" ಎಂದು ಗುಡುಗಿ ಮುನಿಧರ್ಮಕ್ಕೆ ವಿರುದ್ಧವಾಗಿ ವೀರಪ್ರತಿಜ್ಞೆ ಮಾಡಿದ್ದ ವಿದ್ಯಾನಂದರು ತಮ್ಮ ಚಾರಿತ್ರಹೀನತೆಗಾಗಿ ಸ್ವಲ್ಪವೂ ಪಶ್ಚಾತ್ತಾಪಪಡದೆ ಯಥಾಪ್ರಕಾರ ತಮ್ಮ ಪಾತಕಕೃತ್ಯಗಳನ್ನು ಮುಚ್ಚಿಟ್ಟು ತಮ್ಮ ಥಾಣಾಡಂಗುರ ಮೆರವಣಿಗೆಗಳಿಗಾಗಿ ಸಿದ್ಧರಾದರು.

ಇಪ್ಪತ್ತು ಡಿಸೆಂಬರ್ 1981ರಂದು ಅವರು ಶ್ರವಣಬೆಳಗೊಳವನ್ನು ಬಿಟ್ಟು ಧರ್ಮಸ್ಥಳದ ಕಡೆಗೆ ಹೊರಟರು. ತಾ. 25–12–1981ರಂದು ಹಾಸನದಲ್ಲಿ ಇವರ

ಮೆರವಣಿಗೆಯ ಏರ್ಪಾಟಾಯಿತು. ಈ ಸಂದರ್ಭದಲ್ಲಿ ನಾನು ವಿದ್ಯಾನಂದರ ನೀತಿ ಬಾಹಿರ ಕೃತ್ಯಗಳನ್ನು ಇನ್ನೂ ಮತ್ತು ಜನರ ಗಮನಕ್ಕೆ ತರುವ ಉದ್ದೇಶದಿಂದ ಹಾಸನ ದಿಂದ ಪ್ರಕಟವಾಗುವ ದಿನಪತ್ರಿಕೆಗಳಲ್ಲಿ ನನ್ನ ಪುಸ್ತಕದ ಜಾಹೀರಾತನ್ನು ಪ್ರಕಟಿಸಿದೆ. ತಾ. 24-12-81ರಿಂದ ಹಿಡಿದು ತಾ. 26-12-81ರವರೆಗೆ 'ಪ್ರತಿನಿಧಿ' 'ಜನತಾ ಮಾಧ್ಯಮ' ಮತ್ತು 'ಸುದ್ದಿಮಿತ್ರ' ದಿನಪತ್ರಿಕೆಗಳಲ್ಲಿ ಈ ಜಾಹೀರಾತು ಪ್ರಕಟ ವಾಯಿತು. ಈ ಜಾಹೀರಾತಿನಿಂದಾಗಿ ಹಾಸನ ಜಿಲ್ಲೆಯ ಅನೇಕ ಊರುಗಳಿಂದ ಪುಸ್ತಕಕ್ಕೆ ಕೋರಿಕೆಗಳು ಬಂದುವು. ಸಾಧ್ಯವಾದಷ್ಟು ಕೋರಿಕೆಗಳನ್ನು ಪೂರೈಸಿದೆ.

ವಿದ್ಯಾನಂದರು ಹಾಸನದಿಂದ ದಾರಿಯುದ್ದಕ್ಕೂ ಪ್ರಚಾರ ಮೆರವಣಿಗೆಗಳನ್ನು ಮಾಡಿಸಿಕೊಳ್ಳುತ್ತಾ ಮಂಗಳೂರು ಸೇರಿ ನಂತರ ಧರ್ಮಸ್ಥಳ ಸೇರಿ ಅನಂತರ ತಾ. 14-2-81ರಂದು ಮೂಡುಬಿದರೆಯನ್ನು ತಲುಪಿದರು. ಇವರು ಮೂಡು ಬಿದರೆಯಲ್ಲಿ ವಾಸ್ತವ್ಯ ಹೂಡಿದ ಕೆಲವು ದಿನಗಳಲ್ಲಿಯೇ ಇವರ ಕಪಟಾಚಾರಗಳನ್ನು ಚೆನ್ನಾಗಿ ತಿಳಿದುಕೊಂಡಿರುವ ಸತ್ಯಪ್ರಿಯರೂ, ನಿರ್ಭೀತರೂ ಆದಂತಹ ಪತ್ರಿಕಾಕರ್ತ ರಿಂದ ಇವರ ಮೇಲೆ ಲೇಖನದ ಧಾಳಿ ಪ್ರಾರಂಭವಾಯಿತು. ಕೆ. ಶಂಕರಭಟ್—ಇವರ ಸಂಪಾದಕತ್ವದಲ್ಲಿ ಮಹಾಲಕ್ಷ್ಮಿ ಪ್ರಿಂಟರ್ಸ್, ಗೋಳಿಕಟ್ಟೆ ಬಜಾರ್, ಮಂಗಳೂರು-1 ಈ ವಿಳಾಸದಲ್ಲಿ ಪ್ರಕಟವಾಗುವ ಅತ್ಯಧಿಕ ಪ್ರಸಾರದ 'ಅಮೃತ' ಎಂಬ ಕನ್ನಡ ವಾರ ಪತ್ರಿಕೆಯೊಂದು ತನ್ನ 28-2-1982ನೇ ತಾರೀಖಿನ ಸಂಚಿಕೆಯಲ್ಲಿ 'ಜಪ್ಪೋಲಗ' ವಿಭಾಗದಲ್ಲಿ 'ದಿಗಂಬರಮುನಿ ವಿಲಾಚಾರ್ಯ' ಎಂಬ ಲೇಖನವನ್ನೂ, ಅದರ ಮುಂದಿನ ತಾ. 7-3-82ರ ಸಂಚಿಕೆಯಲ್ಲಿ 'ದಿಗಂಬರ ಮುನಿಯ ಅಪ್ಪಟಬಣ್ಣ ಬಟ್ಟಂಬಯಲು' ಎಂಬ ಲೇಖನವನ್ನೂ ವಿಡಂಬನಾತ್ಮಕವಾಗಿ ಪ್ರಕಟಿಸಿತು.

ಈ ಲೇಖನಗಳು ವಿದ್ಯಾನಂದರು ತಮ್ಮ ಹಿಂದಿನ ಜೀವನದಲ್ಲಿ ಮಾಡಿದ್ದಾರೆನ್ನ ಲಾದ ವ್ಯಭಿಚಾರ, ಕೊಲೆ, ವಂಚನೆ ಮುಂತಾದ ದುಷ್ಕೃತ್ಯಗಳನ್ನು ನೇರವಾಗಿ ಪ್ರಸ್ತಾಪಿಸಿ ಮುನಿಯಾದ ಮೇಲೂ ಅವರು ದುಷ್ಕೃತ್ಯಗಳನ್ನು ಮಾಡಿದ್ದರ ಬಗ್ಗೆ ಮಾಹಿತಿಯೊದಗಿಸುತ್ತವೆ. ಈ ಲೇಖನಗಳು ಪ್ರಕಟವಾದ ನಾಲ್ಕಾರು ದಿನಗಳಲ್ಲಿಯೇ ಅಂದರೆ ತಾ. 10-3-1982ರ ರಾತ್ರಿ ಮೂಡಬಿದರೆಯ ಏಳುಜನ ದುಷ್ಕರ್ಮಿಗಳು ಪತ್ರಿಕೆಯ ಸಂಪಾದಕರಾದ ಕೆ. ಶಂಕರಭಟ್ಟರು ಮತ್ತು ಉಪಸಂಪಾದಕರಾದ ಹರಿಶ್ಚಂದ್ರ ಹೆಗ್ಡೆಯವರ ಮೇಲೆ, ಮೂಡಬಿದರೆ-ಮಂಗಳೂರು ರಸ್ತೆಯ ಎಡಪ್ದಾರುಕ್ರಾಸ್ ಬಳಿ ರಾತ್ರಿ 10 ಗಂಟೆಯ ಸಮಯದಲ್ಲಿ ಮಾರಕ ಆಯುಧಗಳಿಂದ ಹಲ್ಲೆ ನಡೆಸಿದರು. ಆ ಸಂದರ್ಭದಲ್ಲಿ ತಮ್ಮ ಸಿಬ್ಬಂದಿ ಜೊತೆ ದೈವವಶಾತ್ ಆ ಮಾರ್ಗದಲ್ಲಿ ಬಂದ ಬಜ್ಪೆಯ ಸಬ್‌ಇನ್ಸ್‌ಪೆಕ್ಟರ್ ಹೆಚ್. ಡಿ. ಮೆಂಡೋನ್ಸರವರು ಆರು ಜನ ದುಷ್ಕರ್ಮಿಗಳನ್ನು ಬಂಧಿಸಿ ಹಲ್ಲೆಗೆ ಬಳಸಲಾದ ಕಾರು, ರಿಕ್ಷ ಹಾಗೂ ಆಯುಧಗಳನ್ನು ವಶಪಡಿಸಿ

ಕೊಂಡರು. ಈ ಹಲ್ಲೆಯ ಪ್ರಕರಣ ಕರ್ನಾಟಕದ 'ಪ್ರಜಾವಾಣಿ' ಮತ್ತು 'ಕನ್ನಡಪ್ರಭ ದಿನಪತ್ರಿಕೆಗಳಲ್ಲಿ ವರದಿಯಾಯಿತು. 'ಅಮೃತ' ಪತ್ರಿಕೆ ಇದನ್ನು ''ಚಾರುಕೀರ್ತಿ ಛೂ ಬಿಟ್ಟ ಗೂಂಡಾಗಳು ಪೋಲೀಸರ ಬಲೆಯಲ್ಲಿ! ಒಜ್ಜೆ ಎಸ್. ಐ. ಹೆಚ್. ಡಿ. ಮೆಂಡೋನ್ಸರ ಅದಮ್ಯ ಸಾಹಸ'' ಎಂದು ತನ್ನ 21–3–82ರ ಸಂಚಿಕೆಯಲ್ಲಿ ವರದಿ ಮಾಡಿತು. ಮತ್ತೆ ತಾ 11–4–82ರ ಸಂಚಿಕೆಯಲ್ಲಿ 'ಕರಟಕ–ದಮನಕ ಚಾರುಕೀರ್ತಿ ಏಲಾಚಾರ್ಯ' ಎಂಬ ಲೇಖನವನ್ನು ಪ್ರಕಟಪಡಿಸಿ ವಿದ್ಯಾನಂದರು ಮಾಡಿದ್ದಾರೆನ್ನಲಾದ ಮತ್ತಷ್ಟು ದುಷ್ಕೃತ್ಯಗಳನ್ನು ಬಯಲಿಗೆಳೆಯಿತು.

1980ರ ಏಪ್ರಿಲ್ ತಿಂಗಳಿನಲ್ಲಿ ಕರ್ನಾಟಕವನ್ನು ಪ್ರವೇಶಿಸಿದ ಈ ಮುನಿಗಳು ತಾವು ದೀಕ್ಷಾಬದ್ಧರೆಂಬುದನ್ನೂ ಲೆಕ್ಕಿಸದೆ ಸಮಾಜದ ಜನರನ್ನು ಬಹಿರಂಗ ಸಭೆಯಲ್ಲಿ ಹೀನಾಯವಾಗಿ ಅಂದು ಆಡಿದ ಸಂದರ್ಭದಲ್ಲಿ, ವಿದ್ಯಾನಂದರನ್ನು ಕರ್ನಾಟಕಕ್ಕೆ ಕರೆಸಿದ ಕೆಲವು ಜನರು ಈ ವಿಲಕ್ಷಣ ಮುನಿಗಳ ಹುಚ್ಚು ಮಾತುಗಳಿಗೆ ಆಗಲೇ ಕಡಿವಾಣಹಾಕದೆ ತೆಪ್ಪಗಿದ್ದರು. ಮುಂದೆಲ್ಲಾ ವಿದ್ಯಾನಂದರ ನಾಲಿಗೆ ಒಮ್ಮೆ ಸಿಡಿಲವಾಗಿ ಹರಿದಾಗಲೂ ಇವರು ಗಾಢ ನಿದ್ರಾವಸ್ಥೆಯಲ್ಲಿದ್ದರು. 'ಅಮೃತ' ವಾರಪತ್ರಿಕೆಯಲ್ಲಿ ವಿದ್ಯಾನಂದರ ವಿರುದ್ಧವಾಗಿ ತೀವ್ರತರ ಆಪಾದನೆಗಳು ಬಂದಾಗಲೂ ಸಹ ಈ ವ್ಯವಸ್ಥಾಪಕರು ಯಾವ ಸ್ಪಷ್ಟೀಕರಣಗಳನ್ನೂ ನೀಡದೆ ಚಿರಂತನವಾದ ಮೌನಕ್ಕೆ ಶರಣಾಗತರಾದರು.

ನನ್ನ ಪುಸ್ತಕ ಪ್ರಕಟವಾದ ಸಮಯದಲ್ಲಿ ಕೆಲವರು ಜೈನಶಾಸ್ತ್ರದ 'ಉಪಗೂಹನ ಅಂಗ'ದ ವಿಚಾರ ಹೇಳಿ ''ವಿದ್ಯಾನಂದರ ದೋಷಗಳನ್ನು ಬಯಲಿಗೆಳೆಯಬೇಡಿ. ಸಮಾಜದ ಹಿತದೃಷ್ಟಿಯಿಂದ ಸ್ವಧರ್ಮೀಯರ ದೋಷಗಳನ್ನು ಬಹಿರಂಗಪಡಿಸಬಾರದು'' ಎಂದು ಸಲಹೆ ನೀಡಿದರು. ಈ ಸಲಹೆಯೇ ಎಷ್ಟು ದೋಷಪೂರ್ಣವಾಗಿದೆಯೆಂದರೆ ಉಪಗೂಹನ ಅಂಗದ ನಿಜವಾದ ಅರ್ಥವನ್ನೇ ಅವರು ಗ್ರಹಿಸಿದಂತಿಲ್ಲ. 'ರತ್ನ–ಕರಂಡಕ ಶ್ರಾವಕಾಚಾರ'ವನ್ನು ಬರೆದ ಸಮಂತಭದ್ರಾಚಾರ್ಯರು ''ಸ್ವತಃ ಶುದ್ಧ ಮೋಕ್ಷಮಾರ್ಗದಲ್ಲಿ ಅಜ್ಞಾನಿಗಳೂ ಮತ್ತು ಅಶಕ್ತರೂ ಆದ ಜನರ ಆಚರಣೆಯಿಂದ ಆಗುವ ನಿಂದೆಯನ್ನು ಯಾವುದು ದೂರಮಾಡುವುದೋ ಅದು ಉಪಗೂಹನ'' ಎಂದು ಹೇಳುತ್ತಾರೆ. ಈ ಮಾತುಗಳ ಅರ್ಥವಿವರಣೆಯನ್ನು ಟೀಕಾಚಾರ್ಯರು ಹೀಗೆ ಮಾಡಿದ್ದಾರೆ :

''ಇಲ್ಲಿ ಎರಡು ಮಾತುಗಳನ್ನು ನಾವು ಮುಖ್ಯವಾಗಿ ಗಮನಿಸಬೇಕು. ಮೊದಲನೆಯದು, ನಿಂದೆಗೆ ಒಳಗಾದ ಧರ್ಮಮಾರ್ಗವು ಸ್ವತಃ ಶುದ್ಧವಾಗಿರಬೇಕು, ಅಶುದ್ಧವಾಗಿರಕೂಡದು. ವಸ್ತುತಃ ಅಶುದ್ಧವಿರುವ ಧರ್ಮಮಾರ್ಗದ ನಿಂದೆಯನ್ನು ಪರಿಮಾರ್ಜನ ಮಾಡುವ ಅವಶ್ಯಕತೆಯೇ ಇಲ್ಲಿ ಇಲ್ಲ. ಎಂಥ ದೊಡ್ಡ ಸಂತನಿರಲಿ,

ಸಾಧುವಿರಲಿ ಅವನು ಆಚರಿಸುವ ಧರ್ಮಮಾರ್ಗದ ಶುದ್ಧತೆಯನ್ನು ನೋಡುವುದು ಮೊದಲ ಕರ್ತವ್ಯವಾಗಿದೆ. ಎರಡನೆಯದು, ನಿಂದೆಯು ಅಜ್ಞಾನಿ ಹಾಗೂ ಅಶಕ್ತ ಜನರ ಆಶ್ರಯವನ್ನು ಹೊಂದಿ ಹಬ್ಬಿರಬೇಕು. ಶುದ್ಧ ಮಾರ್ಗವನ್ನು ಅನುಸರಿಸದ ಧೂರ್ತರು ತಿಳಿದೂ ತಿಳಿದು ನಿಂದೆಯನ್ನು ಆರಂಭಿಸಿದ್ದರೆ ಅದರ ಪರಿಮಾರ್ಜನೆ (ದೂರವಮಾಡುವುದು)ಯ ಸಂಬಂಧವೂ ಇಲ್ಲಿ ಇಲ್ಲ. ಶುದ್ಧಮಾರ್ಗದಲ್ಲಿ ನಡೆಯುವ ವರಂತೆ ಸೋಗುಹಾಕಿದವರನ್ನು ನಾವು ಹೆದರಿ ಹಾಗೆಯೇ ಬಿಡಕೂಡದು. ಅವರನ್ನು ಪ್ರೋತ್ಸಾಹಿಸಕೂಡದು. ಅವರ ಆಚರಣೆಯು ಧರ್ಮದ ದೋಷವಲ್ಲ. ಆಯಾ ವ್ಯಕ್ತಿಗಳ ದೋಷದಿಂದ ಉಂಟಾಗಿರುತ್ತದೆ. ಆದರಿಂದ ಅದನ್ನು ಬಯಲಿಗೆ ಎಳೆಯಲಿಕ್ಕೇಬೇಕು. ಅಲ್ಲದೆ ಸಾಮಾನ್ಯ ಜನರಿಗೆ 'ಅವರು ಯೋಗ್ಯಧರ್ಮಮಾರ್ಗದ ಅನುಯಾಯಿಗಳಲ್ಲ, ಕಪಟವೇಷಿಗಳಿದ್ದಾರೆ' ಎಂಬುದನ್ನು ಸ್ಪಷ್ಟಗೊಳಿಸಬೇಕು ಇದರಿಂದ ಸಮ್ಯಗ್ದರ್ಶನದ ಈ ಅಂಗದಲ್ಲಿ ಏನೂ ಬಾಧೆಯುಂಟಾಗದು''[1]

ಉಪಗೂಹನಾಂಗದ ಮಾತುಗಳನ್ನು ವಿದ್ಯಾನಂದರಿಗೆ ಅನ್ವಯಿಸುವುದಾದರೆ ಅವರೇನೂ ಅಜ್ಞಾನಿಗಳಲ್ಲ ಅಥವಾ ಅಶಕ್ತರಲ್ಲ. ಒಂದು ಪಕ್ಷ ಅಜ್ಞಾನ ಅಶಕ್ತತೆ ಗಳಿಂದೇನಾದರೂ ಅವರು ಮುನಿ ಧರ್ಮಕ್ಕೆ ವಿರುದ್ಧವಾಗಿ ನಡೆದುಕೊಂಡಿದ್ದರೆ ನಾನು ಅವರ ದೋಷಗಳಿಗೆ ಕನ್ನಡಿ ಹಿಡಿದಾಗ ಅವರು ತಮ್ಮ ತಪ್ಪುಗಳಿಗಾಗಿ ಸೂಕ್ತವಾದ ಪಶ್ಚಾತ್ತಾಪವನ್ನು ವ್ಯಕ್ತಪಡಿಸಬೇಕಿತ್ತು. ಆದರೆ ಹೀಗೇನೂ ಅವರು ನಡೆದುಕೊಂಡಿಲ್ಲ. ಪರಿಸ್ಥಿತಿ ಹೀಗಿರುವಾಗ ವಿದ್ಯಾನಂದರನ್ನು ಕಪಟಮುನಿಗಳೆನ್ನದೇ ಇರಲು ಹೇಗೆ ಸಾಧ್ಯ?

ಸಮಂತಭದ್ರಾಚಾರ್ಯರು ತಮ್ಮ ಗ್ರಂಥದ ದರ್ಶನಾಧಿಕಾರ ವಿಭಾಗದಲ್ಲಿ ಮೂರು ಮೂಢತೆಗಳ ಪ್ರಸ್ತಾಪಮಾಡಿ ಗುರು ಮೂಢತೆಯ ಬಗೆಗೆ ಗಮನ ಸೆಳೆ ಯುತ್ತಾರೆ: ''ಪರಿಗ್ರಹ, ಆರಂಭ ಮತ್ತು ಹಿಂಸೆಗಳಿಂದ ಕೂಡಿದ ಸಂಸಾರವೆಂಬ ತಿರುಗಣಿಯಲ್ಲಿ ಸುತ್ತುತ್ತಿರುವಂಥ ಪಾಖಂಡೀ ಸಾಧುವಿನ ಪೂಜೆ, ಆದರ ಸತ್ಕಾರ ಗಳನ್ನು ಮಾಡುವುದು ಪಾಖಂಡೀ ಮೂಢತೆ ಎಂದು ತಿಳಿಯುವುದು'' (ಶ್ಲೋಕ 24) ಈ ಮಾತುಗಳಿಗೆ ವ್ಯಾಖ್ಯಾನಕಾರರು : ಜಿನಧರ್ಮದಲ್ಲಿ ಶ್ರದ್ಧೆಯೂ ಜ್ಞಾನವೂ ಮೂಲದಲ್ಲಿ ಇಲ್ಲದ ಅನೇಕ ಜನ ವೇಷಧಾರಿ ಸಾಧುಗಳು ಇರುತ್ತಾರೆ. ಅವರು ತಮ್ಮಷ್ಟಕ್ಕೆ ತಾವು ಶ್ರೇಷ್ಠರೆಂದು ತಿಳಿಯುತ್ತಾರೆ. ಜಗತ್ತಿನಲ್ಲಿ ಜನರ ಕಡೆಯಿಂದ ತಮಗೆ ಆದರ ಸತ್ಕಾರಗಳು ಆಗಬೇಕೆಂದು ಇಚ್ಛಿಸುತ್ತಾರೆ. ಇಂದ್ರಿಯಗಳ

---

1. ರತ್ನಕರಂಡಕ ಶ್ರಾವಕಾಚಾರ— ಪುಟ 52. ಪ್ರಕಾಶಕರು: ಗುಲಾಬಚಂದ ಹೀರಾಚಂದ ದೋಷೀ. ಜೈನ ಸಂಸ್ಕೃತಿ ಸಂರಕ್ಷಕ ಸಂಘ. ಸೋಲ್ಲಾಪುರ.

ವಿಷಯದ ಮೇಲೆ ಪ್ರೀತಿಯನ್ನಿಡುವಂಥ ಸಂಸಾರಿಗಳೂ, ಅಸಂಯಮಿಗಳೂ ಅಜ್ಞಾನಿಗಳೂ ಆದಂಥ ಜನರ ಕೂಡ ಹರಟೆ ಹೊಡೆಯುವುದರಲ್ಲಿ ತಮ್ಮ ದೊಡ್ಡಸ್ತಿಕೆಯನ್ನು ಅಭಿಮಾನವನ್ನು ಪ್ರದರ್ಶಿಸುತ್ತಾರೆ. ತಮ್ಮಷ್ಟಕ್ಕೆ ತಾವೇ ಆಚಾರ್ಯರೆಂದೂ ಪೂಜ್ಯ ಸಾಧುಗಳೆಂದೂ ಅನ್ನಿಸಿಕೊಳ್ಳುತ್ತಾರೆ. ಇವರು ಅಲ್ಲಸಲ್ಲದ ಕಥೆಗಳನ್ನು ಹೇಳುತ್ತಾರೆ. ವಿಷಯಗಳನ್ನು ಸೇವಿಸುತ್ತಾರೆ. ಮಂತ್ರತಂತ್ರ, ಜಪ, ಹೋಮ, ಮಾರಣ, ಉಚ್ಚಾಟಣ, ವಶೀಕರಣಗಳಂಥ ನಿಂದ್ಯ ಆಚರಣೆಯನ್ನು ಇಟ್ಟುಕೊಳ್ಳುವರು. ಅದರಲ್ಲಿ ತತ್ಪರರೂ ಇರುತ್ತಾರೆ. ಇವರೆಲ್ಲಾ ನಿಜವಾದ ಸಾಧುಗಳಲ್ಲ ಇಂಥ ಜನರ ಮಾತಿನ ಮೇಲೆ ವಿಶ್ವಾಸವಿಡುವುದು, ಅವರ ಸತ್ಕಾರ ಮಾಡುವುದು, ಅವರು ಹೇಳಿದ ಧರ್ಮಕಾರ್ಯವು ಶ್ರೇಷ್ಠವೆಂದು ತಿಳಿಯುವುದು ಇವೆಲ್ಲಾ ಪಾಖಂಡೀ ಮೂಢತೆ ಎನಿಸುತ್ತವೆ''[2]

ರಾಗ, ದ್ವೇಷ, ಕ್ರೋಧ, ಮಾಯಾ, ಲೋಭ ಮುಂತಾದ ಅಂತರಂಗ ಪರಿಗ್ರಹಗಳನ್ನೂ, ಇದೇ ರೀತಿ ಕ್ಷೇತ್ರ, ವಾಸ್ತು, ಧನ, ದಾಸ, ಮೊದಲಾದ ಬಾಹ್ಯ ಪರಿಗ್ರಹಗಳನ್ನು ಈಗಲೂ ಹೊಂದಿರುವ ವಿದ್ಯಾನಂದ ಮುನಿಗಳಿಗೆ ಮೇಲಿನ ಪಾಖಂಡೀ ಗುರುವಿನ ಲಕ್ಷಣಗಳೆಲ್ಲಾ ಸಂಶಯಕ್ಕೆ ಅವಕಾಶವಿಲ್ಲದಂತೆ ಬಹಳ ಚೆನ್ನಾಗಿ ಒಪ್ಪುತ್ತವೆ. ಜೈನಮುನಿಗಳಿಗಿರಲೇಬೇಕಾದ ಭಾವಶುದ್ಧಿ, ಕಾಯಶುದ್ಧಿ, ವಿನಯಶುದ್ಧಿ, ಈರ್ಯಾಪಥ ಶುದ್ಧಿ, ಭಿಕ್ಷಾಶುದ್ಧಿ ಪ್ರತಿಷ್ಠಾಪನಾ ಶುದ್ಧಿ, ಶಯನಾಸನ ಶುದ್ಧಿ, ವಾಕ್ಯಶುದ್ಧಿ —ಈ ಅಷ್ಟ ಶುದ್ಧಿಗಳಲ್ಲಿ ಯಾವುದೂ ಇಲ್ಲದ ವಿದ್ಯಾನಂದ ಮುನಿಗಳ ಆಷಾಢಭೂತಿತನವನ್ನು ಬಯಲಿಗೆಳೆಯದೆ ಸಹಿಸಿಕೊಂಡು ಸುಮ್ಮನಿರುವುದಾದರೂ ಹೇಗೆ ಸಾಧ್ಯ? ಜಿನವಾಣಿಯ ತತ್ವಗಳು ಕಪಟಾಚರಣೆಗಳಿಗೆ ರಕ್ಷಣೆ ಕೊಡಲು ಎಂದಿಗೂ ಸಾಧ್ಯವಿಲ್ಲ. ಒಂದು ಅರ್ಥದಲ್ಲಿ ಚಿರಂತನವಾದ ಧರ್ಮತತ್ವಗಳೇ ಸೋಗಿನ ಸಂನ್ಯಾಸಿಗಳನ್ನು ಬಯಲಿಗೆಳೆಯುತ್ತವೆ. ಕಪಟತನವನ್ನು ಕಂಡು ರೋಸಿ ಸಾಹಸದಿಂದ ಅವರನ್ನು ಬಯಲಿಗೆಳೆಯುವವರು ಕೇವಲ ನಿಮಿತ್ತಮಾತ್ರರಾಗಿ ಆ ಧರ್ಮತತ್ವಗಳ ಜೀವಂತ ಸಾಧನವಾಗಿ ಕಾರ್ಯನಿರ್ವಹಿಸುತ್ತಾರೆ

ಯಾವ ಗ್ರಂಥ (ಗಂಟು)ದ ತೊಡಕೂ ಇಲ್ಲವೆ ನಿರ್ಗ್ರಂಥರಾಗಬೇಕಾಗಿದ್ದ ವಿದ್ಯಾನಂದರು ಸಮುದ್ರದಷ್ಟು ಮಾತನಾಡುತ್ತಾ ಸಾಸಿವೆಯಷ್ಟೂ ಆಚರಿಸದೆ ಬಗೆ ಬಗೆಯ ಪರಿಗ್ರಹಗಳ ಗಂಟುಗಳಲ್ಲಿ ಸಿಲುಕಿಕೊಂಡಿರುವುದನ್ನು ಗಮನಿಸುತ್ತಾ ಹೋದಂತೆ ಇವರ ಪೂರ್ವಚರಿತ್ರೆಯನ್ನು ತಿಳಿದುಕೊಳ್ಳುವ ಕುತೂಹಲ ನನ್ನಲ್ಲಿ ಹೆಚ್ಚಾಗುತ್ತಾ ಹೋಯಿತು ದಿಗಂಬರರಾಗಿದ್ದುಕೊಂಡು ಇವರು ಸಾಕಷ್ಟು ಕೌರ್ಯವನ್ನು ತೋರಿ

---

2 ರತ್ನಕರಂಡಕ ಶ್ರಾವಕಾಚಾರ—ಪುಟ 76-77

ರುವಾಗ ಇನ್ನು ಕ್ಷುಲ್ಲಕಸನ್ಯಾಸಿಯಾಗಿ, ಗೃಹಸ್ಥರಾಗಿ, ಬಾಲಕನಾಗಿ ಏನೇನು ಸಾಹಸ ಗಳನ್ನು ಮಾಡಿ ಯಾರು ಯಾರಿಗೆ ಹಿಂಸೆಯಂ ಮೋಕ್ಷವನ್ನು ಕರುಣಿಸಿರಲಿಕ್ಕಿಲ್ಲ ಎಂಬ ಯೋಚನೆ ನನ್ನನ್ನು ಕಾಡಿತು. ಇವರ ಜೀವನ ರಹಸ್ಯಗಳನ್ನು ಪತ್ತೆ ಮಾಡುವ ದೃಢ ನಿರ್ಧಾರವನ್ನು ನಾನು ಮಾಡಿದೆ.

ಈ ನಿರ್ಧಾರಕ್ಕೆ ಅನುಗುಣವಾಗಿ ನಾನು ವಿದ್ಯಾನಂದರ ನಿಜವಾದ ಜೀವನಕ್ಕೆ ಸಂಬಂಧಿಸಿದಂತೆ ವಿಷಯ ಸಂಗ್ರಹ ಮಾಡಲು ಕೋಥಳಿ, ಶೇಡಬಾಳ, ಸಾಂಗ್ಲಿ, ಮೀರಜ್, ಬೆಳಗಾಂ ಮುಂತಾದ ಊರುಗಳಿಗೆ ಪದೇ ಪದೇ ಭೇಟಿ ನೀಡಿದೆ. ವಿಶೇಷ ವಾಗಿ ಶೇಡಬಾಳದಲ್ಲಿ ಅನೇಕ ಮೂಲಗಳಿಂದ ವಿಷಯ ಸಂಗ್ರಹ ಮಾಡಿದೆ. ವಿದ್ಯಾ ನಂದರು ಹೊಂಬುಜದಲ್ಲಿ ನಾಲ್ಕೈದು ವರ್ಷಗಳ ಕಾಲ ವಾಸವಾಗಿದ್ದುದರಿಂದ ಅಲ್ಲಿಗೆ ಅನೇಕ ಬಾರಿ ಭೇಟಿನೀಡಿ ಸಾಕಷ್ಟು ಮಾಹಿತಿ ಸಂಗ್ರಹಿಸಿದೆ. ವಿದ್ಯಾನಂದರು 17 ವರ್ಷಗಳ ಕಾಲ ದೆಹಲಿಯ ಸುತ್ತಮುತ್ತಲ ಪ್ರದೇಶಗಳಲ್ಲಿ ಪ್ರಧಾನವಾಗಿ ವಾಸಮಾಡಿ ದುದರಿಂದ ಆ ಮೂಲಗಳಿಂದಲೂ ಸಾಧ್ಯವಾದಷ್ಟು ವಿಷಯಸಂಗ್ರಹ ಮಾಡಿದೆ. ಇಷ್ಟಲ್ಲದೆ ವಿದ್ಯಾನಂದರ ಹಿಂಬಾಲಕರಾಗಿ ಅವರ ಜೊತೆಯಲ್ಲಿ ಹಿಂದೆ ಇದ್ದ ಕೆಲವ ರಿಂದಲೂ, ಮತ್ತು ಈಗ ಅವರೊಂದಿಗಿರುವ ಕೆಲವರಿಂದಲೂ ಮಾಹಿತಿಗಳನ್ನು ಸಂಗ್ರಹಿ ಸಿದೆ.

ಹೀಗೆ ವಿದ್ಯಾನಂದರ ತೆರೆಮರೆಯ ಜೀವನಕ್ಕೆ ಸಂಬಂಧಿಸಿದಂತೆ ಸಂಗ್ರಹಿಸಿದ ವಿಷಯಗಳ ಆಧಾರದಿಂದ ರಚಿಸಿದ ಅವರ ಜೀವನಚಿತ್ರ ಮುಂದಿದೆ. ಈ ಬಗೆಯ ಬರವಣಿಗೆಯ ಪ್ರಕಾರವನ್ನು ನಾನು ಸತ್ಯಶೋಧನಾತ್ಮಕ ಜೀವನಚರಿತ್ರ ಎಂದು ಕರೆದಿ ದ್ದೇನೆ.

ಬಿ. ಎಸ್. ನಂದಕುಮಾರ್

## ಅಧ್ಯಾಯ : ಒಂದು

# ಶಿಕ್ಷಣಹೀನ ಬಾಲ್ಯ

ಬೆಳಗಾವಿ ಜಿಲ್ಲೆಯ ಶೇಡಬಾಳ ಗ್ರಾಮದಲ್ಲಿ ಶಾಂತಿನಾಥ ತೀರ್ಥಂಕರರ ಜಿನ ಬಸತಿಯಿದೆ. ಶ್ರೀ ಕಾಳಪ್ಪ ಉಪಾಧ್ಯೆಯವರು ಇದರ ಪುರೋಹಿತರು. ಇವರ ಪತ್ನಿ ಸರಸ್ವತಿಬಾಯಿ. ಈ ದಂಪತಿಗಳಿಗೆ ಆರು ಜನ ಮಕ್ಕಳು. ಇವರಲ್ಲಿ ಹಿರಿಯ ಮಗನಾದ ಸುರೇಂದ್ರ, ತಾ. 22-4-1925ರಲ್ಲಿ ಕೊಲ್ಲಾಪುರ ಜಿಲ್ಲೆಯ ಥಾನವಾಡ ಎಂಬ ಊರಿನಲ್ಲಿ ಹುಟ್ಟಿದನು. ಸರಸ್ವತಿಬಾಯಿಗೆ ಮತ್ತೆ ಮತ್ತೆ ಮಕ್ಕಳಾದ್ದರಿಂದ ಅವರು ಸುರೇಂದ್ರನ ಪೋಷಣೆಯ ಕಡೆಗೆ ಹೆಚ್ಚು ಗಮನ ಕೊಡಲಾಗಲಿಲ್ಲ. ಸುರೇಂದ್ರನ ತಾಯಿಯ ತಾಯಿಯ ಮನೆಯವರು ಈ ಮಗುವಿನ ಆರೈಕೆಯ ಕಡೆ ಗಮನ ಹರಿಸಿದರು. ಅಜ್ಜಿಯ ಊರಾದ ಗಿಜವಣೆ[1]ಯಲ್ಲಿ ಸುರೇಂದ್ರನನ್ನು ಪ್ರಾಥಮಿಕ ಶಾಲೆಯ ಮೊದಲನೆ ತರಗತಿಗೆ ಸೇರಿಸಿದರು. ಶಾಲಾಜೀವನದ ಮೊದಲ ವರ್ಷವನ್ನು ಮುಗಿಸಿದ ಸುರೇಂದ್ರ ಗಿಜವಣೆಯನ್ನು ಬಿಟ್ಟು ಥಾನವಾಡ ಸೇರಿದನು. ಕೆಲಕಾಲದ ನಂತರ ತಂದೆ ತಾಯಿಗಳು ಅವನನ್ನು ಮತ್ತೆ ಶೇಡಬಾಳಕ್ಕೆ ಕರೆಸಿಕೊಂಡರು.

ಅಥಣಿ ತಾಲ್ಲೂಕಿನ ಶೇಡಬಾಳದಲ್ಲಿ ಆರುನೂರಕ್ಕೂ ಹೆಚ್ಚು ಜೈನಗೃಹಸ್ಥರ ಮನೆಗಳಿವೆ. ವಿಧವಾವಿವಾಹಕ್ಕೆ ಬೇರೆಡೆಯಲ್ಲಿ ಪ್ರೋತ್ಸಾಹವಿರುವಂತೆ ಈ ಊರಿನಲ್ಲಿ ಇರಲಿಲ್ಲ. ಈ ನಡವಳಿಕೆಯಿಂದ ಆಕರ್ಷಿತರಾದ ಸಂಪ್ರದಾಯವಾದಿಗಳಾದ ಕೆಲವರು 1922ರಲ್ಲಿ ಈ ಊರಿನಲ್ಲಿ 'ರತ್ನತ್ರಯಧರ್ಮ ಸಂವರ್ಧಕ ಪಾಠಶಾಲ' ಎಂಬ ಜೈನ ತತ್ವಗಳ ಅಧ್ಯಯನ ಕೇಂದ್ರವೊಂದನ್ನು ಪ್ರಾರಂಭಿಸಿದರು. 1923ರಲ್ಲಿ 'ಅಖಿಲ ಭಾರತವರ್ಷೀಯ ದಿಗಂಬರ ಜೈನ ಶಾಸ್ತ್ರಿ ಪರಿಷತ್'ನ ಸಭೆ ನೇಮಿಸಾಗರಸ್ವಾಮಿಗಳ ಅಧ್ಯಕ್ಷತೆಯಲ್ಲಿ ಇಲ್ಲಿ ನಡೆಯಿತು. 1924ರ ಡಿಸೆಂಬರ್ ತಿಂಗಳಿನಲ್ಲಿ 'ಭಾರತವರ್ಷೀಯ ದಿಗಂಬರ ಜೈನ ಮಹಾಸಭೆ'ಯ ಸಮ್ಮೇಳನವೂ ಇಲ್ಲಿ ನಡೆಯಿತು. ಮುಂದೆ 1927 ರಲ್ಲಿ ಆಚಾರ್ಯ ಶಾಂತಿಸಾಗರರ ಹೆಸರಿನಲ್ಲಿ 'ಶಾಂತಿಸಾಗರ ದಿಗಂಬರ ಜೈನ ಅನಾಥ ಛಾತ್ರಾಶ್ರಮ' ಎಂಬ ಒಂದು ಆಶ್ರಮವಾಸದ ಶಿಕ್ಷಣಕೇಂದ್ರವನ್ನು ಶೇಡಬಾಳದಲ್ಲಿ ಸ್ಥಾಪಿಸಲಾಯಿತು. ಇದರ ಆಡಳಿತವನ್ನು ಒಂದು ಟ್ರಸ್ಟ್ ನಡೆಸುತ್ತಿದೆ. ಸಾಂಗ್ಲಿಯ ಶ್ರೀ ರಾಮಚಂದ್ರ ದಾವಜಿ ದಾವಡಾ ಎಂಬುವವರು ಈ ಟ್ರಸ್ಟಿನ ಸ್ಥಾಪಕ ಮಹಾಮಂತ್ರಿಗಳು. ಕಾಲಕಾಲಕ್ಕೆ ಈ ಆಶ್ರಮದಲ್ಲಿ ಚತುರ್ವಿಂಶತಿ ತೀರ್ಥಂಕರರ ಬಸದಿ, ಮಾನಸ್ತಂಭ, ಸಭಾಗೃಹ, ಗೋಮಟೇಶ್ವರ ವಿಗ್ರಹ, ತೀರ್ಥಂಕರ ಮಂದಿರ ವಿದ್ಯಾರ್ಥಿಗಳ ಕೊಠಡಿಗಳು ನಿರ್ಮಾಣವಾಗಿವೆ. ಆಶ್ರಮದ ಮೂಲಬಸದಿಯನ್ನು ಟ್ರಸ್ಟಿನ

---

1 ಗಿಜವಣೆ—ಕೊಲ್ಲಾಪುರ ಜಿಲ್ಲೆಯ ಗಡಹಿಂಗ್ಲಜ ತಾಲ್ಲೂಕಿನಲ್ಲಿದೆ.

ಸ್ಥಾಪಕ ಮಹಾಮಂತ್ರಿಯವರಾದ ಶ್ರೀ ರಾಮಚಂದ್ರ ದಾವಜಿ ದಾವಡಾರವರೇ ದಾಷ್ಟವಾಗಿ ಕಟ್ಟಿಸಿಕೊಟ್ಟಿದ್ದಾರೆ (1946)

ಆಶ್ರಮದ ಟ್ರಸ್ಟ್ ಮರಾಠಿ ಮಾಧ್ಯಮದಲ್ಲಿ ಪ್ರಾಥಮಿಕ ಶಾಲೆಯನ್ನು ನಡೆಸುತ್ತಿದೆ. ಅನಾಥರಾದ ಮತ್ತು ಆರ್ಥಿಕವಾಗಿ ದುರ್ಬಲರಾದ ವಿದ್ಯಾರ್ಥಿಗಳಿಗೆ ಇಲ್ಲಿ ಉಚಿತ ಊಟ-ವಸತಿ ಮತ್ತು ಧಾರ್ಮಿಕ ಶಿಕ್ಷಣದ ಏರ್ಪಾಟಿದೆ. ಧಾರ್ಮಿಕ ಶಿಕ್ಷಣಕ್ಕಾಗಿ ನ್ಯಾಯತೀರ್ಥ ಪಾಸಾದ ಶಾಸ್ತ್ರಿಗಳೊಬ್ಬರಿರುತ್ತಾರೆ. ಆಶ್ರಮದ ವ್ಯವಸ್ಥೆ ನೋಡಿಕೊಳ್ಳುವುದಕ್ಕಾಗಿ ಸ್ಥಳದಲ್ಲಿಯೇ ಒಬ್ಬರು ಸಹಾಯಕ ಮಂತ್ರಿ ಇರುತ್ತಾರೆ.

ಶೇಡಬಾಳಕ್ಕೆ ಹಿಂತಿರುಗಿದ ಸುರೇಂದ್ರನಿಗೆ 12 ವರ್ಷಗಳು ತುಂಬಿ 13ನೇ ವಯಸ್ಸು ನಡೆಯುತ್ತಿದ್ದರೂ ಅವನಿನ್ನೂ ಪ್ರಾಥಮಿಕ ಒಂದನೆಯ ತರಗತಿಯ ವಿದ್ಯಾರ್ಥಿಯಾಗಿರುವುದನ್ನು ನೆನೆದು ಹಿರಿಯರು ಆತಂಕಪಟ್ಟರು. ಹುಡುಗ ಚೂಟಿಯುಳ್ಳವನಾದರೂ ಶಾಲೆಯ ಶಿಸ್ತಿನ ಜೀವನಕ್ಕೆ ಹೊಂದಿಕೊಂಡು ವಿದ್ಯೆಕಲಿಯುವುದರತ್ತ ಗಮನ ಹರಿಸುತ್ತಿರಲಿಲ್ಲ. ಇವನನ್ನು ಹೇಗಾದರೂ ಮಾಡಿ ಶಾಲಾಜೀವನಕ್ಕೆ ಹಚ್ಚಬೇಕೆಂಬ ಆಸೆಯಿಂದ ಹಿರಿಯರು ಇವನನ್ನು ಅನಾಥಾಶ್ರಮದ ಶಾಲೆಗೆ ತಾ. 5-7-1937ರಂದು ಎರಡನೇ ತರಗತಿಗೆ ಸೇರಿಸಿದರು. ಈ ಕಾರ್ಯ ಒಲ್ಲದ ಕುದುರೆಯನ್ನು ನೀರಿಗೆಳೆದೊಯ್ದಂತಾಯಿತು. ಓದಿನ ಕಡೆ ಅಲಕ್ಷ್ಯ ತಾಳಿದ ಸುರೇಂದ್ರ ತಾ. 13-8-1938ರವರೆಗೆ ಶಾಲೆಯಲ್ಲಿದ್ದು ಎರಡನೆಯ ತರಗತಿಯಲ್ಲಿ ಉತ್ತೀರ್ಣನಾಗದೆಯೇ ಶಾಲೆಯನ್ನು ತೊರೆದನು. ಒಂದು ವರ್ಷದ ಬಳಿಕ ಮತ್ತೆ ಈತನನ್ನು ತಾ. 13-7-1939ರಂದು ಪುನಃ ಎರಡನೆಯ ತರಗತಿಗೇ ಸೇರಿಸಿದರು. ಈಸಲ ಸುರೇಂದ್ರ ತರಗತಿಯಲ್ಲಿದ್ದ ದಿನಗಳು ಬಹಳ ಕಡಿಮೆ. ಶಾಲೆಗೆ ಸೇರಿ ಎರಡೂವರೆ ತಿಂಗಳುಗಳು ಕಳೆಯುತ್ತಿದ್ದಂತೆಯೇ ತಾ. 30-9-1939ರಂದು ಈತ ಎರಡನೇ ಬಾರಿಗೆ ಶಾಲೆಯನ್ನು ತೊರೆದನು. ಈತ ಶಾಲೆಯನ್ನು ತೊರೆಯುವುದು ತಪ್ಪಲಿಲ್ಲ ! ಹಿರಿಯರು ಅವನನ್ನು ಶಾಲೆಗೆ ಹೊತ್ತೊಯ್ಯುವುದೂ ತಪ್ಪಲಿಲ್ಲ ! 88 ದಿನಗಳ ನಂತರ ತಾ. 28-12-1939ರಂದು ಸುರೇಂದ್ರನನ್ನು ಮತ್ತೆ ಅದೇ ಶಾಲೆಯ ಎರಡನೆಯ ತರಗತಿಗೆ ಸೇರಿಸಿದರು. ಹಾಗೂ ಹೀಗೂ ತಾ. 1-7-1940ರವರೆಗೆ ಸುರೇಂದ್ರ ಶಾಲೆಯಲ್ಲಿದ್ದು ನಂತರ ಮೊದಲಿನ ಹಾದಿಯನ್ನೇ ತುಳಿದು ಶಾಲೆಗೆ ಪೂರ್ಣವಾಗಿ ಮಂಗಳ ಹಾಡಿದನು. ಈತನ ಹಿರಿಯರೂ ಸೋತಿದ್ದರು. ಅವನ ಹಣೆಬರಹದಂತಾಗಲಿ ಎಂದು ಸುಮ್ಮನಾದರು.

ಹೀಗೆ ತನ್ನ ಶಾಲಾಜೀವನದಲ್ಲಿ ತೀವ್ರತರವಾದ ಉಪೇಕ್ಷೆ ತೋರಿದ ಸುರೇಂದ್ರ ತನ್ನ ಹದಿನೈದನೇ ವಯಸ್ಸು ಕಳೆದರೂ ಪ್ರಾಥಮಿಕ ಶಾಲೆಯ ಎರಡನೇ ತರಗತಿಯನ್ನೂ ಸಹ ದಾಟಲಾರದವನಾಗಿ ಉಳಿದ.

### ಅಧ್ಯಾಯ : ಎರಡು

# ಯೌವನದ ಸೆಳೆತಗಳು – ಪರಿಭ್ರಮಣೆ

ವಿದ್ಯಾರ್ಜನೆಗೆ ವಿದಾಯ ಹೇಳಿದ ಸುರೇಂದ್ರನಿಗೆ ಊರಿನಲ್ಲಿ ಸಹಪಾಠಿಗಳಿಗೇನೂ ಕೊರತೆಯಿರಲಿಲ್ಲ. ಓದಿನಲ್ಲಿ ಸೊನ್ನೆಯಾದರೂ ಘಟಿಂಗತನದಲ್ಲಿ ಈತ ಯಾರಿಗೂ ಕಡಿಮೆಯಿರಲಿಲ್ಲ. ಆಗಾಗ್ಗೆ ಜೊತೆಯವರೊಂದಿಗೆ ಸಣ್ಣಪುಟ್ಟ ಜಗಳಗಳು ನಡೆಯುತ್ತಿದ್ದವು. ವಿದ್ಯೆಯಿಲ್ಲದೆ ಮನೆಗೆ ಭಾರವಾದ ಈ ಹುಡುಗ ಹೆತ್ತವರಿಗೊಂದು ದೊಡ್ಡ ಸಮಸ್ಯೆಯಾಗುವುದಕ್ಕೆ ಮುಂಚೆಯೇ ಈತನಿಗೆ ಒಂದು ನೆಲೆ ಕಾಣಿಸಬೇಕೆಂದು ಸಂಬಂಧಪಟ್ಟವರು ಚಿಂತಿಸಿದರು.

## ಮೊದಲ ನೌಕರಿ

ಸುರೇಂದ್ರನಿಗೆ ಆಧುನಿಕ ನಾಗರಿಕತೆಯ ಯಂತ್ರಗಳ ಕಡೆ ಬಾಲ್ಯದಿಂದಲೂ ಕುತೂಹಲವಿತ್ತು. ಕೆಟ್ಟುಹೋದ ಆಯಿಲ್ ಇಂಜಿನ್ನುಗಳ ರಿಪೇರಿ ಮಾಡುವುದರಲ್ಲಿ ಈತ ಬುದ್ಧಿವಂತನಾಗಿದ್ದ. ಈ ಕೌಶಲವನ್ನು ತಿಳಿದಿದ್ದ ಹಿರಿಯರು ಈತನನ್ನು ಯಾವುದಾದರೊಂದು ಕಾರ್ಖಾನೆಯಲ್ಲಿ ಉದ್ಯೋಗಕ್ಕೆ ಸೇರಿಸಲು ಆಲೋಚಿಸಿದರು. ರಾವ್‌ಜಿ ಸಖಾರಾಂ ದೋಷಿ ಎಂಬುವರು ಶೇಡಬಾಳದ ಅನಾಥಶ್ರಮದ ಟ್ರಸ್ಟಿಗಳಲ್ಲಿ ಒಬ್ಬರಾಗಿದ್ದರು. ಇವರ ಶಿಫಾರಸಿನ ಮೇಲೆ, ಪೂನಾ ಜಿಲ್ಲೆಯ 'ವಾಲ್‌ಚಂದ್‌ನಗರ'ದಲ್ಲಿರುವ ಕಾರ್ಖಾನೆಯೊಂದರಲ್ಲಿ ನೌಕರಿಯೊಂದು ಸುರೇಂದ್ರನಿಗೆ ಸಿಕ್ಕಿತು. ಆಗ ಸುರೇಂದ್ರನ ವಯಸ್ಸು 16–17 ಇರಬಹುದು. ಈ ಮೊದಲ ನೌಕರಿಯನ್ನು ಆತ ಉಳಿಸಿಕೊಳ್ಳಲಿಲ್ಲ. ಕಾರ್ಖಾನೆಯಲ್ಲಿ ಕಳ್ಳತನ ಮಾಡಿದ್ದರಿಂದ ಆಡಳಿತವರ್ಗದವರು ಈತನನ್ನು ವಜಾಮಾಡಿದರು. ಸುರೇಂದ್ರ ಶೇಡಬಾಳಕ್ಕೆ ಹಿಂತಿರುಗಿ ಬಂದ.

## ಜಿನ್ನಿಂಗ್ ಮಿಲ್ಲು

ಶೇಡಬಾಳದ ಬಾಳಗೌಡ ಬಸಗೌಡ ಪಾಟೀಲ್ ಎಂಬುವರು 1942 ರ ಕ್ವಿಟ್ ಇಂಡಿಯಾ ಸ್ವಾತಂತ್ರ್ಯ ಚಳುವಳಿಗೆ ತಮ್ಮ ಊರಿನಲ್ಲಿ ವಿಶೇಷ ಚಾಲನೆ ಕೊಟ್ಟವರು. ಇವರು ದೇಶಪ್ರೇಮಿಗಳೂ ದಕ್ಷ ಹೋರಾಟಗಾರರೂ ಆಗಿದ್ದರು. ಸ್ವಾತಂತ್ರ್ಯ ಚಳುವಳಿಯ ಕಾರ್ಯಕರ್ತರಿಗೆ ಎಲ್ಲಾ ಬಗೆಯ ನೆರವನ್ನೂ ನೀಡುತ್ತಿದ್ದರು. ಕೊಲ್ಲಾಪುರದ ಹನುಮಂತರಾವ್ ಯೊಳ್ಗಿ ಎಂಬ ಕಾರ್ಯಕರ್ತರು ಶೇಡಬಾಳಕ್ಕೆ ಬಂದಾಗ ಬಾಳಗೌಡರು ಇವರ ಜೊತೆಗೂಡಿ ಊರಿನಲ್ಲಿ ಪ್ರಭಾತ್‌ಫೇರಿ ಮೆರವಣಿಗೆ ಮತ್ತು ಬಹಿರಂಗ

ಸಭೆಗಳನ್ನು ನಡೆಸಿದರು. ಗೌಡರ ಪ್ರೇರಣೆಯಿಂದ ದತ್ತಾತ್ರೇಯ ಕಲ್ಯಾಣ್ ದತ್ತ ವಾಡಕರ್ ಮತ್ತು ಮಹದೇವ ಕಲ್ಯಾಣ್ ದತ್ತವಾಡಕರ್ ಎಂಬ ಸೋದರರು ಶೇಡಬಾಳದ ವರ್ಧಮಾನ್ ಪೇಟೆಯಲ್ಲಿ ಬಹಿರಂಗವಾಗಿಯೇ ವಿದೇಶಿ ಬಟ್ಟೆಗಳನ್ನು ಸುಟ್ಟರು.

ಬಾಳಗೌಡರು ಒಂದು ಜಿನ್ನಿಂಗ್‌ಮಿಲ್ಲನ್ನೂ, ಒಂದು ಹಿಟ್ಟಿನ ಗಿರಣಿಯನ್ನೂ ನಡೆಸುತ್ತಿದ್ದರು. ಕಾರ್ಖಾನೆಯಿಂದ ವಜಾ ಆಗಿ ಬಂದಿದ್ದ ನಿರುದ್ಯೋಗಿ ಸುರೇಂದ್ರನನ್ನು ಕಂಡು ಬಾಳಗೌಡರ ಮನಸ್ಸು ಕರಗಿತು. ಡೀಸೆಲ್ ಇಂಜಿನ್ ರಿಪೇರಿಯನ್ನೂ ಈತ ಬಲ್ಲವನಾದುದರಿಂದ ತಮ್ಮ ಜಿನ್ನಿಂಗ್‌ಮಿಲ್‌ನಲ್ಲಿ ಇವನಿಗೆ ಕೆಲಸಕೊಟ್ಟರು. ಸುರೇಂದ್ರ ಇವರಲ್ಲಿ ಕೆಲಸಕ್ಕೆ ಸೇರಿದ್ದು 1942–43 ನೇ ವರ್ಷದ ಸಮಯದಲ್ಲಿ. ಜಿನ್ನಿಂಗ್‌ಮಿಲ್ಲಿನ ಕೆಲಸದೊಂದಿಗೆ ಹಿಟ್ಟಿನ ಗಿರಿಣಿಯಲ್ಲಿ ಹಿಟ್ಟು ಬೀಸಿಕೊಡುವ ಕೆಲಸವನ್ನೂ ಈತ ಮಾಡುತ್ತಿದ್ದ.

## ಬಹಿರಂಗ ರಹಸ್ಯ

ಬಾಳಗೌಡರಲ್ಲಿ ಸುರೇಂದ್ರ ಕೆಲಸಕ್ಕಿದ್ದಾಗ ಅವನಿಗೆ 17–18 ನೇ ವಯಸ್ಸು ನಡೆಯುತ್ತಿತ್ತು. ಈ ಹೊತ್ತಿಗಾಗಲೇ ಮನೆಯವರ ಹತೋಟಿ ಇವನ ಮೇಲೆ ಪೂರ್ಣವಾಗಿ ತಪ್ಪಿತ್ತು. ಯೌವನದ ವ್ಯಾಮೋಹಗಳು ಸೆಳೆತಗಳಿಗೆ ಇವನ ಮನಸ್ಸು ಹಾತೊರೆಯುತ್ತಿತ್ತು. ಇವನು ಮಾಡುತ್ತಿದ್ದ ವೃತ್ತಿಯ ಪರಿಸರ ಮತ್ತು ಈತನ ಸ್ವೇಚ್ಛಾವೃತ್ತಿಗಳು ಇವನನ್ನು ಸುಲಭವಾಗಿ ದಾರಿ ತಪ್ಪಿಸಿದುವು. ಸುರೇಂದ್ರ ಊರಿನ ಕೆಲವು ಪೋರಿ (ಹುಡುಗಿ)ಯರೊಂದಿಗೆ ಗುಟ್ಟಾಗಿ ಅನೈತಿಕಸಂಪರ್ಕ ಏರಿಸಿಕೊಂಡ. ಕ್ರಮೇಣ ಈತನ ವ್ಯವಹಾರ ಓರಗೆಯ ಹುಡುಗರಿಗೆ ತಿಳಿದು ಅನಂತರ ಇದು ಊರಿನ ಬಹಿರಂಗ ರಹಸ್ಯವಾಗಿ ಸುದ್ದಿ ಮಾಡಿತು. ಇದರಿಂದಾಗಿ ಊರಿನ ಮರ್ಯಾದಸ್ಥರು ತಮ್ಮ ಪೋರಿಯರು ಸುರೇಂದ್ರನಿದ್ದ ಹಿಟ್ಟಿನ ಗಿರಣಿಗೆ ಜೋಳ ತೆಗೆದುಕೊಂಡು ಹೋಗದಂತೆ ಎಚ್ಚರವಹಿಸಿದರು.

## ಧ್ವಜದ ಘಟನೆ

ಈ ಸಂದರ್ಭದಲ್ಲಿ ಬಾಳಗೌಡರು ಒಂದು ಸಾಹಸಕಾರ್ಯ ಮಾಡಿದರು. ವರ್ಧಮಾನ ಪೇಟೆಯ ಚೌಕದಲ್ಲಿರುವ ಒಂದು ಸಾಧಾರಣವಾದ ಬೇವಿನ ಮರದ ಕೊಂಬೆಯೊಂದಕ್ಕೆ ನಸುಕಿನಲ್ಲಿ ಒಂದು ರಾಷ್ಟ್ರಧ್ವಜವನ್ನು ಕಟ್ಟಿದರು. ಧ್ವಜಕಟ್ಟಿದ್ದನ್ನು ಅವರು ಗೋಪ್ಯವಾಗಿಟ್ಟರು. ಬೆಳಗ್ಗೆ ಕೊಂಬೆಯ ಮೇಲೆ ಹಾರಾಡುತ್ತಿದ್ದ ರಾಷ್ಟ್ರ ಧ್ವಜವನ್ನು ಕಂಡ ಊರಿನ ಅನೇಕರು ಭಯಭೀತರಾದರು. ಪೋಲೀಸರು ಬಂದು

ತಮ್ಮನ್ನು ಹಿಂಸಿಸಬಹುದೆಂಬ ಹೆದರಿಕೆಯಿಂದ ಕೆಲವರಂತೂ ತಮ್ಮಲ್ಲಿದ್ದ ಗಾಂಧಿ ಟೋಪಿಗೆ ಕೆಂಪು, ಹಸಿರು ಬಣ್ಣವನ್ನು ಬಳಿದು ಅದನ್ನು ಧರಿಸಲಾರಂಭಿಸಿದರು.

ಧ್ವಜ ಹಾರಿಸಿರುವ ಸುದ್ದಿ ತಿಳಿದ ಒಂದಿಬ್ಬರು ಪೋಲೀಸರು ಹಾಗು ಸರ್ಕಾರಿ ಅಧಿಕಾರಿಗಳು ಬೇವಿನ ಮರದ ಸ್ಥಳಕ್ಕೆ ಬಂದು ಧ್ವಜವನ್ನು ಕೆಳಗಿಳಿಸಿದರು. ಶೇಡ ಬಾಳದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಯ ಚಟುವಟಿಕೆಗಳಿಗೆಲ್ಲಾ ಬಾಳಗೌಡರೇ ಕೇಂದ್ರಬಿಂದುವೆಂದು ಊರಿಗೆಲ್ಲಾ ತಿಳಿದ ವಿಚಾರವಾಗಿತ್ತು. ಪೋಲೀಸರು ಗೌಡರನ್ನು ಈ ಬಗ್ಗೆ ಪ್ರಶ್ನಿಸಿದಾಗ "ಯಾರೋ ಹುಡುಗರು ಹುಡುಗಾಟಕ್ಕಾಗಿ ಬಾವುಟ ಕಟ್ಟಿರ ಬಹುದು ವಿಚಾರಮಾಡಿ ಯಾರೆಂಬುದನ್ನು ತಿಳಿಸುತ್ತೇನೆ" ಎಂದು ಆ ಸಮಯಕ್ಕೆ ಬಂದ ಮೇಲಿನ ಮಾತುಗಳನ್ನು ಹೇಳಿ ಪೋಲೀಸರನ್ನು ಕಳುಹಿಸಿಕೊಟ್ಟರು. ಇದಾದ ಮೇಲೆ ಬಾಳಗೌಡರಿಗೆ ಯೋಚನೆ ಪ್ರಾರಂಭವಾಯಿತು. ಪೋಲೀಸರೇನೋ ಸಧ್ಯಕ್ಕೆ ಹೊರಟುಹೋದರು. ಆದರೆ ಮುಂದೆ ಯಾವ ಹುಡುಗನನ್ನು ಅವರಿಗೆ ತೋರಿಸು ವುದು ? ಗೌಡರಿಗೆ ಒಂದು ಉಪಾಯ ಹೊಳೆಯಿತು. ತಮ್ಮಲ್ಲಿ ಕೆಲಸಕ್ಕಿದ್ದ ಸುರೇಂದ್ರ ನನ್ನು ಈಗ ಉಪಯೋಗಿಸಿಕೊಳ್ಳಬಾರದೇಕೆ ? ಈ ಯೋಚನೆ ಬಂದ ಕೂಡಲೇ ಅವರು ಸುರೇಂದ್ರನನ್ನು ಕರೆಸಿ "ಪೋಲೀಸರು ಬಂದು ಬಾವುಟದ ಬಗೆಗೆ ವಿಚಾರಿಸಿದರೆ ನಿನ್ನ ಹೆಸರನ್ನು ಹೇಳುತ್ತೇನೆ. ನೀನು ಈ ಊರಿನಲ್ಲಿರಬೇಡ ಕೃಷ್ಣ ಕಿತ್ತೂರಿಗೆ ಹೋಗು ನಾನು ಅಲ್ಲಿ ನಿನಗೆ ತಕ್ಕ ವ್ಯವಸ್ಥೆ ಮಾಡುಸುತ್ತೇನೆ" ಎಂದು ಅವನ ಸಹಕಾರ ವನ್ನು ಬಯಸಿದರು. ಯಜಮಾನರ ಹಂಗಿಗೆ ಕಟ್ಟುಬಿದ್ದ ಸುರೇಂದ್ರ ಇದಕ್ಕೆ ಒಪ್ಪಿಗೆ ನೀಡಿ ಊರುಬಿಟ್ಟನು.

ಬೇವಿನ ಮರದ ಕೊಂಬೆಯಲ್ಲಿ ರಾಷ್ಟ್ರಧ್ವಜ ಹಾರಿಸಿದ್ದು ಸುರೇಂದ್ರ ಉಪಾಧ್ಯೆ. ಈ ಕೆಲಸ ಮಾಡಿ ಅವನು ಊರು ಬಿಟ್ಟಿದ್ದಾನೆ ಎಂದು ಬಾಳಗೌಡರು ಎಷ್ಟು ಹೇಳಿ ದರೂ ಪೋಲೀಸ್ ಅಧಿಕಾರಿಗಳು ನಂಬಲಿಲ್ಲ. ತಾವು ಈ ತೊಡಕಿನಿಂದ ಪಾರಾಗಲು ತಮ್ಮ ಕೈಕೆಳಗಿನ ಕೆಲಸಗಾರನನ್ನು ಗೌಡರು ಬಲಿಪಶುವನ್ನಾಗಿ ಉಪಯೋಗಿಸಿಕೊಳ್ಳು ತ್ತಿದ್ದಾರೆಂದು ಅವರಿಗೆ ಸ್ಪಷ್ಟವಾಗಿತ್ತು. ಪೋರಿಯರ ಹಿಂಡಿನ ಕಡೆ ಸದಾ ಕಣ್ಣಿಡುವ ಸುರೇಂದ್ರ ದೇಶಪ್ರೇಮಿಗಳ ಗುಂಪಿನವನಾದರೂ ನೋಡಿಯಾನೆ ? ಬಾಳಗೌಡರು ಶಿರೋಳ ಮತ್ತು ಕೊಲ್ಲಾಪುರದ ಕಾರ್ಯಕರ್ತರಿಗೆ ನೀಡಿದ ನೆರವು, ವಿದೇಶಿವಸ್ತ್ರಗಳನ್ನು ಸುಡಲು ನೀಡಿದ ಪ್ರೇರಣೆ, ನಂತರ ನಡೆದ ಧ್ವಜದ ಘಟನೆ—ಇವುಗಳನ್ನೆಲ್ಲಾ ಅಧಿಕಾರಿ ಗಳು ತೀವ್ರವಾಗಿ ಪರಿಗಣಿಸಿ ಧ್ವಜ ಹಾರಿಸಿದ್ದು ಬಾಳಗೌಡರೇ ಎಂಬ ನಿರ್ಧಾರಕ್ಕೆ ಬಂದು ಅವರನ್ನೂ ಅವರ ಸಹಾಯಕರಾದ ದತ್ತಾತ್ರೇಯ ಮತ್ತು ತಿಪ್ಪಣ್ಣನವರನ್ನು ಬಂಧಿಸಿ ಮೂರುದಿನಗಳ ಕಾಲ ಸೆರೆಮನೆಯಲ್ಲಿಟ್ಟು ಅನಂತರ ಬಿಡುಗಡೆ ಮಾಡಿದರು.

ಬಾಳಗೌಡರ ದೆಸೆಯಿಂದಾಗಿ ಶೇಡಬಾಳಕ್ಕೆ ಸುಮಾರು ಹನ್ನೆರಡು ಮೈಲಿಗಳ ದೂರದಲ್ಲಿರುವ ಕೃಷ್ಣ ಕಿತ್ತೂರಿಗೆ ಸುರೇಂದ್ರ ಬಂದನು. ಆ ಊರಿನಲ್ಲಿ ಒಂದು ಸಕ್ಕರೆ ಕಾರ್ಖಾನೆ ನಿರ್ಮಾಣ ಹಂತದಲ್ಲಿತ್ತು. ಪೂನಾ ನಗರದ ಪಾನ್ಸೆ ಮುಂತಾದ ಕೆಲವು ಶ್ರೀಮಂತರು ಆಗಿನ ಬುಧಗಾವ್ ಸಂಸ್ಥಾನದ ಆಶ್ರಯದಲ್ಲಿ ಈ ಕಾರ್ಖಾನೆಯನ್ನು ಕಟ್ಟಿಸುತ್ತಿದ್ದರು. ಸುರೇಂದ್ರ ಇಲ್ಲಿ ಒಬ್ಬ ಸಾಮಾನ್ಯ ಕೆಲಸಗಾರನಾಗಿ ಉದ್ಯೋಗಕ್ಕೆ ಸೇರಿದನು. ಈತ ಸೇರಿದ ಕೆಲವು ತಿಂಗಳುಗಳಲ್ಲಿಯೇ ನಿರ್ಮಾಣಹಂತದಲ್ಲಿದ್ದ ಕಾರ್ಖಾನೆಯಲ್ಲಿ ಅವ್ಯವಸ್ಥೆ ಅನಾಯಕತ್ವ ತಲೆದೋರಿ ಕಾರ್ಖಾನೆಯಿಂದ ಸಕ್ಕರೆ ಹೊರಬರುವುದಕ್ಕೆ ಮುಂಚೆಯೇ ಅದು ಮುಚ್ಚಿಹೋಯಿತು. ಕೆಲಸ ಮಾಡುತ್ತಿದ್ದವರೆಲ್ಲಾ ನಿರುದ್ಯೋಗಿಗಳಾದರು. ಕೆಲಸಗಾರರಲ್ಲಿ ಬಹುಮಂದಿ ಕೋಪೋದ್ರೇಕಗಳಿಗೊಳಗಾಗಿ ಕಾರ್ಖಾನೆಯ ಆಸ್ತಿಪಾಸ್ತಿಗಳನ್ನು ಲೂಟಿ ಮಾಡಿದರು. ತನ್ನ ಜೀವನದಲ್ಲಿ ಕ್ಷಿಪ್ರವಾಗಿ ಮೂರನೇ ಬಾರಿಗೆ ಉದ್ಯೋಗ ಕಳೆದುಕೊಂಡ ಸುರೇಂದ್ರ ಅಲ್ಲಲ್ಲಿ ಸುತ್ತಾಡಿ ಕಡೆಗೆ ಶೇಡಬಾಳಕ್ಕೆ ಹಿಂತಿರುಗಿದನು. ಆ ಹೊತ್ತಿಗೆ ಈತನ ಲೈಂಗಿಕ ವ್ಯವಹಾರಗಳ ಸುದ್ದಿ ಬಾಳಗೌಡರಿಗೂ ಮನದಟ್ಟಾಗಿದ್ದುದರಿಂದ ಮತ್ತೆ ಈತನಿಗೆ ಉದ್ಯೋಗ ನೀಡಲು ಮುಂದಾಗಲಿಲ್ಲ. ಈ ಸಮಯದಲ್ಲಿ ಸುರೇಂದ್ರನಿಗೆ 19–20 ನೇ ವರ್ಷ ನಡೆಯುತ್ತಿತ್ತು.

ಅಧ್ಯಾಯ : ಮೂರು

# ದೀಕ್ಷೆಯ ಮುಖವಾಡಗಳು

ಕೃಷ್ಣ ಕಿತ್ತೂರಿನಿಂದ ಬಂದು ಶೇಡಬಾಳದಲ್ಲಿ ಉದ್ಯೋಗವಿಲ್ಲದೆ ಅತಂತ್ರವಾಗಿದ್ದ ಸುರೇಂದ್ರ ತನ್ನ ಲೈಂಗಿಕ ಚಾಳಿಗಳನ್ನು ಮುಂದುವರೆಸಿದನು. ಇವನ ಅನಾಚಾರಗಳು ಮತ್ತು ದುಂಡಾವರ್ತಿಗಳು ಹೆಚ್ಚಾದಾಗ ಊರಿನ ಬಹುಜನರು ಕೆರಳುವ ಹಂತ ಮುಟ್ಟಿದರು. ಜನರು ಸಂಘಟಿತರಾಗುವುದರೊಳಗಾಗಿ ಸುರೇಂದ್ರ ವಿರೋಧದಿಂದ ಪಾರಾಗುವ ಉಪಾಯಗಳ ಆಲೋಚನೆಯಲ್ಲಿದ್ದ. ಜನರ ಕ್ರೋಧದಿಂದ ತಪ್ಪಿಸಿಕೊಳ್ಳುವುದಾದರೂ ಹೇಗೆ? ದೈಹಿಕ ಲಾಲಸೆ ಇವನಲ್ಲಿ ಆಗಲೇ ಹೆಮ್ಮರವಾಗಿಬೆಳೆದು ನಿಂತಿತ್ತು. ಇದನ್ನು ಬೇರು ಸಹಿತ ಕೀಳುವುದಿರಲಿ, ಅದರ ಎಲೆಯನ್ನಾದರೂ ಅಲುಗಿಸುವುದು ಸುರೇಂದ್ರನಿಗೆ ಕಷ್ಟಸಾಧ್ಯವಾಗಿತ್ತು! ಈ ಸಂದರ್ಭದಲ್ಲಿ ಆತನಿಗೆ ಜನರನ್ನು ವಂಚಿಸಲು ಅವಕಾಶವೊಂದು ಪ್ರಾಪ್ತವಾಯಿತು.

## ಬ್ರಹ್ಮಚರ್ಯ ದೀಕ್ಷೆ

1945ರಲ್ಲಿ ಆಚಾರ್ಯ ಮಹಾವೀರಕೀರ್ತಿ ಮುನಿಗಳು ಶೇಡಬಾಳದಲ್ಲಿ ಚಾತುರ್ಮಾಸಕ್ಕೆ ನಿಂತರು. ಸುರೇಂದ್ರ ಮಹಾವೀರಕೀರ್ತಿಗಳ ಸಂಘ ಸೇರಿ ಜನರ ವಿರೋಧವನ್ನು ಶಮನ ಮಾಡಲು ಆಲೋಚಿಸಿದನು. ಅದರಂತೆ ತನ್ನ ಕೋರಿಕೆಯನ್ನು ಮುನಿಗಳ ಮುಂದಿಟ್ಟನು. ಮಹಾವೀರಕೀರ್ತಿಗಳು ಸುರೇಂದ್ರನ ಪೂರ್ವಾಪರಗಳನ್ನು ಹೆಚ್ಚು ವಿಚಾರ ಮಾಡದೆ ಬ್ರಹ್ಮಚರ್ಯ ದೀಕ್ಷೆ ನೀಡಿದರು. ಊರಿನ ಜನರಿಗೆ ಸುರೇಂದ್ರನ ನಡವಳಿಕೆ ವಿಚಿತ್ರವಾಗಿ ಕಂಡಿತು. ಇವನ ಪೋಕರಿ ಬುದ್ಧಿಯನ್ನು ಚೆನ್ನಾಗಿ ಅರಿತಿದ್ದವರು ಇವನ ಬ್ರಹ್ಮಚರ್ಯದ ಬಿಳೀಬಟ್ಟೆಯ ವೇಷವನ್ನು ಕಂಡು ಮುಸಿಮುಸಿ ನಗಲಾರಂಭಿಸಿದರು. ಏನೋ ಸ್ವಲಾಭಕ್ಕಾಗಿ ಸ್ವಾಮಿಗಳ ಹಿಂದೆ ಬಿದ್ದಿದ್ದಾನೆ ಎಂದು ಆಡಿಕೊಂಡರು. ಜನರ ವಿರೋಧವನ್ನು ತಣ್ಣಗೆ ಮಾಡುವ ಒಂದು ಸಾಧನವನ್ನಾಗಿ ದೀಕ್ಷಾಜೀವನವನ್ನು ಪರಿಗಣಿಸಿದುದರಿಂದ ಅದು ಆವನಿಗೆ ಆತ್ಮೋನ್ನತಿಯನ್ನು ತಂದುಕೊಡುವ ವರವಾಗದೆ, ಲಂಪಟತನವನ್ನು ಮುಚ್ಚಿಳಿಸುವ ಒಂದು ಸಾಧಾರಣವಾದ ಮುಖವಾಡವಾಯಿತು. ಸುರೇಂದ್ರ ಒಂದು ವರ್ಷದಷ್ಟು ಕಾಲ ಮಹಾವೀರಕೀರ್ತಿಗಳನ್ನು ಹಿಂಬಾಲಿಸಿದನು. ಹೆಚ್ಚುಕಾಲ ಯಾಂತ್ರಿಕವಾಗಿ ಅವರನ್ನು ಅನುಸರಿಸುವುದು ಸುರೇಂದ್ರನಿಗೆ ಒಗ್ಗದ ವಿಷಯವಾಯಿತು. ಯಾವುದೋ ನೆಪಹೇಳಿ ಈತ ಅವರನ್ನು ಬಿಟ್ಟು ಕೋಣ್ಣೂರಿಗೆ ಹೋಗಿ ಅಲ್ಲಿನ ಬಸದಿಯಲ್ಲಿ ಚಾತುರ್ಮಾಸವೆಂದು ತಂಗಿದನು. (1946)

## ಹೊಂಬುಜ ಯಾತ್ರೆ

1946ರ ಕಡೆಯಲ್ಲಿ ಸುರೇಂದ್ರ ಹೊಂಬುಜಕ್ಕೆ ಬಂದನು. ಶಿವಮೊಗ್ಗ ಜಿಲ್ಲೆಯ ಹೊಂಬುಜ ಕ್ಷೇತ್ರದ ಪೀಠಾಧಿಕಾರಿಗಳಾದ ಶ್ರೀ ದೇವೇಂದ್ರಕೀರ್ತಿಸ್ವಾಮಿಗಳು (ಅರ್ಹದ್ದಾಸರು) ಸುರೇಂದ್ರ ಬ್ರಹ್ಮಚಾರಿಗೆ ಗುರುಕುಲದಲ್ಲಿದ್ದುಕೊಂಡು ವಿದ್ಯಾರ್ಜನೆ ಮಾಡಲು ಅವಕಾಶ ನೀಡಿದರು. ತನ್ನ ಹದಿನಾರನೆಯ ವಯಸ್ಸಿನಲ್ಲಿ ಎರಡನೆಯ ತರಗತಿಯನ್ನು ಬಿಟ್ಟ ಸುರೇಂದ್ರನ ವಿದ್ಯಾಭ್ಯಾಸ ಹೊಂಬುಜದ ಗುರುಕುಲ ಮಾದರಿಯ ಪಾಠಶಾಲೆಯಲ್ಲಿ ಧಾರ್ಮಿಕ ಶಿಕ್ಷಣರೂಪದಲ್ಲಿ ಮುಂದುವರೆಯಿತು. ಈ ವ್ಯವಸ್ಥೆಯಿಂದಾಗಿ ಆತನ ಸ್ವಭಾವದಲ್ಲಿ ಮೂಲಭೂತವಾದ ಪರಿವರ್ತನೆಯೇನೂ ಆಗಲಿಲ್ಲ. ಆತನ ದುಂಡಾವರ್ತನೆಗಳಿಗೆ ವಿರಾಮವೆಂಬುದೇ ಇರಲಿಲ್ಲ. ಒಮ್ಮೆ ಊಟದ ಹಚಾರದಲ್ಲಿ ಸಹವಿದ್ಯಾರ್ಥಿಯೊಂದಿಗೆ ಜಗಳ ತೆಗೆದು ಹೊಡೆದಾಟಕ್ಕಿಳಿದು ಕೈಮಾಡಿದನು, ಇಬ್ಬರೂ ಕೈಕೈ ಮಿಲಾಯಿಸಿದಾಗ ಅಲ್ಲಿದ್ದವರು ಇವರಿಬ್ಬರನ್ನೂ ಬೇರ್ಪಡಿಸಿದರು. ಈ ಘರ್ಷಣೆಯ ಬಗ್ಗೆ ದೂರು ಸ್ವಾಮಿಗಳವರೆಗೂ ಹೋಯಿತು.

ಸ್ವಾಮಿಗಳು ಸುರೇಂದ್ರನಿಗೆ ಛೀಮಾರಿಹಾಕಿ ಆ ಪ್ರಕರಣವನ್ನು ಅಲ್ಲಿಗೆ ಮುಕ್ತಾಯ ಮಾಡಿದರು.

ಸುರೇಂದ್ರ ಸುಮಾರು ಒಂದೂವರೆ ವರ್ಷಗಳ ಕಾಲ ಹೊಂಬುಜದಲ್ಲಿದ್ದು ಮತ್ತೆ ಬೆಳಗಾಂ ಕಡೆಗೆ ಹಿಂದಿರುಗಿದನು. 1948ರಲ್ಲಿ ಬಿಜಾಪುರ ಜಿಲ್ಲೆಯ ತಮ ದಡ್ಡಿ ಗ್ರಾಮದಲ್ಲಿದ್ದ ಮಹಾವೀರಕೀರ್ತಿಗಳನ್ನು ಕೂಡಿಕೊಂಡನು. ಬ್ರಹ್ಮಚರ್ಯ ದೀಕ್ಷೆಯ ಸಾಧಾರಣವಾದ ಮುಖವಾಡದಲ್ಲಿ ಅಷ್ಟು ಪ್ರಯೋಜನ ಕಾಣದ ಸುರೇಂದ್ರ ಇನ್ನೂ ಪರಿಣಾಮಕಾರಿಯಾದ ಮುಖವಾಡವನ್ನು ಬಯಸಿ ಇದಕ್ಕಾಗಿ ಮಹಾವೀರ ಕೀರ್ತಿಗಳಿಂದ ಕ್ಷುಲ್ಲಕ ದೀಕ್ಷೆಯನ್ನು ಬೇಡಿದನು

## ಕ್ಷುಲ್ಲಕ ವೇಷ

ಸಮಸ್ತ ಜೀವರಾಶಿಗಳ ಹಿತಬಯಸಿ ಸ್ವಜವಾಗಿ ಉಂಟಾಗುವ ಮಾನವೀಯ ಅನುಕಂಪೆ ದೀಕ್ಷಾ ಜೀವನಕ್ಕೆ ಮೊದಲ ಅಡಿಗಲ್ಲು. ಲೋಕವಿಷಯಗಳ ನಿಜವಾದ ಪರಿಜ್ಞಾನ ದೀಕ್ಷಾಜೀವನವನ್ನು ಸುಭದ್ರಗೊಳಿಸುವ ಕಟ್ಟಡ. ಸ್ಫಟಿಕ-ಶುದ್ಧ ಚಾರಿತ್ರ್ಯ ದೀಕ್ಷಾಜೀವನವನ್ನು ಸಾರ್ಥಕಗೊಳಿಸುವ ಕಲಶಗಳು. ಸ್ಥಿರವಾದ ವೈರಾಗ್ಯ ಭಾವನೆ ದೀಕ್ಷಾಜೀವಿಯನ್ನು ಪವಿತ್ರತಮ ನೆಲೆಗೊಯ್ಯುವ ದಿವ್ಯಶಕ್ತಿ. ಇದನ್ನೆಲ್ಲಾ ತಿಳಿದು ಆಚರಿಸುವ ಧರ್ಮಿಷ್ಠರ ದೀಕ್ಷೆ ಸಾರ್ಥಕವಾಗುತ್ತದೆ. ಹಾಗಲ್ಲದೆ ಆಚಾರ ವಿಚಾರಗಳಲ್ಲಿ ಅಂತರವಿರುವ ಧರ್ಮಭ್ರಷ್ಟರ ದೀಕ್ಷೆ ಸಮಾಜಕಂಟಕವಾಗುತ್ತದೆ. ಆದ್ದರಿಂದ ದೀಕ್ಷೆ ನೀಡುವ ಅರ್ಹತೆ ಪಡೆದವರು ಶಿಷ್ಯರ ಯೋಗ್ಯತೆಯನ್ನು ಚೆನ್ನಾಗಿ ತಿಳಿದುಕೊಂಡು ದೀಕ್ಷೆಯನ್ನು ಕೊಡಬೇಕು. ಗೃಹಸ್ಥಾಶ್ರಮದಲ್ಲಿ ನಿಂದ್ಯ ಆಚರಣೆ ಮತ್ತು ನಿಂದ್ಯ ವ್ಯವಹಾರಗಳನ್ನು ಮಾಡಿದವನು ದೀಕ್ಷೆ ವಹಿಸಲು ಅನರ್ಹನೆಂದು ಶಾಸ್ತ್ರಗ್ರಂಥಗಳು ಹೇಳುತ್ತವೆ.

ಮಹಾವೀರಕೀರ್ತಿಗಳು ಜಮಖಂಡಿ ತಾಲ್ಲೋಕಿನ ತಮದಡ್ಡಿ ಗ್ರಾಮದಲ್ಲಿಯೇ ಸುರೇಂದ್ರನಿಗೆ ಕ್ಷುಲ್ಲಕ ದೀಕ್ಷೆ ನೀಡಿದರು (1948). ಅಂದಿನಿಂದ 'ಪಾರ್ಶ್ವಕೀರ್ತಿವರ್ಣಿ ಎಂದು ಹೆಸರು ಬದಲಾವಣೆಯಾಯಿತು. ಸುರೇಂದ್ರನ ಕಪಟತನದ ಸುಳಿವು ಮಹಾ ವೀರಕೀರ್ತಿಗಳಿಗೆ ಸಿಗಲಿಲ್ಲ. ಅವರು ನೀಡಿದ ಈ ದೀಕ್ಷೆ ಮೊದಲೇ ಮಾಯಾವಿಯಾದವನ ಕೈಗೆ ಮಂತ್ರದಂಡವನ್ನು ನೀಡಿದಂತಾಯಿತು. ಸುರೇಂದ್ರ ಬ್ರಹ್ಮಚರ್ಯದೀಕ್ಷೆಯ ಸಾಧಾರಣ ಮುಖವಾಡವನ್ನು ಕಿತ್ತೊಗೆದು ಪಿಂಛ, ಕಮಂಡಲ ಮತ್ತು ಕಾವಿಗಳಿಂದ ರಂಜಿತವಾದ ಕ್ಷುಲ್ಲಕದೀಕ್ಷೆಯ ಪರಿಣಾಮಕಾರಿ ಮುಖವಾಡವನ್ನು ತೊಟ್ಟುಕೊಂಡನು. ವೇಷದೊಂದಿಗೆ ಹೆಸರೇನೋ ಬದಲಾಯಿತು. ಆದರೆ ಜೀವನಕ್ಕೆ ಅಂಟಿಬಂದ ದುರ್ಗುಣಗಳು ಹಾಗೆಯೇ ಉಳಿದುವು.

ಸುರೇಂದ್ರ, 'ಪಾರ್ಶ್ವಕೀರ್ತಿವರ್ಣಿಗಳು' ಎನ್ನಿಸಿಕೊಂಡಾಗ ಆತನಿಗೆ 23 ವರ್ಷಗಳು. ಪಾರ್ಶ್ವಕೀರ್ತಿಗಳು ಕೆಲವು ಕಾಲ ಮಹಾವೀರಕೀರ್ತಿಗಳನ್ನು ಅನುಸರಿಸಿ ಧಾರ್ಮಿಕ ಶಿಕ್ಷಣವನ್ನು ಪಡೆದರು. ಅನಂತರ ಇದ್ದಕ್ಕಿದ್ದಂತೆಯೇ ಸಂಘವನ್ನು ತೊರೆದು 1948ರಲ್ಲಿಯೇ ಕುಂಭೋಜದ ಜೈನಬಸದಿಯಲ್ಲಿ ವಾಸ್ತವ್ಯ ಹೂಡಿದರು. ಶ್ರಾವಕರ ಹನ್ನೊಂದು ನೆಲೆಗಳು ಮತ್ತು ಆತ್ಮನ ಹದಿನಾಲ್ಕು ಗುಣಸ್ಥಾನಗಳ ಬಗೆಗೆ ಯಾವೊಂದು ನಿಜವಾದ ಕಾಳಜಿಯೂ ಇಲ್ಲದ ಪಾರ್ಶ್ವಕೀರ್ತಿಗಳು ಬಸದಿಯಲ್ಲಿ ಹೆಣ್ಣುಮಕ್ಕಳಿಗೆ ಧಾರ್ಮಿಕ ಪಾಠ ಮಾಡಲು ನಿಂತರು. ವೇದ ಹೇಳಿ ಗಾಳ ಹಾಕುವ ಈ ಕ್ಷುಲ್ಲಕರು ತಮ್ಮ ಹೆಣ್ಣಿನ ಚಪಲವನ್ನು ಅಲ್ಲಿಯೂ ಪ್ರದರ್ಶಿಸಿದರು. ಜನರ ಗುಸು ಗುಸು ಪ್ರತಿಭಟನೆಯ ರೂಪತಾಳಿದಾಗ ಇವರು ಕುಂಭೋಜವನ್ನು ತೆರವು ಮಾಡಿದರು. ಪಾರ್ಶ್ವಕೀರ್ತಿಗಳು ಕುಂಭೋಜದಲ್ಲಿ ನಡೆಸಿದ ಅನೈತಿಕ ವ್ಯವಹಾರಗಳನ್ನು ತಿಳಿದುಕೊಂಡಿದ್ದ ಪಾರ್ಶ್ವಕೀರ್ತಿಗಳ ಸೋದರ ಸಂಬಂಧಿಕಳೇ ಆಗಿದ್ದ ಕುಂಭೋಜದ ಕನ್ಯೆಯೊಬ್ಬಳು, ತಾನು ವಿವಾಹಿತೆಯಾದಾಗ ತನ್ನ ಗಂಡನ ಹತ್ತಿರ ಈ ಪಾರ್ಶ್ವಕೀರ್ತಿಗಳ ಲೀಲಾವಿಲಾಸಗಳನ್ನು ಬಹಿರಂಗಪಡಿಸಿದಳು. ಮುಂದೆ ಈಕೆಯ ಗಂಡ ಪಾರ್ಶ್ವಕೀರ್ತಿಗಳ ಒಬ್ಬ ಪ್ರಮುಖ ವಿರೋಧಿಯಾಗಿ ಮಾರ್ಪಟ್ಟರು.

**ಅಧ್ಯಾಯ : ನಾಲ್ಕು**

# ಅನಾಥಾಶ್ರಮದಲ್ಲಿ ಬೇರೂರಿದ್ದು

ಶೇಡಬಾಳದ 'ಶಾಂತಿಸಾಗರ ದಿಗಂಬರ ಜೈನ ಅನಾಥ ಛಾತ್ರಾಶ್ರಮ'ದ ಸ್ಥೂಲಪರಿಚಯ ಈ ಮೊದಲೇ ಬಂದಿದೆ. ಧರ್ಮ-ಸಂಸ್ಕೃತಿ-ವಿದ್ಯಾಪ್ರಸಾರದ ಮಹೋನ್ನತ ಉದ್ದೇಶದಿಂದ ಈ ಆಶ್ರಮ ಸ್ಥಾಪನೆಯಾಯಿತು. ಪ್ರಾರಂಭದಿಂದಲೂ ಇದರ ಆಡಳಿತ ಸಂಭಾವಿತರಾದ ಜನರ ವಶದಲ್ಲಿತ್ತು. 1927ರಲ್ಲಿ ಕೇವಲ ಆರು ಜನ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಈ ಆಶ್ರಮದಲ್ಲಿ 1943ನೇ ವರ್ಷದ ಹೊತ್ತಿಗೆ ವರ್ಷಂಪ್ರತಿ ಸುಮಾರು ಎಪ್ಪತ್ತೈದು ಜನ ವಿದ್ಯಾರ್ಥಿಗಳಿರುತ್ತಿದ್ದರು. 1949-50ರ ಸಮಯದಲ್ಲಿ ಆಶ್ರಮದ ಪ್ರಾಥಮಿಕಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಕಲಗೊಂಡಾ ವಿಟಗೊಂಡಾ ಪಾಟೀಲರು ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು. ಈ ಹುದ್ದೆಯ ಮೇಲೆ ಕಣ್ಣಿಟ್ಟಿದ್ದ, ಹಿಂದೆ ಮಹಾ ಆಗಿದ್ದ ಉಪಾಧ್ಯಾಯರೊಬ್ಬರು ನೀಡಿದ ನಿರಂತರ ಕಿರುಕುಳ ಈ ರಾಜೀನಾಮೆಗೆ ಕಾರಣ

ನಾಗಿತ್ತು. ಕಿರುಕುಳ ನೀಡಿದ ವ್ಯಕ್ತಿ ಪಾರ್ಶ್ವಕೀರ್ತಿಗಳ ಆಪ್ತ ಸ್ನೇಹಿತರೂ ಆಗಿದ್ದರು. ಕಲಗೊಂಡರ ರಾಜೀನಾಮೆಯಿಂದಾಗಿ ಆಶ್ರಮ ಮತ್ತು ಅದರ ಪಾಠಶಾಲೆಯಲ್ಲಿ ಅಪಾರವಾದ ಅವ್ಯವಸ್ಥೆಯುಂಟಾಯಿತು. ಈ ಸಮಯದಲ್ಲಿ ಪಾರ್ಶ್ವಕೀರ್ತಿಗಳು ಶೇಡಬಾಳದಲ್ಲಿಯೇ ಬಿಡಾರ ಹೂಡಿದ್ದರು ಕಲಗೊಂಡರಿಗುಂಟಾದ ಕಿರುಕುಳದಲ್ಲಿ ಪಾರ್ಶ್ವಕೀರ್ತಿಗಳ ಕೈವಾಡವೂ ಇತ್ತು.

## ಮುರಿದು ಬಿದ್ದ ಮಾನಸ್ತಂಭ

ಶೇಡಬಾಳ ಆಶ್ರಮದ ಮೂಲಬಸದಿಯ ಮುಂಭಾಗದಲ್ಲಿ ಸೊಲ್ಲಾಪುರದ ತುಳಜಾರಾಮ್ ಸಾತಪುತೆ ಎಂಬುವರು ಕಟ್ಟಿಸಿದ್ದ ಮಾನಸ್ತಂಭ 1948ರಲ್ಲಿ ಮುರಿದು ಬಿತ್ತು. ಈ ಘಟನೆಯನ್ನು ಸಾಮಾನ್ಯವೆಂದು ಕಡೆಗಣಿಸುವಂತಿಲ್ಲ. ದೇವಾಲಯಗಳ ಮುಂದೆ ಕಟ್ಟುವ ಮಾನಸ್ತಂಭಗಳಿಗೆ ವಿಶೇಷವಾದ ಅರ್ಥವಿದೆ. ತೀರ್ಥಂಕರರ ಸಮವಸರಣದಲ್ಲಿರುವ ಮಾನಸ್ತಂಭಗಳ ಪ್ರತಿರೂಪ ಈ ಮಾನಸ್ತಂಭ. "ಮಾನ ಸ್ತಂಭವನ್ನು ದೂರದಿಂದ ನೋಡಿದೊಡನೆಯೇ ಯಾವನೇ ಇರಲಿ ಎಂಥ ತೀವ್ರ ಅಭಿಮಾನಿ ಮಿಥ್ಯಾದೃಷ್ಟಿ ಇದ್ದರೂ ಸಹ ಅವನ ಮಾನವು ಇಳಿದುಹೋಗುತ್ತದೆ. ಆತ್ಮನ ಕರ್ಮಬಂಧನಗಳಿಗೆ ಕಾರಣವಾಗುವ ಮಾನವನ್ನು ಇದು ಸ್ತಂಭನಗೊಳಿಸಿ ನಾಶಪಡಿಸುವುದರಿಂದಲೇ ಇದಕ್ಕೆ ಮಾನಸ್ತಂಭವೆಂದು ಹೆಸರು ಬಂದಿದೆ." ಶೇಡಬಾಳದ ಆಶ್ರಮದ ಮಾನಸ್ತಂಭವು ಮುರಿದು ಬಿದ್ದುದು ಭವಿಷ್ಯದಲ್ಲಿ ಆಶ್ರಮಕ್ಕೊದಗಲಿರುವ ದುರವಸ್ಥೆಯನ್ನು ಮುನ್ಸೂಚಿಸುವಂತಿದೆ. ಕಲಗೊಂಡರು ಮುಖ್ಯೋಪಾಧ್ಯಾಯ ಹುದ್ದೆಗೆ ರಾಜೀನಾಮೆ ನೀಡಿದ ನಂತರ ಅನಾಥಾಶ್ರಮದಲ್ಲಿ ಸಂಭವಿಸಿದ ಘಟನಾವಳಿಗಳು ಮಾನಸ್ತಂಭ ಮುರಿದುಬಿದ್ದ ಅಪಶಕುನದ ಭವಿಷ್ಯವನ್ನು ನಿಜವನ್ನಾಗಿ ಮಾಡಿವೆ.

## ಲಂಪಟರ ಮಡಿಲಿನಲ್ಲಿ ಆಶ್ರಮ

ಕುಂಭೋಜವನ್ನು ತೆರವು ಮಾಡಿದ ಮೇಲೆ ತಮ್ಮ ಸ್ವೇಚ್ಛಾಚಾರಗಳಿಗಾಗಿ ಕಾರ್ಯಕ್ಷೇತ್ರವೊಂದನ್ನು ಹುಡುಕುತ್ತಿದ್ದ ಪಾರ್ಶ್ವಕೀರ್ತಿವರ್ಣಿಗಳಿಗೆ ತಮ್ಮೂರಿನಲ್ಲಿಯೇ ಇದ್ದ ಆಶ್ರಮ ಕಣ್ಣಿಗೆ ಬಿತ್ತು. ಈ ಹೊತ್ತಿಗೆ ಅವರು ನಯವಂಚನೆ, ಕುತಂತ್ರಗಳಲ್ಲಿಯೂ ಸಾಕಷ್ಟು ಪಳಗಿದ್ದರು. ತಮ್ಮ ಆಪ್ತಮಿತ್ರರೊಬ್ಬರನ್ನು ಹಿಡಿದು ಅವರ ಮೂಲಕ ಶಾಲೆಯ ಮುಖ್ಯೋಪಾಧ್ಯಾಯರಾದ ಕಲಗೊಂಡರಿಗೆ ಕಿರುಕುಳ ನೀಡಿ ಅವರ ಸ್ಥಾನವನ್ನು ಖಾಲಿಮಾಡಿಸುವುದರಲ್ಲೂ ಪಾರ್ಶ್ವಕೀರ್ತಿಗಳು ಯಶಸ್ವಿಯಾದರು. ಇನ್ನು ತಾವು ಆಶ್ರಮದಲ್ಲಿ ಸೇರಿಕೊಳ್ಳುವುದು ಹೇಗೆ? ಶೇಡಬಾಳದ ಊರಿನ ಜನ ಇದಕ್ಕೆ ಸಹಕರಿಸಿಯಾರೇ? ಖಂಡಿತಾ ಸಾಧ್ಯವಿಲ್ಲ! ಪಾರ್ಶ್ವಕೀರ್ತಿಗಳು ಇದಕ್ಕೊಂದು ಸಂಚು ಮಾಡಿದರು.

ಚಾರಿತ್ರ್ಯಚಕ್ರವರ್ತಿಗಳೆಂದು ಹೆಸರು ಪಡೆದ ಆಚಾರ್ಯ ಶಾಂತಿಸಾಗರ ಮುನಿಗಳು ಆ ಕಾಲದಲ್ಲಿ ಮಹಾರಾಷ್ಟ್ರದ ಸತಾರಾ ಜಿಲ್ಲೆಯಲ್ಲಿ ವಿಹಾರ ಮಾಡುತ್ತಿದ್ದರು. ಪಾರ್ಶ್ವಕೀರ್ತಿಗಳು ಶೇಡಬಾಳದ ತಮ್ಮ ಆಪ್ತರೊಬ್ಬರನ್ನು ಕರೆದುಕೊಂಡು ಶಾಂತಿಸಾಗರರನ್ನು ಭೇಟಿಯಾದರು. ಶೇಡಬಾಳದ ಆಶ್ರಮದ ಅವ್ಯವಸ್ಥೆಯನ್ನು ಪ್ರಸ್ತಾಪಿಸಿ "ಆಶ್ರಮ ಹಾಳಾಗಿದೆ. ತಾವು ಅಲ್ಲಿಗೆ ಬಂದು ಅಲ್ಲಿಯೇ ನೆಲೆಸಿ ಆಶ್ರಮವನ್ನು ಸರಿಪಡಿಸಿ" ಎಂದು ಹೇಳಿ ಶೇಡಬಾಳಕ್ಕೆ ಬರಲು ಒತ್ತಾಯಿಸಿದರು. ಶಾಂತಿಸಾಗರರು ಈ ವ್ಯವಹಾರದ ಜಾಲಕ್ಕೆ ಸಿಲುಕಿಕೊಳ್ಳುವವರಲ್ಲ ಎಂಬುದು ಪಾರ್ಶ್ವಕೀರ್ತಿಗಳಿಗೆ ಚೆನ್ನಾಗಿ ತಿಳಿದಿದ್ದರೂ ಅವರನ್ನು ವಂಚಿಸುವ ಏಕೈಕ ಉದ್ದೇಶದಿಂದ ಈ ಮಾತುಗಳ ನ್ನಾಡಿದರು. ಶಾಂತಿಸಾಗರರು ಪಾರ್ಶ್ವಕೀರ್ತಿಗಳ ಕಪಟತನವನ್ನು ಅರಿಯದೆ "ಆಶ್ರಮ ಎಲ್ಲರಿಗೂ ಸೇರಿದ್ದು. ನೀವೆಲ್ಲಾ ಸೇರಿ ಅದನ್ನು ಸರಿಪಡಿಸಿಕೊಳ್ಳಿ". ಎಂದು ಸಲಹೆ ನೀಡಿ ತಾವು ಶೇಡಬಾಳಕ್ಕೆ ಬರುವವರಲ್ಲ ಎಂಬುದನ್ನು ಸ್ಪಷ್ಟಪಡಿಸಿದರು. ಪಾರ್ಶ್ವಕೀರ್ತಿಗಳು ಆಗ "ನಾವು ಆಶ್ರಮದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತೇವೆ ಅದಕ್ಕೆ ನೀವು ಒಪ್ಪಿಗೆ ನೀಡಬೇಕು" ಎಂದು ಕೇಳಿಕೊಂಡರು. ಪಾರ್ಶ್ವಕೀರ್ತಿಗಳ ಒತ್ತಾಯದ ಮೇರೆಗೆ ಶಾಂತಿಸಾಗರರು ಅವರನ್ನು ಆಶ್ರಮದಲ್ಲಿ ಅಧಿಷ್ಠಾತ ಎಂದು ತೆಗೆದುಕೊಳ್ಳಬಹುದೆಂದು ಟ್ರಸ್ಟಿನ ಅಧಿಕಾರವರ್ಗದ ಪ್ರತಿನಿಧಿಯೊಬ್ಬರಿಗೆ ಸೂಚಿಸಿದರು. ಪಾರ್ಶ್ವಕೀರ್ತಿಗಳ ಆಶ್ರಮಪ್ರವೇಶದ ಸಂಚು ನೆರವೇರಿತು. ಟ್ರಸ್ಟಿನ ಆಡಳಿತಮಂಡಳಿಯವರು ಶಾಂತಿಸಾಗರರ ಸೂಚನೆಯನ್ನು ಉಪೇಕ್ಷಿಸಲಾಗದೆ ಇಷ್ಟವಿಲ್ಲದೆ ಪಾರ್ಶ್ವಕೀರ್ತಿಗಳನ್ನು ಅನಾಥಾಶ್ರಮದ 'ಅಧಿಷ್ಠಾತ'ರನ್ನಾಗಿ ಸೇರಿಸಿಕೊಂಡರು. ಅದುವರೆಗೆ ಆಶ್ರಮದಲ್ಲಿ ಅಧಿಷ್ಠಾತ ಎಂಬ ಹುದ್ದೆಯಿರಲಿಲ್ಲ. ಸಹಾಯಕ ಮಂತ್ರಿಗಳೇ ಆಶ್ರಮದ ದಿನನಿತ್ಯದ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು. ಪಾರ್ಶ್ವಕೀರ್ತಿಗಳು ಆಶ್ರಮದಲ್ಲಿ ಅಧಿಷ್ಠಾತರಾಗಿ ಪ್ರವೇಶಪಡೆದ ಕಾಲ 1950 ಅಥವಾ 1951 ಇರಬಹುದು. ಈ ಸಮಯದಲ್ಲಿ ಆಶ್ರಮದಲ್ಲಿ ಸಹಾಯಕ ಮಂತ್ರಿಗಳಾಗಿದ್ದ ಬಾಳಗೌಡ ದೇವಗೌಡ ಪಾಟೀಲ್ ಎಂಬುವರು ಪಾರ್ಶ್ವಕೀರ್ತಿಗಳು ಆಶ್ರಮವನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳಲು ನಡೆಸಿದ ಕುಯುಕ್ತಿಗಳನ್ನು ಅರಿತು ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು.

ಪಾರ್ಶ್ವಕೀರ್ತಿಗಳು ಅನಾಥಾಶ್ರಮ ಸೇರಿದ ಕೂಡಲೇ ಮೊದಲು ತಮ್ಮ ಸ್ಥಾನಭದ್ರತೆಯ ಕಡೆ ಹೆಚ್ಚು ಗಮನ ಕೊಟ್ಟರು. ಶೇಡಬಾಳದವರೇ ಆದ ಅಣ್ಣಾಸಾಹೇಬ್ ಲಗಾರೆ ಎಂಬುವರನ್ನು ಆಶ್ರಮದ ಸಹಾಯಕ ಮಂತ್ರಿಗಳನ್ನಾಗಿ ಮಾಡುವಂತೆ ಟ್ರಸ್ಟಿಗಳಿಗೆ ಶಿಫಾರಸು ಮಾಡಿ ಅದರಲ್ಲಿ ಯಶಸ್ವಿಯಾದರು. ಅಣ್ಣಾಸಾಹೇಬ್ ಲಗಾರೆ ದೈಹಿಕವಾಗಿ ಧಡೂತಿಯಾದ ಮನುಷ್ಯ. ಹಾಗೆಯೇ ಜೋರಿನವನೂ ಹೌದು. ನಯವಾಗಿ ಮಾತನಾಡುತ್ತಾ ಆಗಬೇಕಾದ ಕಾರ್ಯ ಸಾಧಿಸುವುದರಲ್ಲಿ ಗಟ್ಟಿಗ. ಆದರೆ

ಬಿಡಿಸಲಾರದಂತಹ ಮದ್ಯಪಾನ ಚಟ ಈತನ ಬಾಳಿಗೆ ಅಂಟಿಬಂದಿತ್ತು. ಲಗಾರೆ ಸರೆಕುಡುಕನೆಂಬುದು ಊರಿಗೆಲ್ಲಾ ತಿಳಿದ ಸಂಗತಿಯಾಗಿತ್ತು. ಇಂಥವನು ಪಾರ್ಶ್ವಕೀರ್ತಿಗಳಲ್ಲಿಟ್ಟಿದ್ದ ಸ್ನೇಹದಿಂದಾಗಿ ಆಶ್ರಮದ ಸಹಾಯಕಮಂತ್ರಿಯಾಗಿ ಧಾರ್ಮಿಕ ರಂಗದಲ್ಲಿ ದುಡಿಯುವಂತಾಯಿತು.

ಸರೆಯೆಂದರೆ ಜೊಲ್ಲುಸುರಿಸುವ ಲಗಾರೆ ಹೆಣ್ಣೆಂದರೆ ಹಸಿದ ಹೆಬ್ಬುಲಿಯಂತೆ ಬಾಯಿಬಿಡುವ ಪಾರ್ಶ್ವಕೀರ್ತಿಗಳು ಒಂದುಗೂಡಿದುದು ಬಿರುಗಾಳಿ ಮತ್ತು ಬೆಂಕಿ ಒಂದುಗೂಡಿದಂತಾಯಿತು. ತಮ್ಮಿಬ್ಬರ ಲಾಲಸೆಗಳನ್ನು ಈಡೇರಿಸಿಕೊಳ್ಳಲು ಈ ಲಂಪಟರಿಬ್ಬರೂ ಅನಾಥಾಶ್ರಮವನ್ನು ಹೀರಲು ಸನ್ನದ್ಧರಾದರು. 1927ರಿಂದ ಸಂಭಾವಿತರಾದವರ ವಶದಲ್ಲಿದ್ದ ಆಶ್ರಮ ಹೀಗೆ 1950ರ ಹೊತ್ತಿಗೆ ಲಂಪಟರಿಬ್ಬರ ಮಡಿಲಿಗೆ ಬಿತ್ತು.

## ನೇಮಕಗಳು

ಪಾರ್ಶ್ವಕೀರ್ತಿಗಳು ಆಶ್ರಮದ ಸ್ಥಳೀಯ ಆಡಳಿತವನ್ನು ತಮ್ಮ ಕೈವಶಪಡಿಸಿಕೊಂಡ ಮೇಲೆ, ಆಶ್ರಮದ ಉದ್ಯೋಗಗಳಿಗೆ ತಮ್ಮ ಮರ್ಜಿ ಕಾಯುವ ಜನರನ್ನೇ ತುಂಬಿಕೊಳ್ಳಲು ಹವಣಿಸಿದರು. ಅಣ್ಣಾಸಾಹೇಬ್ ಲಗಾರೆ ಪಾರ್ಶ್ವಕೀರ್ತಿಗಳ ಬೆಂಬಲದಿಂದಲೇ ಬಂದುದರಿಂದ ಅವರಿಗೆ ಎದುರು ಬೀಳುವಂತಹ ಪ್ರಸಂಗವೇನಿರಲಿಲ್ಲ. ಆದರೆ ಲಗಾರೆ ಪಾರ್ಶ್ವಕೀರ್ತಿಗಳಿಗೆ ಅಂಜಿ ನಡೆಯುವಂತಹ ಮನುಷ್ಯನೂ ಅಲ್ಲ. ಇಬ್ಬರೂ ಭಿನ್ನಭಿನ್ನವಾದ ಚಟಗಳ ದಾಸರಾದುದರಿಂದ ಇದು ಪರಸ್ಪರರಿಗೆ ಚೆನ್ನಾಗಿ ತಿಳಿದೂ ಇದ್ದುದರಿಂದ ಆಶ್ರಮದ ಅಧಿಕಾರ ಸ್ಥಾನಗಳನ್ನು ಮೀರಿದ ಸಲುಗೆಯು ಸ್ನೇಹ ಇಬ್ಬರನ್ನೂ ಒಡೆಯದಂತೆ ಬಂಧಿಸಿತ್ತು. ಒಮ್ಮೊಮ್ಮೆ ಪಾರ್ಶ್ವಕೀರ್ತಿಗಳು ಲಗಾರೆಯ ಮುಂದೆ ಸಂಪನ್ನತೆಯ ಸೋಗು ಹಾಕಿದಾಗ ಈ ಲಗಾರೆ "ಏನೋ...ಸುರ್ಯಾಮಗ... ಏನೂಂತಾ ಸ್ವಾಮ್ಯಾಗಿದ್ದಿ ನಿಂದೆಲ್ಲಾ ನನಗೆ ಗೊತ್ತೈತಿ ಬಿಡು" ಎಂದು ಪಾರ್ಶ್ವಕೀರ್ತಿಗಳಿಗೆ ನೀರಿಳಿಸುತ್ತಿದ್ದನು. ಆಗ ಪಾರ್ಶ್ವಕೀರ್ತಿಗಳು "ಏ....ನಾ ಒಬ್ಬನೇ ಇದ್ದಾಗ ಏನ್ಬೇಕಾದ್ರೂ ಅನ್ನಪಾ....ಮಂದಿ ಮುಂದೆ ಮಾತ್ರ ಬೈಬೇಡ" ಎಂದು ಅಂಗಲಾಚುತ್ತಿದ್ದರು. ಆತ್ಮೀಯತೆ ಹೀಗಿದ್ದ ಮೇಲೆ ಯಾರ ಮರ್ಜಿಯನ್ನು ಯಾರು ಕಾಯ್ದರೆ ಏನಂತೆ !

ಪಾರ್ಶ್ವಕೀರ್ತಿಗಳು ಟ್ರಸ್ಟಿನ ಅಧಿಕಾರ ವರ್ಗದವರ ಮೇಲೆ ತಮ್ಮ ಪ್ರಭಾವ ಬೀರಿ, ತಾವು ಇಷ್ಟಪಟ್ಟ ಕೆಲವರಿಗೆ ಆಶ್ರಮದಲ್ಲಿ ಕೆಲಸ ಕೊಡಿಸಿದರು. ನಾಗಾವ ಗ್ರಾಮದ (ಸಾಂಗ್ಲಿಜಿಲ್ಲೆ, ತಾಸಗಾಂವ್ ತಾಲ್ಲೂಕು) ಜಂಬುಕುಮಾರ್ ಪಾರ್ಶ್ವನಾಥ ತಿರಟೆ ಎಂಬುವರು ಧಾರ್ಮಿಕ ಶಿಕ್ಷಕರಾಗಿ ನೇಮಕಗೊಂಡರು. ಶೇಡಬಾಳದವರೇ ಆಗಿ

ಬೇಕೊಂದೆಡೆಯಲ್ಲಿ ಕೆಲಸಕ್ಕಿದ್ದ ಅಶೋಕ್ ದಾದಾ ಪಾಟೀಲ್ ಎಂಬುವರು ಆಶ್ರಮದ ಶಾಲೆಯ ಸಹಾಯಕ ಶಿಕ್ಷಕರಾಗಿ ನೇಮಕಗೊಂಡರು. ಮತ್ತೊಬ್ಬರು ಶಾಲೆಯ ಮುಖ್ಯೋಪಾಧ್ಯಾಯರಾಗಿ ನೇಮಕವಾದರು. ಇದೇ ಸಮಯದಲ್ಲಿ ಗುಜರಾತ್‌ನ ಸೂರತ್ ನಗರದ ಸೋನೂಬಾಯಿ ತೀಸವಾಲ ಎಂಬ ಬ್ರಹ್ಮಚಾರಿಣಿಯೊಬ್ಬರು ಅನಾಥಾಶ್ರಮದಲ್ಲಿ ವಾಸಿಸುತ್ತಿದ್ದರು. ಪಾರ್ಶ್ವಕೀರ್ತಿಗಳ ಕಪಟತನಗಳ ಪರಿಚಯ ಅವರಿಗೆ ಚೆನ್ನಾಗಿ ತಿಳಿದಿತ್ತು. ಆದರೆ ತನ್ನ ಕೆಲವು ದೌರ್ಬಲ್ಯಗಳಿಂದಾಗಿ ಆಕೆ ಪಾರ್ಶ್ವಕೀರ್ತಿಗಳ ವ್ಯವಹಾರಗಳನ್ನು ಕಂಡೂ ಕಾಣದಂತೆ ಇದ್ದು ಪಾರ್ಶ್ವಕೀರ್ತಿಗಳನ್ನು ಆದರದಿಂದಲೇ ಕಾಣುತ್ತಿದ್ದರು.

## ಸೋರುವ ಜೋಳಿಗೆ

ಅನಾಥಾಶ್ರಮವನ್ನು ನಡೆಸಲು ಆದರ ಟ್ರಸ್ಟ್‌ನಲ್ಲಿ ಧ್ರುವನಿಧಿಯಿದೆ, ಆಶ್ರಮದ ಹೆಸರಿನಲ್ಲಿ ಹನ್ನೊಂದು ಎಕರೆ ಖುಷ್ಕಿ ಜಮೀನಿದೆ. ಕಾಲಕಾಲಕ್ಕೆ ಆಶ್ರಮದ ಟ್ರಸ್ಟಿಗೆ ದಾನಾದಿಗಳು ಬರುವುದೂ ಉಂಟು. ಪಾರ್ಶ್ವಕೀರ್ತಿಗಳು ಆಶ್ರಮಕ್ಕೆ ಬಂದು ಬೇರೂರಿದ ಮೇಲೆ ಆಶ್ರಮದ ಅಭಿವೃದ್ಧಿಯ ಹೆಸರಿನಲ್ಲಿ ಹಣಸಂಗ್ರಹ ಮಾಡುವ ಕೆಲಸವನ್ನು ಪ್ರಧಾನವಾಗಿ ಕೈಗೊಂಡರು. ಇದಕ್ಕಾಗಿ ಅಣ್ಣಾಸಾಹೇಬ್ ಲಗಾರೆಯೊಂದಿಗೆ ಕೂಡಿ ಮಹಾರಾಷ್ಟ್ರ ಕರ್ನಾಟಕದಲ್ಲೆಲ್ಲಾ ಸುತ್ತಾಡಿದರು. ಮದರಾಸ್ ನಗರಕ್ಕೂ ಸಹ ಇವರು ಹೋಗಿ ದೊಡ್ಡಮೊತ್ತದ ಹಣಸಂಗ್ರಹ ಮಾಡಿದರು. ವೈನಾಡಿಗೂ ಹೋಗಿ ಅಲ್ಲಿನ ಶ್ರೀಮಂತರನ್ನು ಕಂಡು ಹಣ ಕೂಡಿಸಿದರು.

ಇವರಿಬ್ಬರೂ ದೇಶಸಂಚಾರ ಮಾಡಿ ತಂದ ಹಣವೆಷ್ಟು ? ಯಾರು ಯಾರು ಎಷ್ಟೆಷ್ಟು ಹಣ ದಾನಮಾಡಿದರು ? ಸಂಚರಿಸಲು ಆದ ವೆಚ್ಚವೆಷ್ಟು ಎಂಬ ವಿವರಗಳು ಬಹಿರಂಗವಾಗಿ ಪ್ರಕಟವಾಗಲಿಲ್ಲ. ಇವರು ಕೊಟ್ಟಷ್ಟು ಹಣವನ್ನು ಟ್ರಸ್ಟಿನವರು ಜಮಾಮಾಡಿಕೊಂಡರು ಇದರಲ್ಲೇನಾದರೂ ವಂಚನೆ ನಡೆದಿದೆಯೋ ಎಂದು ಅವರು ಪರೀಕ್ಷಿಸಲು ಹೋಗಲಿಲ್ಲ. ನಿಜಸಂಗತಿಯೆಂದರೆ ಇವರು ತಂದ ಹಣವನ್ನೆಲ್ಲಾ ಪ್ರಾಮಾಣಿಕವಾಗಿ ಜಮಾಮಾಡಲಿಲ್ಲ. ಸಂಗ್ರಹಿಸಿದ ಹಣ ಬಹುದೊಡ್ಡ ಮೊತ್ತವಾದರೆ ಜಮಾ ಮಾಡಿದ ಹಣ ಬಹಳ ಬಹಳ ಅಲ್ಪವಾಗಿತ್ತು.

ಹೀಗೆ ಪಾರ್ಶ್ವಕೀರ್ತಿಗಳು ಲಗಾರೆಯೊಂದಿಗೆ ಕೂಡಿ ಸಂಗ್ರಹಿಸಿದ ಹಣ ಸೋರುವ ಜೋಳಿಗೆಯ ಹಣವಾಗಿ ಬಹಳ ಅಲ್ಪಭಾಗ ಮಾತ್ರ ಆಶ್ರಮದ ಉಪಯೋಗಕ್ಕೆ ಬಂತು.

1952ನೇ ವರ್ಷದ ಸಮಯದಲ್ಲಿ ಶಾಂತಿಸಾಗರರು ಹೇರವಾಡಕ್ಕೆ ಬಂದಿದ್ದಾಗ ವೈನಾಡಿನ ಸುಪ್ರಸಿದ್ಧ ದಾನಿಗಳಾದ ಶ್ರೀ ಪದ್ಮಯ್ಯಗೌಡರು ಅನಾಥಾಶ್ರಮಕ್ಕೆ ಹಣ

ಸಾವಿರ ರೂಪಾಯಿಗಳ ದಾನ ನೀಡಿದರು. ಟ್ರಸ್ಟಿಗಳು ಇದರೊಂದಿಗೆ ಮತ್ತಷ್ಟು ಹಣವನ್ನು ದಾನಿಗಳಿಂದ ಸಂಗ್ರಹಿಸಿ ಆಶ್ರಮದಲ್ಲಿ ಒಂದು ವಿಶಾಲವಾದ ಸ್ವಾಧ್ಯಾಯಭವನ್ನು ಕಟ್ಟಿಸಿದರು. (ಕಟ್ಟಡ 1954ರಲ್ಲಿ ಪೂರ್ಣವಾಯಿತು) ಈ ಸಮಯದಲ್ಲಿಯೇ ಅನಾಥಾಶ್ರಮದ ದಿಕ್ಕುತಪ್ಪಿದ ವಿದ್ಯಾರ್ಥಿಗಳು ಶಾಂತಿಸಾಗರರ ಗಮನಕ್ಕೆ ಬಂದವು. ಜನರು ಪಾಷ್ಟಗೀತೆಗಳು ಮತ್ತು ಲಗಾರೆಯವರ ದುರ್ವ್ಯವಹಾರಗಳನ್ನು ಶಾಂತಿಸಾಗರರಲ್ಲಿ ಅರಿಕೆ ಮಾಡಿಕೊಂಡರು. ಶಾಂತಿಸಾಗರರಿಗೆ ಇದರಿಂದ ಮನೋವ್ಯಥೆಯುಂಟಾಯಿತು. ಅವರು ಇದನ್ನು ಸರಿಪಡಿಸುವ ವ್ಯವಹಾರದಲ್ಲಿ ಸಿಲುಕಿಕೊಳ್ಳಲು ಇಷ್ಟಪಡಲಿಲ್ಲ. ಇನ್ನೂ ಕೆಲವು ದಿನಗಳ ಕಾಲ ಶೇಡಬಾಳದಲ್ಲಿ ಉಳಿಯಬೇಕೆಂದಿದ್ದ ಅವರು ಈ ಸುದ್ದಿ ತಿಳಿದ ತಕ್ಷಣ ಆಶ್ರಮದಲ್ಲಿ ಉಳಿಯಲಿಚ್ಛಿಸದೆ ಅಲ್ಲಿಂದ ಹೊರಟುಬಿಟ್ಟರು. ಈ ಸಮಯದಲ್ಲಿ ಆಶ್ರಮದ ಟ್ರಸ್ಟಿನ ಮಹಾಮಂತ್ರಿಯಾಗಿ ಸಾಂಗ್ಲಿಯ ಶ್ರೀ ಗುಲಾಬ್‌ಚಂದ್ ಖೇಮ್‌ಚಂದ್‌ಷಹಾ ಎಂಬುವರು ಕಾರ್ಯನಿರ್ವಹಿಸುತ್ತಿದ್ದರು.

ಅಧ್ಯಾಯ : ಐದು

# ಒಂದು ಅನೈತಿಕ ಸಂಬಂಧ

ಶೇಡಬಾಳದ ಆಶ್ರಮದಲ್ಲಿ 1952ರ ಸಮಯದಲ್ಲಿ ಸುಮಾರು 80 ಜನ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಇವರೆಲ್ಲರಿಗೂ ಉಚಿತವಾದ ಊಟ ವಸತಿಯ ವ್ಯವಸ್ಥೆಯಿತ್ತು. ಭೋಜನಶಾಲೆಯ ಸಹಾಯಕ ಕೆಲಸಗಳಿಗಾಗಿ ಸುಮಾರು ಮುವ್ವತ್ತು ವರ್ಷ ವಯಸ್ಸಿನ ಒಬ್ಬ ಹೆಣ್ಣಾಳು ಬರುತ್ತಿದ್ದಳು. ಅವಳ ಹೆಸರನ್ನು ಮಾರ್ಪಡಿಸಿ ಬನಾರಸೀಬಾಯಿ ಎಂಬುದಾಗಿ ಈ ಪುಸ್ತಕದಲ್ಲಿ ಕರೆಯಲಾಗಿದೆ. ವಿವಾಹಿತೆಯಾಗಿ ಮಕ್ಕಳಿದ್ದ ಈಕೆ ನೋಡಲು ಅಂದವಾಗಿದ್ದಳು. ಇವಳ ಮೊದಲನೆಯ ಮಗಳು ಆಗಲೇ ವಯಸ್ಸಿಗೆ ಬಂದಿದ್ದಳು. ಬನಾರಸೀ ಬಾಯಿಯ ಒಬ್ಬ ಮಗನೂ ಸಹ ಆಶ್ರಮದ ದನಗಳನ್ನು ಕಾಯುವ ಕೆಲಸ ಮಾಡಿಕೊಂಡಿದ್ದನು.

ಬನಾರಸೀಬಾಯಿ ಸ್ವಭಾವತಃ ಬಹಳ ಒಳ್ಳೆಯವಳು, ಪ್ರಾಮಾಣಿಕಳು. ಭೋಜನಶಾಲೆಯ ಸಹಾಯಕ ಕೆಲಸಗಳನ್ನು ಪ್ರೇಮದಿಂದ ಮಾಡುತ್ತಿದ್ದಳು. ಎಮ್ಮೆಯಿಂದ ಹಾಲು ಕರೆಯುವುದು, ಜೋಳವನ್ನು ಶುದ್ಧಮಾಡುವುದು, ಪಾತ್ರೆ ತೊಳೆಯುವುದು, ಹಾಗೆ ಖಾರದ ಪುಡಿಯನ್ನು ಕುಟ್ಟಿಕೊಡುವುದು. ಇತ್ಯಾದಿ ಕೆಲಸಗಳನ್ನೆಲ್ಲಾ ಹೇಳಿಸಿಕೊಳ್ಳದೆ ಬಹಳ ಅಚ್ಚುಕಟ್ಟಾಗಿ ಮಾಡಿಕೊಡುತ್ತಿದ್ದಳು. ಕ್ಷುಲ್ಲಕ ಪಾರ್ಶ್ವ

ಕೀರ್ತಿಗಳ ಕಾಮುಕಕಣ್ಣು ಬನಾರಸೀಬಾಯಿಯ ಮೇಲೆ ಬೀಳಲು ತಡವಾಗಲಿಲ್ಲ. ನೆಪಗಳನ್ನು ಹುಡುಕಿಕೊಂಡು ಇವರು ಆಕೆಯ ಬೆನ್ನು ಬೀಳಲಾರಂಭಿಸಿದರು. ಒಮ್ಮೆ ಅವಕಾಶವನ್ನು ಸಾಧಿಸಿ "ನಿನ್ನ ಮೇಲೆ ನನಗೆ ಮನಸ್ಸಾಗಿದೆ. ಹಗಲು ರಾತ್ರಿ ನಿನ್ನದೇ ಚಿಂತೆ. ನಿನ್ನನ್ನು ಬಿಟ್ಟು ನಾನೊಂದು ಕ್ಷಣವೂ ಇರಲಾರೆ" ಎಂದು ಮುಂತಾಗಿ ಪ್ರೇಮಾಲಾಪಕ್ಕೆ ತೊಡಗಿದರು. ಬನಾರಸೀಬಾಯಿಗೆ ಇವರ ಮಾತುಗಳಿಂದ ಬಹಳ ಅಂಜಿಕೆಯುಂಟಾಯಿತು. ಅವರ ಬಲೆಗೆ ಬೀಳಲು ಆಕೆಯ ಮನಸ್ಸು ಒಪ್ಪಲಿಲ್ಲ. ಆಕೆ "ಇದು ಎಲ್ಲಾದರೂ ಉಂಟೆ ? ನೀವು ಸ್ವಾಮಿಗಳಾಗಿದ್ದೀರಿ. ನಿಮ್ಮಂಥವರು ಹೀಗೆ ಮಾತನಾಡಬಾರದು. ದಯವಿಟ್ಟು ನನ್ನ ಹಿಂದೆ ಬೀಳಬೇಡಿ. ನನ್ನ ಗಂಡ ಸಿಟ್ಟಿನ ಮನುಷ್ಯ. ಇದೇನಾದರೂ ಅವನಿಗೆ ತಿಳಿದರೆ ಆತ ಖಂಡಿತಾ ನಿಮ್ಮನ್ನು ಉಳಿಸುವುದಿಲ್ಲ." ಎಂದು ಪ್ರತ್ಯುತ್ತರ ಕೊಟ್ಟು ಹೆಚ್ಚು ಮಾತಿಗೆ ಅವಕಾಶಕೊಡದೆ ಅಲ್ಲಿಂದ ಕಾಲ್ತೆಗೆದಳು.

ಪಾರ್ಶ್ವಕೀರ್ತಿಗಳು ತಮ್ಮ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಬನಾರಸೀಬಾಯಿ ಇರುವ ಕಡೆ ಇವರ ಸುಳಿದಾಟ ಹೆಚ್ಚಾಯಿತು. ಮತ್ತೊಂದು ಅವಕಾಶವನ್ನು ಸಾಧಿಸಿ, ಪ್ರಲೋಭನೆಗಳ ಆಮಿಷವೊಡ್ಡಿ ಆಕೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರು. "ನೀನೂ ಹೂ ಅನ್ನು...ನಿನಗೆ ಬೇಕಾದ್ದನ್ನು ಕೊಡುತ್ತೇನೆ. ಜೋಳ, ಅಕ್ಕಿಯ ಮೂಟೆಯನ್ನೇ ಬೇಕಾದರೆ ನಿನ್ನ ಮನೆಗೆ ಕಳುಹಿಸಿಕೊಡುತ್ತೇನೆ." ಎಂದು ದಮ್ಮಯ್ಯ ಗುಡ್ಡೆ ಹಾಕಿದರು. ಬನಾರಸೀಬಾಯಿಗೆ ಕಾಮಾಂಧರಾಗಿ ಹುಚ್ಚರಂತಾಗಿರುವ ಪಾರ್ಶ್ವಕೀರ್ತಿಗಳನ್ನು ನೋಡಿ ಮರುಕವುಂಟಾಯಿತು. ಆದರೂ ಅವಳು ಸೋಲದೆ ಹೇಳಿದಳು "ನೀವು ಹೀಗೆ ನಮ್ಮಂಥ ಬಡಮಂದಿಯನ್ನು ಕಾಡಬೇಡ್ರಿ. ನೀವು ಇಚ್ಛೆಪಟ್ಟರೆ ನನಗಿಂತಲೂ ಚನ್ನಾಗಿರುವ ಹೆಣ್ಣೇ ನಿಮಗೆ ಸಿಗಬಹುದು. ಆದ್ದರಿಂದ ನಮ್ಮ ಪಾಡಿಗೆ ನಮ್ಮನ್ನು ಬಿಡ್ರಿ" ಪಾರ್ಶ್ವಕೀರ್ತಿಗಳು ತಮ್ಮ ಆಸೆಯನ್ನು ಬಿಟ್ಟುಕೊಡಲಿಲ್ಲ. ಮತ್ತೆ ಆಕೆಯನ್ನು ಒತ್ತಾಯ ಪಡಿಸುತ್ತಾ "ನಿನ್ನ ಹೊರತು ನನಗೆ ಯಾವ ರಂಭೆಯೂ ಬೇಡ ನಾನು ಈ ತಾಟಿನಲ್ಲಿ ಊಟ ಮಾಡುವವ ಎಂದರೆ ನನಗೆ ಈ ತಾಟು ಬೇಕೇಬೇಕು ಇನ್ನೊಂದು ತಾಟನ್ನು ನಾ ಒಲ್ಲೆ" ಎಂದು ಚತುರೋಕ್ತಿಗಳ ಬಲೆಯನ್ನು ಆಕೆಯ ಮೇಲೆ ಬೀಸಿದರು. ಬನಾರಸೀಬಾಯಿಯ ಸಂಯಮ ಕರಗುತ್ತಾ ಬಂತು. ಆಮಿಷಗಳಿಂದ ತಪ್ಪಿಸಿಕೊಂಡು ಹೆಚ್ಚು ದಿನ ಆಕೆ ಇರಲಾಗಲಿಲ್ಲ. ಕಡೆಗೊಮ್ಮೆ ಪಾರ್ಶ್ವಕೀರ್ತಿಗಳ ಕಾಮಪಿಪಾಸೆಗೆ ಒಳಗಾದಳು. ಮುಚ್ಚುಮರೆಯಲ್ಲಿ ಇವರ ಪ್ರಣಯಲೀಲೆಗಳು ನಡೆಯ ತೊಡಗಿದವು. ಬನಾರಸೀಬಾಯಿ ಪಾರ್ಶ್ವಕೀರ್ತಿಗಳಿಂದಾಗಿ ತನ್ನ ಶೀಲ ಕಳೆದುಕೊಂಡರೂ ಇದನ್ನೇ ಕಾರಣವನ್ನಾಗಿ ಮಾಡಿಕೊಂಡು ಅವರಿಂದ ಹಣದೋಚುವ ಲೋಭಕ್ಕೆ ಮಾತ್ರ ಇಳಿಯಲಿಲ್ಲ. ಗಂಡನ ಸಂಶಯಕ್ಕೆ ಈಡಾಗಬಹುದೆಂಬ ಭೀತಿಯೇ ಅವಳ ಈ ನಿರ್ಧಾರಕ್ಕೆ ಪ್ರಧಾನ ಕಾರಣವಾಗಿತ್ತು.

ಈ ಅನೈತಿಕ ಸಂಪರ್ಕ ಸಾಕಷ್ಟು ಗಾಢವಾದ ಮೇಲೆ ಪಾರ್ಶ್ವಕೀರ್ತಿಗಳಿಗೆ ಮತ್ತೊಂದು ದುರ್ಮೋಹವುಂಟಾಯಿತು. ನಿನ್ನ ಹೊರತು ಇನ್ನೊಂದು ಹಾಟನ್ನು ನಾ ಒಲ್ಲೆ ಎಂದು ಹೇಳಿದ್ದ ಪಾರ್ಶ್ವಕೀರ್ತಿಗಳು ಒಂದು ದಿನ ಬನಾರಸೀಬಾಯಿಯ ಮಗಳನ್ನು ತಮ್ಮ ಬಳಿಗೆ ಕಳುಹಿಸಿಕೊಡುವಂತೆ ಆಕೆಯನ್ನು ಕೇಳಿದರು. ಈ ಬೇಡಿಕೆಯಿಂದ ತಕ್ಷಣ ಕೆರಳಿದ ಬನಾರಸೀಬಾಯಿ ತನ್ನ ಮಗಳನ್ನೂ ಬಯಸಿದ ಈ ಕಾಮಪಿಶಾಚಿಗೆ ಚೆನ್ನಾಗಿ ಛೀಮಾರಿ ಹಾಕಿದಳು. ಪಾರ್ಶ್ವಕೀರ್ತಿಗಳ ಅನೈತಿಕ ವ್ಯವಹಾರ ಬಹಳ ದಿನ ಗುಟ್ಟಾಗಿ ಉಳಿಯಲಿಲ್ಲ. ಆಶ್ರಮದ ಎಳೆಯ ವಯಸ್ಸಿನ ಹುಡುಗರಿಂದ ಹಿಡಿದು ಊರಿನಜನರೆಲ್ಲರ ಗಮನಕ್ಕೂ ಇದು ಬಂದಿತು. ಕಾಮನ ಕಾಲ್ತುಳಿತಕ್ಕೆ ಸಿಕ್ಕ ಈ ಕಾವಿಯ ಕಥೆ ಮುಂದೆ ಸುತ್ತಮುತ್ತಲ ಊರುಗಳಿಗೂ ವ್ಯಾಪಿಸಿತು.

ಪಾರ್ಶ್ವಕೀರ್ತಿಗಳ ರಹಸ್ಯಜೀವನ ಬಯಲಿಗೆ ಬಂದುದರಿಂದ ಅವರೇನೂ ಅಂಜಲಿಲ್ಲ. ಜನಾಭಿಪ್ರಾಯ ಅವರಿಗೆ ತೃಣಸಮಾನ. ಜನರಿಗೆ ಕಾವಿಯ ಮೇಲೆ ಧಾಳಿ ಮಾಡುವ ಧೈರ್ಯವಿದೆಯೆ? ಕುರಿಗಳಂತಿರುವ ಈ ಜನರು ನನ್ನನ್ನೇನು ಮಾಡಬಲ್ಲರು? ಈ ರೀತಿಯ ಭಂಡತನದ ಗಣಿಯಾಗಿದ್ದ ಪಾರ್ಶ್ವಕೀರ್ತಿಗಳು ತಮ್ಮ ಬಗ್ಗೆ ಊರಿನಲ್ಲಿ ಸುದ್ದಿ ಹರಡಿದ ಆಶ್ರಮದ ವ್ಯಕ್ತಿಗಳಾರಿರಬಹುದು ಎಂದು ಯೋಚಿಸಿ ಅಂಥವರ ಮೇಲೆ ಸೇಡುತೀರಿಸಿಕೊಳ್ಳಲು ಮುಂದಾದರು. ಟ್ರಸ್ಟಿನ ಅಧಿಕಾರ ವರ್ಗದವರಿಗೆ ಈ ಪ್ರಣಯಲೀಲೆಯ ಸುದ್ದಿ ಮುಟ್ಟಿದಾಗ ಪಾರ್ಶ್ವಕೀರ್ತಿಗಳು ಅದಕ್ಕೆ "ಅದು ತಮ್ಮ ವಿರೋಧಿಗಳು ಮಾಡಿರುವ ಅಪಪ್ರಚಾರ" ಎಂದು ಸಬೂಬು ಹೇಳಿದರು.

## ಮುಖಭಂಗ

ಆಶ್ರಮದ ಶಾಲೆಗೆ ಸಹಾಯಕ ಶಿಕ್ಷಕರಾಗಿ ಬಂದಿದ್ದ ಅಶೋಕ್ ದಾದಾ ಪಾಟೀಲ್ (ಅಣ್ಣಾ ಪಾಟೀಲ್ ಎಂದೂ ಕರೆಯುವುದುಂಟು) ಇನ್ನೂ ತರುಣರು. ಶಿಕ್ಷಕರಾದಾಗ ಇವರ ವಯಸ್ಸು ಸುಮಾರು ಇಪ್ಪತ್ತೆರಡು ವರ್ಷಗಳು. ಶೇಡಬಾಳದಲ್ಲಿ 'ಭಾರತಬಿಟ್ಟು ತೊಲಗಿ' ಚಳುವಳಿಯ ಅಲೆಬೀಸಿದಾಗ ಇವರಿಗೆ 15ರ ಪ್ರಾಯ. ಕೊಲ್ಲಾಪುರದ ಕಾರ್ಯಕರ್ತರು ಶೇಡಬಾಳದ ಬೀದಿಗಳಲ್ಲಿ ಸುತ್ತಾಡಿದಾಗ ಅಶೋಕ ಜೊತೆಯ ಹುಡುಗರೊಂದಿಗೆ ಗಾಂಧಿ ಟೋಪಿ ಧರಿಸಿ ಧೈರ್ಯವಾಗಿ ಪ್ರಭಾತಫೇರಿ ಮೆರವಣಿಗೆಯಲ್ಲಿ ಮುಂದಾಳಾಗಿ ಭಾಗಿಯಾಗಿ ಭಾರತಾಂಬೆಗೆ ಎತ್ತರದ ಧ್ವನಿಯಿಂದ ಜೈಕಾರ ಹಾಕಿದ್ದವರು.

ಅಶೋಕ ದಾದಾ ಪಾಟೀಲರು ಆಶ್ರಮದ ಶಾಲೆಯ ಉದ್ಯೋಗ ಹಿಡಿದ ಮೇಲೆ ಪಾರ್ಶ್ವಕೀರ್ತಿಗಳ ನಡವಳಿಕೆಯನ್ನು ಗಮನಿಸುತ್ತಲೇ ಬಂದರು. ಇವರ

ಸ್ವೇಚ್ಛಾಚಾರ ಅಶೋಕರಿಗೆ ಸರಿಕಂಡು ಬರಲಿಲ್ಲ. ಹಾಗೆಯೇ ಧಾರ್ಮಿಕ [illegible] ಜಂಬೂಕುಮಾರ್ ಪಾರ್ಶ್ವನಾಥ ಶಿರಟೆಯುವರಿಗೂ ಇದು ಹಿಡಿಸಲಿಲ್ಲ. ನೈತಿಕ [illegible] ಯಿಂದ ಕೂಡಿ, ಆಶ್ರಮದ ಪ್ರಶಾಂತವಾದ ಧಾರ್ಮಿಕ ಪರಿಸರದಲ್ಲಿ [illegible] ಯಾಗಿ ಅರಳಬೇಕಾಗಿರುವ ಬಾಲಕರ ಮುಗ್ಧಮನಸ್ಸನ್ನು ಪಾರ್ಶ್ವಕೀರ್ತಿಗಳು ತಮ್ಮ ದುರಾಚಾರಗಳಿಂದ ಗೊಂದಲಮಯ ಮಾಡುತ್ತಿರುವಾಗ ಅವರಿಗೆ ಧಾರ್ಮಿಕಶಿಕ್ಷಣ ನೀಡುವುದಾದರೂ ಹೇಗೆ ಸಾಧ್ಯ ? ಹೀಗೆ ಶಿರಟೆಯವರು ಚಿಂತೆಗೊಳಗಾದರು. ಆಶ್ರಮದಲ್ಲಿ ಸ್ವಚ್ಛ ಆಡಳಿತವಿರಬೇಕೆಂಬ ಆಸೆ ಇವರಿಬ್ಬರಲ್ಲಿದ್ದರೂ ಕಾಲ ಇವರಿಗೆ ಅನುಕೂಲಕರವಾಗಿರಲಿಲ್ಲ. ಹಾಗಾಗಿ ಇಬ್ಬರೂ ಆ ಸಮಯದಲ್ಲಿ ತಮ್ಮ ಅಸಮಾಧಾನ ವನ್ನು ಬಹಿರಂಗವಾಗಿ ಪ್ರಕಟಿಸಲು ಹೋಗಲಿಲ್ಲ. ಕೆಲವೊಮ್ಮೆ ತಮಗೆ ಆಪ್ತರಾದವ ರೊಂದಿಗೆ ಈ ಚಿಂತೆಯನ್ನು ಹಂಚಿಕೊಂಡರು

ಪಾರ್ಶ್ವಕೀರ್ತಿಗಳು ತಮ್ಮಿಂದಾಗಿ ಉದ್ಯೋಗ ಪಡೆದವರೆಲ್ಲರೂ ತಮ್ಮಲ್ಲಿ ಪ್ರಶ್ನಾತೀತ ನಿಷ್ಠೆಯನ್ನು ತೋರಬೇಕೆಂದು ಬಯಸುತ್ತಿದ್ದರು. ಆದರಿದು ಸಾಧ್ಯ ವಾಗದೆ ಎರಡು ಬಣಗಳೇರ್ಪಟ್ಟು ತಿಕ್ಕಾಟ ಅನಿವಾರ್ಯವಾಯಿತು. ಪಾರ್ಶ್ವಕೀರ್ತಿ ಗಳು ತಮ್ಮ ಪ್ರಭಾವ ತಂತ್ರಗಳನ್ನುಪಯೋಗಿಸಿ ಟ್ರಸ್ಟಿಗಳ ಮೂಲಕ ಅಶೋಕ ದಾದಾ ಪಾಟೀಲರನ್ನು ಕೆಲಸದಿಂದ ವಜಾಮಾಡಿಸಿದರು. ಅಶೋಕರು ಸುಮ್ಮನೆ ಕೂರಲಿಲ್ಲ. ತಮಗಾದ ಅನ್ಯಾಯದ ವಿರುದ್ಧ ಬೆಳಗಾಂ ಜಿಲ್ಲೆಯ ಸ್ಕೂಲ್ ಬೋರ್ಡಿಗೆ ದೂರು ಸಲ್ಲಿಸಿದರು. ದೂರಿನ ವಿಚಾರಣೆಯಾಗಿ ತೀರ್ಪು ಅಶೋಕರ ಪರವಾಗಿ ಬಂದಿತು. ಆಗ ಸುಪ್ರಸಿದ್ಧ ವಕೀಲರಾಗಿದ್ದ ಶ್ರೀ ಬಿ. ಶಂಕರಾನಂದರು ಅಶೋಕರಿಗೆ ಈ ವಿಚಾರ ದಲ್ಲಿ ಸೂಕ್ತ ಮಾರ್ಗದರ್ಶನ ಮಾಡಿದರು. (ಈಗ ಬಿ. ಶಂಕರಾನಂದರು ಕೇಂದ್ರ ಸಂಪುಟದಲ್ಲಿ ಆರೋಗ್ಯ ಸಚಿವರಾಗಿದ್ದಾರೆ ) ಟ್ರಸ್ಟಿಗಳು ಜಿಲ್ಲಾ ಸ್ಕೂಲ್‌ಬೋರ್ಡಿನ ಆಜ್ಞೆಯಂತೆ ಅಶೋಕ್ ದಾದಾ ಪಾಟೀಲರನ್ನು ಮತ್ತೆ ಕೆಲಸಕ್ಕೆ ತೆಗೆದುಕೊಂಡರು. ಇದರಿಂದಾಗಿ ಪಾರ್ಶ್ವಕೀರ್ತಿಗಳ ಸೇಡು ತೀರಿಸಿಕೊಳ್ಳುವ ಪ್ರಯತ್ನ ಮಣ್ಣುಗೂಡಿ ಅವರ ಮುಖಭಂಗದಲ್ಲಿ ಪರ್ಯವಸಾನವಾಯಿತು. ಅಶೋಕರು ಇನ್ನು ಸುಮ್ಮನೆ ಕೂರುವ ಹಾಗಿರಲಿಲ್ಲ ಸ್ವರಕ್ಷಣೆಗಾಗಿ ಮತ್ತು ಆಶ್ರಮದ ಹೆಸರನ್ನುಳಿಸುವುದಕ್ಕಾಗಿ ಪಾರ್ಶ್ವಕೀರ್ತಿಗಳ ವ್ಯವಹಾರಗಳ ಕಡೆ ನಿಗಾ ಇಟ್ಟರು. ಅವರ ವಿರುದ್ಧ ಬಹಿರಂಗ ವಾಗಿಯೇ ಹೋರಾಡಲು ಸಿದ್ಧರಾದರು. ಶಿರಟೆಯವರು ಅನಾಥಾಶ್ರಮದ ಆದಾಯ ವೆಚ್ಚಗಳ ಲೆಕ್ಕಬರೆಯುತ್ತಿದ್ದರು. ಆ ಸಂದರ್ಭದಲ್ಲಿ ತಮ್ಮ ಗಮನಕ್ಕೆ ಬಂದ ಹಣಕಾಸಿ ಅವ್ಯವಹಾರಗಳನ್ನು ಟ್ರಸ್ಟಿಗಳ ಗಮನಕ್ಕೆ ತರುತ್ತಿದ್ದರು. ಇಬ್ಬರೂ ಕೂಡಿ ಆಶ್ರಮ ವನ್ನು ಪಾರ್ಶ್ವಕೀರ್ತಿಗಳ ಕಬಂಧಬಾಹುವಿನಿಂದ ಬಿಡುಗಡೆಗೊಳಿಸುವ ಕಾರ್ಯವಿಧಾನ ಗಳ ಬಗ್ಗೆ ಚರ್ಚಿಸುತ್ತಿದ್ದರು.

ಪಾರ್ಶ್ವಕೀರ್ತಿಗಳು ಅಶೋಕ ದಾದಾ ಪಾಟೀಲರ ಪ್ರಕರಣದಿಂದಾದ ನೋವಿನಿಂದ, ಪಾಠ ಕಲಿಯಲಿಲ್ಲ. ತಮ್ಮ ದುರ್ವರ್ತನೆಗಳನ್ನೂ ತಿದ್ದಿಕೊಳ್ಳಲಿಲ್ಲ. ಸ್ತ್ರೀ ವ್ಯಾಮೋಹ ಅವರ ಜೀವಕ್ಕಂಟಿಬಂದ ಪರಿಹರಿಸಲಾಗದ ರೋಗವಾಗಿತ್ತು. ಅವರ ಈ ಚಪಲತೆ ಮುಂದೆ ಅನಾಥಾಶ್ರಮದಲ್ಲಿ ಇನ್ನೂ ಬಹು ದೊಡ್ಡ ಕ್ಷೋಭೆ ಮತ್ತು ದುರ್ಘಟನೆಗಳುಂಟಾಗಲು ಕಾರಣವಾಯಿತು.

**ಅಧ್ಯಾಯ : ಆರು**

# ಭೀಕರಹಲ್ಲೆ-ರಮ್ಯಕಾಂತ(ಸತೀಶ)ನ ದುರ್ಮರಣ

ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಬಾರ್ಸಿ ಊರಿನ ರಮ್ಯಕಾಂತ ರತನ್‌ಚಂದ್ ಷಹಾ ಎಂಬ ಸುಮಾರು ಹದಿನೈದು ವರ್ಷದ ಅನಾಥ ವಿದ್ಯಾರ್ಥಿಯೊಬ್ಬ ಶೇಡಬಾಳದ ಅನಾಥಾಶ್ರಮದ ಶಾಲೆಯಲ್ಲಿ 7ನೇ ತರಗತಿಯಲ್ಲಿ ಅಭ್ಯಾಸಮಾಡುತ್ತಿದ್ದ. ಮರಾಠಿಯ ಗುಜರ್ ಜನಾಂಗಕ್ಕೆ ಈತ ಸೇರಿದವನು. ತಂದೆಯ ಹೆಸರು ರತನ್‌ಚಂದ್. ಹುಡುಗನ ತಂದೆ ತಾಯಿಗಳು ತೀರಿಕೊಂಡಿದ್ದರು. ಹುಡುಗನಿಗೆ ಅಣ್ಣನೊಬ್ಬನಿದ್ದ. ಅಕ್ಕರೆಯಿಂದ ಕಾಣುವ ಸೋದರತ್ತೆಯೊಬ್ಬಳಿದ್ದಳು. ಈತನಿಗೆ ತನ್ನ ಬಾಂಧವರಿಂದ ಸರಿಯಾದ ಆಶ್ರಯ ಸಿಗದೇಹೋದುದರಿಂದ ಅನಾಥಾಶ್ರಮಕ್ಕೆ ಸೇರಬೇಕಾಯಿತು. ಇವನು ಆಶ್ರಮದ ಶಾಲೆಯನ್ನು ಸೇರಿದ ಸಮಯದಲ್ಲಿ ಶಾಲೆಯ ಪುಸ್ತಕದಲ್ಲಿ 'ರಮ್ಯಕಾಂತ ರತನ್‌ಚಂದ್ ಷಹಾ' ಎಂದು ಹೆಸರನ್ನು ದಾಖಲು ಮಾಡಿಕೊಂಡರು. ಸಹಾಯಕ ಶಿಕ್ಷಕರಾದ ಅಶೋಕ್ ದಾದಾ ಪಾಟೀಲರು ಈತನಿಗೆ 'ಸತೀಶ' ಎಂಬ ಹೊಸ ಹೆಸರನ್ನಿಟ್ಟರು. ಶಾಲೆಯಿಂದ ಹೊರಗಡೆ ಸತೀಶ ಎಂದು ಕರೆಯುವುದೇ ರೂಢಿಯಾಯಿತು.

**ಹಲ್ಲೆ**

ಒಂದು ದಿನ ಅಂದರೆ ಆ ದಿನ ಬಹುಶಃ ತಾ॥ 29-4-1956 ಇರಬಹುದು. ಸತೀಶನೂ ಮತ್ತು ಈತನ ಜನಪಾಲ್ ಎಂಬ ಸ್ನೇಹಿತನೂ ಆಶ್ರಮದಲ್ಲಿ ಅಡ್ಡಾಡಿಕೊಂಡಿರುವಾಗ, ಪಾರ್ಶ್ವಕೀರ್ತಿಗಳು ಬನಾರಸೀಬಾಯಿಯೊಂದಿಗೆ ಪ್ರಣಯಲೀಲೆಯಲ್ಲಿ ನಿರತರಾಗಿರುವ ಏಕಾಂತಸ್ಥಳಕ್ಕೆ ಆಕಸ್ಮಿಕವಾಗಿ ಬಂದುಬಿಟ್ಟರು. ನೋಡಬಾರದ ದೃಶ್ಯವನ್ನು ಇಬ್ಬರೂ ನೋಡಿದರು. ಹುಡುಗರಿಬ್ಬರು ಮುಗ್ಧಾವಸ್ಥೆಯಲ್ಲಿದ್ದ

ತಮ್ಮನ್ನು ನೋಡಿದ್ದು ಪಾರ್ಶ್ವಕೀರ್ತಿಗಳ ಸ್ಪಷ್ಟ ಗಮನಕ್ಕೆ ಬಂದಿತು. ಇದಕ್ಕೆ ಮೊದಲೆಲ್ಲಾ ಸತೀಶ ಪಾರ್ಶ್ವಕೀರ್ತಿಗಳ ದುರಾಚಾರಗಳನ್ನು ತನ್ನ ಸಹಪಾಠಿಗಳ ಮುಂದೆ ಖಂಡಿಸುತ್ತಾ ಇದ್ದವನು. ಈ ಸಂಗತಿ ಪಾರ್ಶ್ವಕೀರ್ತಿಗಳಿಗೂ ಸಹ ತಿಳಿದಿದ್ದು ಸತೀಶನ ಮೇಲೆ ಮೊದಲಿನಿಂದಲೂ ಕಣ್ಣಿಟ್ಟಿದ್ದರು. ಹುಡುಗರಿಬ್ಬರೂ ಈ ಸಂದರ್ಭದಲ್ಲಿ ಅಲ್ಲಿಂದ ಪಲಾಯನ ಮಾಡಿದರು. ಪಾರ್ಶ್ವಕೀರ್ತಿಗಳು ಸತೀಶನ ಮೇಲೆ ಆಕ್ರೋಶ ತಾಳಿದರು. ಈ ಘಟನೆ ನಡೆದಿದ್ದು ಹಗಲಿನಲ್ಲಾದ್ದರಿಂದ ಆ ಕ್ಷಣದಲ್ಲೇ ಆ ಹುಡುಗರ ಮೇಲೆರಗಲು ಅವರು ಸಿದ್ಧರಾಗಲಿಲ್ಲ.

ಅದೇ ದಿನ ರಾತ್ರಿ ಸುಮಾರು ಹತ್ತು ಗಂಟೆಯ ಸಮಯದಲ್ಲಿ ಪಾರ್ಶ್ವಕೀರ್ತಿಗಳಿಂದ ಸತೀಶನಿಗೂ ಅವನ ಸ್ನೇಹಿತನಿಗೂ ಕರೆ ಬಂತು. ರಾತ್ರಿಯಾದುದರಿಂದ ಶಾಲಾಶಿಕ್ಷಕರು ಆಶ್ರಮದಲ್ಲಿ ಯಾರೂ ಇರಲಿಲ್ಲ. ಶಾಲೆಗೆ ಬೇಸಿಗೆ ರಜೆಯಿದ್ದುದರಿಂದ ಆಶ್ರಮದ ಬಹುಪಾಲು ವಿದ್ಯಾರ್ಥಿಗಳು ತಮ್ಮ ತಮ್ಮ ಊರುಗಳಿಗೆ ಹೋಗಿದ್ದರು. ಧಾರ್ಮಿಕ ಶಿಕ್ಷಕರಾದ ಶಿರಟೆಯವರೊಬ್ಬರು ಮಾತ್ರ ತಮ್ಮ ಪತ್ನಿ ಶಾಂತಮತಿಯ ಸಮೇತ ಆಶ್ರಮದಲ್ಲಿಯೇ ಕಟ್ಟಡವೊಂದರಲ್ಲಿ ವಾಸಮಾಡಿಕೊಂಡಿದ್ದರು. ಇವರಿಗೆ ಶಾಂತಕುಮಾರ್ ಎಂಬ ಹೆಸರಿನ ಒಂದು ವರ್ಷದ ಕೈಗೂಸು ಇತ್ತು. ಪಾರ್ಶ್ವಕೀರ್ತಿಗಳು ಟ್ರಸ್ಟಿಗಳು ಸಭೆಸೇರುತ್ತಿದ್ದ ಮಹಡಿಯ ಮೇಲಿನ ದೊಡ್ಡ ಕೊಠಡಿಯಲ್ಲಿದ್ದುಕೊಂಡು ಹುಡುಗರಿಗೆ ಹೇಳಿ ಕಳುಹಿಸಿದ್ದರು.

ಹುಡುಗರಿಬ್ಬರೂ ಹೆದರುತ್ತಾ ಬಂದು ಮಹಡಿಯ ಮೆಟ್ಟಲುಗಳನ್ನೇರಿ ದೊಡ್ಡ ಕೊಠಡಿಯನ್ನು ಪ್ರವೇಶಿಸಿದರು. ಕೋಪೋದ್ರೇಕಗಳಿಂದ ಕುದಿಯುತ್ತಿದ್ದ ಪಾರ್ಶ್ವಕೀರ್ತಿಗಳು ತಕ್ಷಣ ಬಾಗಿಲನ್ನು ಮುಚ್ಚಿ ಚಿಲಕ ಹಾಕಿ ಸತೀಶನ ಮೇಲೂ ಜನಪಾಲನ ಮೇಲೂ ಹಲ್ಲೆಮಾಡಲುದ್ಯುಕ್ತರಾದರು. ಮೊದಲೇ ಸಿದ್ಧಪಡಿಸಿಟ್ಟುಕೊಂಡಿದ್ದ ಬಲವಾದ ರೂಲರ್ ದೊಣ್ಣೆಯಿಂದ ಅವರಿಬ್ಬರ ಮೇಲೆ ಕ್ರೂರವಾದ ಹಲ್ಲೆ ಒಂದೇ ಸಮನೆ ನಡೆಯಿತು. ಹುಡುಗರಿಬ್ಬರೂ ತಮ್ಮ ಮೇಲೆ ಪತ್ತೇದಾರಿ ಕೆಲಸ ಮಾಡಲು ಬಂದಿದ್ದರು ಎಂದು ಭಾವಿಸಿದ್ದ ಪಾರ್ಶ್ವಕೀರ್ತಿಗಳು ತಮ್ಮ ರಾಕ್ಷಸ ಕೋಪವಿಳಿಯುವವರೆಗೂ ಅವರ ಮೈಮುಖವೆನ್ನದೆ ಚೆನ್ನಾಗಿ ಥಳಿಸಿದರು. ಸತೀಶನಿಗೆ ಹೆಚ್ಚು ಏಟುಗಳು ಬಿದ್ದುವು. ಈ ಭೀಕರವಾದ ಹಲ್ಲೆಯನ್ನು ಸಹಿಸಿಕೊಳ್ಳಲಾರದೆ ಸತೀಶ ರಕ್ತವನ್ನು ವಾಂತಿಮಾಡಿಕೊಳ್ಳುತ್ತಾ ನೆಲಕ್ಕೆ ಕುಸಿದುಬಿದ್ದ. ಸತೀಶ ಕೆಲವು ದಿನಗಳ ಹಿಂದೆಯಷ್ಟೇ ವಿಷಮಶೀತಜ್ವರದಿಂದ ನರಳಿ ಆಗತಾನೇ ಚೇತರಿಸಿಕೊಂಡಿದ್ದ. ಪಾರ್ಶ್ವಕೀರ್ತಿಗಳ ಮೃಗೀಯ ಹಲ್ಲೆಯಿಂದಾಗಿ ಸತೀಶನ ಮುಗ್ಧಬಾಳು ಹೃದಯವಿದ್ರಾವಕ ಸ್ಥಿತಿಯನ್ನು ಮುಟ್ಟುವಂತಾಯಿತು

ಸತೀಶ ಪ್ರಜ್ಞಾಹೀನನಾಗಿ ಕುಸಿದು ಬಿದ್ದುದನ್ನು ಕಂಡ ಕೂಡಲೇ ಪಾರ್ಶ್ವಕೀರ್ತಿ

ಗಳ ಕ್ರೂರ ಮನಸ್ಸು ಎಚ್ಚರಗೊಂಡಿತು. ತಾವು ಮಾಡಿದ್ದು ಘೋರ ಅಪರಾಧ ವಾಯಿತೆಂದು ಅವರಿಗೆ ಅನ್ನಿಸಿತೋ ಇಲ್ಲವೋ ಅಂತೂ ಸತೀಶನನ್ನು ಮತ್ತೆ ಒಡಿಯಲು ಅವರು ಮುಂದಾಗಲಿಲ್ಲ. ಹೊಡೆತ ತಿಂದ ಇನ್ನೊಬ್ಬ ಹುಡುಗ ತಕ್ಷಣ ಬಾಗಿಲು ತೆರೆದುಕೊಂಡು ಹೊರಗೆ ಓಡಿಬಂದು ಆಶ್ರಮದಲ್ಲಿಯೇ ವಾಸವಾಗಿದ್ದ ಶಿರಟಿ ದಂಪತಿ ಗಳಿಗೆ ಹಲ್ಲೆಯ ಸುದ್ದಿ ತಿಳಿಸಿ ತನ್ನ ರಕ್ಷಣೆಗಾಗಿ ಅವರಲ್ಲಿ ಅಂಗಲಾಚಿದನು. ಶಿರಟಿ ಯವರು ಜನಪಾಲನನ್ನು ಮನೆಯಲ್ಲಿಯೇ ಇರಲು ಹೇಳಿ ಸತೀಶನನ್ನು ನೋಡಲು ಹೊರಟರು.

ಸತೀಶ ರಕ್ತವಾಂತಿ ಮಾಡಿಕೊಂಡು ಪ್ರಜ್ಞಾಹೀನನಾಗಿ ಬಿದ್ದಿರುವುದನ್ನು ಕಂಡು ಶಿರಟಿಯವರಿಗೆ ತಲೆಸುತ್ತಿಬರುವಂತಾಯಿತು. ತಕ್ಷಣ ಅವನನ್ನು ಮನೆಗೆ ಸಾಗಿಸಿ ಆರೈಕೆ ಮಾಡತೊಡಗಿದರು. ಶಾಂತಮತಿ ಇದಕ್ಕೆ ಸಹಾಯಕರಾಗಿ ನಿಂತರು ಸ್ವಲ್ಪ ಹೊತ್ತಿನಲ್ಲಿಯೇ ಸತೀಶನಿಗೆ ಪ್ರಜ್ಞೆ ಮರಳಿ ಬಂತು. ಆದರೆ ಮೊದಲಿನ ಬುದ್ಧಿ ಸ್ವಾಸ್ಥ್ಯ ಅವನಲ್ಲಿರಲಿಲ್ಲ. ಮಂಕು ಹಿಡಿದವನಂತೆ ಎದುರಿದ್ದವರನ್ನು ನೋಡಲಾ ರಂಭಿಸಿದನು. ಹುಡುಗನಿಗೆ ಮಾನಸಿಕ ಆಘಾತವಾಗಿದೆ ನಾಳೆ ಸರಿಹೋಗಬಹುದೆಂದು ಶಿರಟಿ ದಂಪತಿಗಳು ಭಾವಿಸಿದರು. ರಾತ್ರಿ ಕಳೆದು ಹಗಲಾಯಿತು. ಆದರೆ ಸತೀಶನ ಮಾನಸಿಕ ಸ್ಥಿತಿ ಹಗಲೆಂಬುದನ್ನು ಕಾಣಲಿಲ್ಲ. ಆತ ಮಂಡಿಯ ಮೇಲೆ ತಲೆಯೂರಿ ಸರ್ವಸ್ವವನ್ನೂ ಕಳೆದುಕೊಂಡವನಂತೆ ಮಂಕಾಗಿ ಕುಳಿತುಬಿಟ್ಟನು. ಅನ್ನ ನೀರು ಗಳನ್ನೂ ಸಹ ಕೇಳದೆ ಹೀಗೆ ಕುಳಿತ ಸತೀಶನನ್ನು ಕಂಡು ಶಾಂತಮತಿಯ ಕರುಳು ಕಿವುಚಿದಂತಾಯಿತು. ಆಕೆ ಅನ್ನ ಕಲೆಸಿ ಆತನ ತಲೆಯನ್ನು ಎತ್ತಿಹಿಡಿದು ಬಾಯಿಗೆ ಅನ್ನ ಹಾಕುತ್ತಿದ್ದರು. ಅನ್ನವನ್ನೂ ಹೇಗೋ ತಿನ್ನುತ್ತಿದ್ದ ಸತೀಶ ಮತ್ತೆ ತಲೆಯನ್ನು ತನ್ನ ಮಂಡಿಗಳ ಮೇಲೆ ಒರಗಿಸುತ್ತಿದ್ದ. ಈ ಸ್ಥಿತಿಯಲ್ಲಿ ಎರಡು ದಿನಗಳು ಕಳೆದವು. ಕಡೆಗೆ ಅನ್ನ ತಿನ್ನುವುದೂ ಕಷ್ಟವಾಯಿತು.

ಸತೀಶ ಆಶ್ರಮದ ಹುಡುಗರಲ್ಲೆಲ್ಲಾ ಬಹಳ ಚೂಟಿಯಾಗಿದ್ದವನು. ಬುದ್ಧಿ ವಂತ, ಧೈರ್ಯಶಾಲಿ ಎಂದು ಹೆಸರು ಪಡೆದಿದ್ದ. ಆಶ್ರಮದ ಶಾಲೆಯ ವಾರ್ಷಿ ಕೋತ್ಸವದ ನಾಟಕಗಳಲ್ಲಿ ಪಾತ್ರವಹಿಸಿ ಪ್ರತಿಭಾಶಾಲಿ ಎಂದು ಹೊಗಳಿಸಿಕೊಂಡಿದ್ದ ವನು. ಶಿರಟಿದಂಪತಿಗಳನ್ನು ಕಂಡರೆ ಸತೀಶನಿಗೆ ವಿಶೇಷ ಗೌರವವಿತ್ತು, ಶಾಂತಮತಿಗೆ ಮನೆಯ ಕೆಲಸಗಳಲ್ಲಿ ನೆರವಾಗುತ್ತಿದ್ದನು. ಇದು ಪಾರ್ಶ್ವಕೀರ್ತಿಗಳಿಗೆ ಹಿಡಿಸುತ್ತಿರ ಲಿಲ್ಲ. ಶಿರಟಿಯವರ ಮನೆಗೆ ಹೋಗಬೇಡವೆಂದು ಅವರು ಹಿಂದೆಲ್ಲಾ ಸತೀಶನಿಗೆ ತಾಕೀತು ಮಾಡಲು ಪ್ರಯತ್ನಿಸುತ್ತಿದ್ದರು. ಸತೀಶ ಇದಕ್ಕೆ ಸೊಪ್ಪು ಹಾಕಿದವನಲ್ಲ. "ನಾನು ಅವರ ಮನೆಗೆ ಹೋಗುವವ ಅಂದರೆ ಹೋಗುವವನೇ. ನಿಮ್ಮ ಮಾತನ್ನು ನಾನು ಕೇಳುವುದಿಲ್ಲ." ಎಂದು ಎದುರುತ್ತರ ಹೇಳಿ ಪಾರ್ಶ್ವಕೀರ್ತಿಗಳನ್ನು ಕಂಗೆಡಿಸಿ

ದ್ದನು. ಶಾಂತಮತಿಯ ಚಿಕ್ಕ ಮಗುವನ್ನು ಆಟವಾಡಿಸುವುದರಲ್ಲಿ ಸತೀಶನಿಗೆ ಎಲ್ಲಿಲ್ಲದ ಆಸಕ್ತಿ. ತಂದೆ ತಾಯಿಗಳಿಲ್ಲದೆ ಅನಾಥನಾದ ಈತನಿಗೆ ಶಿರಟೆದಂಪತಿಗಳೇ ತಂದೆ ತಾಯಿಗಳಂತಿದ್ದರು. ಇಂಥವರ ಸಹವಾಸದಿಂದ ತಪ್ಪಿಸಿ ತನ್ನನ್ನು ಇನ್ನೊಮ್ಮೆ ಅನಾಥನನ್ನಾಗಿ ಮಾಡಲು ಪ್ರಯತ್ನಿಸುತ್ತಿರುವ ಪಾರ್ಶ್ವಕೀರ್ತಿಗಳನ್ನು ಕಂಡಾಗಲೆಲ್ಲಾ ಸತೀಶ ಅಸಹನೆಯನ್ನು ತೋರುತ್ತಿದ್ದನು. ಕಡೆಗೆ ಸತೀಶ ಪಾರ್ಶ್ವಕೀರ್ತಿಗಳ ದೌರ್ಜನ್ಯಕ್ಕೊಳಗಾಗಿ ಬುದ್ಧಿವಿಕಲನಾಗಿ ಹೃದಯ ವಿದ್ರಾವಕ ಸ್ಥಿತಿಯನ್ನು ಮುಟ್ಟು ವಂತಾಯಿತು.

ಸತೀಶನ ಸ್ಥಿತಿ ಮತ್ತಷ್ಟು ಹದಗೆಡುತ್ತಿರುವುದನ್ನು ಕಂಡು ಶಾಂತಮತಿ ಕಳವಳ ಪಟ್ಟರು. ಹೇಗಿದ್ದ ಹುಡುಗ ಹೇಗಾಗಿ ಹೋದನಲ್ಲಾ ಎಂದು ಆಕೆ ಕಂಬನಿ ಸುರಿಸಿ ದರು. ಇನ್ನು ತಡಮಾಡದೆ ಸತೀಶನಿಗೆ ಆಸ್ಪತ್ರೆಯಲ್ಲಿ ಚಿಕಿತ್ಸೆ ಮಾಡಿಸಬೇಕೆಂದು ಶಾಂತಮತಿ ಶಿರಟೆಯವರಿಗೆ ತಿಳಿಸಿದರು. ಶಿರಟೆಯವರು ಇದನ್ನು ಪಾರ್ಶ್ವಕೀರ್ತಿ ಗಳಿಗೆ ತಿಳಿಸಿ ಆಸ್ಪತ್ರೆಗೆ ಸೇರಿಸಲು ತಕ್ಷಣ ವ್ಯವಸ್ಥೆಮಾಡುವಂತೆ ಒತ್ತಾಯಿಸಿದರು. ಪಾರ್ಶ್ವಕೀರ್ತಿಗಳು ಸತೀಶನನ್ನು ಮೀರಜ್ ಆಸ್ಪತ್ರೆಗೆ ಸೇರಿಸುವ ಜವಾಬ್ದಾರಿಯನ್ನು ಶಿರಟೆಯವರಿಗೇ ವಹಿಸಿದರು. ಶಿರಟೆಯವರು ಬೆಳಗಿನ ರೈಲಿನಲ್ಲಿ ಹೊರಟು ಸತೀಶ ನನ್ನು ಮೀರಜ್‌ನ 'ವಾನ್‌ಲೆಸ್ ಮಿಷನ್ ಆಸ್ಪತ್ರೆ'ಗೆ ಸೇರಿಸಿದರು.

### ದುರ್ಮರಣ

ಸತೀಶನ ಚಿಕಿತ್ಸೆ ನಡೆಯುತ್ತಿರುವಾಗ ಶಿರಟೆಯವರು ಚಿಕಿತ್ಸೆಗೆಂದು ತಂದ ಹಣ ವೆಲ್ಲಾ ಮುಗಿದುಹೋಯಿತು. ಹುಡುಗನ ಪ್ರಾಣವುಳಿಯುತ್ತದೆಯೇ ಎಂಬ ಪ್ರಶ್ನೆ ಸಂದಿಗ್ಧವಾಗಿತ್ತು. ಇಂತಹ ಸ್ಥಿತಿಯಲ್ಲಿ ಹಣದ ಕೊರತೆಯುಂಟಾದಾಗ ಶಿರಟೆ ಯವರಿಗೆ ಶೇಡಬಾಳದ ಆದಗೌಡ ಎಂಬುವರು ಆಸ್ಪತ್ರೆಯಲ್ಲಿಯೇ ಸಿಕ್ಕಿದರು. ಶಿರಟೆ ಯವರು ಇವರಿಂದ ಹಣಸಹಾಯ ಪಡೆದು ಅಗತ್ಯ ಚಿಕಿತ್ಸೆ ಮುಂದುವರಿಯುವಂತೆ ನೋಡಿಕೊಂಡರು. ಈ ಕಠಿಣ ಸಂದರ್ಭದಲ್ಲಿ ಪಾರ್ಶ್ವಕೀರ್ತಿಗಳು ಸತೀಶನ ಚಿಕಿತ್ಸೆಯ ಕಡೆ ಗಮನಹರಿಸುವುದಕ್ಕಿಂತ ಹೆಚ್ಚಾಗಿ ತಮ್ಮ ಸುರಕ್ಷತೆಯ ಕಡೆ ಗಮನಹರಿಸಿದರು. ಶಿರಟೆಯವರನ್ನು ಮೀರಜ್‌ಗೆ ಕಳುಹಿಸಿದ ನಂತರು ಅಲ್ಲಿ "ಹುಡುಗ ಪಾರ್ಶ್ವಕೀರ್ತಿ ಗಳಿಂದ ಹಲ್ಲೆಗೀಡಾದ" ಎಂದು ಡಾಕ್ಟರಿಗೆ ಹೇಳಿಬಿಟ್ಟರೆ ಏನು ಗತಿ ಎಂದು ಚಿಂತಿಸ ತೊಡಗಿದರು. ತಕ್ಷಣ ಒಂದು ಚೀಟಿಯಲ್ಲಿ "ನಾನು ಹುಡುಗನಿಗೆ ಬಡಿದ ಸಂಗತಿ ಯನ್ನು ಡಾಕ್ಟರಿಗೆ ಹೇಳಬಾರದು" ಎಂದು ಬರೆದು ಅದಕ್ಕೆ ಪಾರ್ಶ್ವಕೀರ್ತಿ ಎಂದು ರುಜುಹಾಕಿ ಅದನ್ನು ಆಪ್ತರೊಬ್ಬರ ಮೂಲಕ ಶಿರಟೆಯವರಿಗೆ ಕಳುಹಿಸಿಕೊಟ್ಟರು. ಈ ಕಾರ್ಯ ಮಾಡಿದ ಕೆಲವು ಗಂಟೆಗಳ ನಂತರದಲ್ಲಿಯೇ ಮೀರಜ್‌ನಲ್ಲಿ ಏನಾಗಿ ದೆಯೋ ಏನೋ ಎಂದು ಅಲ್ಲಿಯ ಪರಿಸ್ಥಿತಿಯನ್ನು ಸ್ವತಃ ತಿಳಿದುಕೊಳ್ಳಲು ಇವರು

ಮಿರಜ್‌ಗೆ ಪ್ರಯಾಣವಾಡಿ ಸತೀಶನ ಚಿಕಿತ್ಸೆ ಮಾಡುತ್ತಿದ್ದ ಡಾಕ್ಟರರ ವಿಶ್ವಾಸಗಳಿಸಿ ಕೊಳ್ಳಲು ಹೆಣಗಾಡತೊಡಗಿದರು. ಶಿರಟೆಯವರು ಪಾರ್ಶ್ವಕೀರ್ತಿಗಳು ಈ ಮುಂಚೆ ಕಳುಹಿಸಿದ್ದ ರುಜುವಿದ್ದ ಚೀಟಿಯನ್ನು ಜೋಪಾನಪಡಿಸಿಟ್ಟುಕೊಂಡರು. ಸತೀಶನ ಆರೋಗ್ಯ ವಿಷಮಿಸುತ್ತಿದ್ದುದರಿಂದ ಪಾರ್ಶ್ವಕೀರ್ತಿಗಳು ಮೀರಜ್‌ನಲ್ಲಿಯೇ ಉಳಿಯು ವಂತಾಯಿತು. ಮಿರಾಜ್‌ನ ಗೃಹಸ್ಥರ ಮನೆಯೊಂದರಲ್ಲಿ ಇವರಿಗೆ ಆಹಾರದ ವ್ಯವಸ್ಥೆ ಯಾಯಿತು.

ಸತೀಶನ ಚಿಕಿತ್ಸೆ ಕಡೆಗೂ ವಿಫಲವಾಯಿತು. ಅಷ್ಟು ಹೊತ್ತಿಗೆ ಡಾಕ್ಟರರು ಮತ್ತು ಪಾರ್ಶ್ವಕೀರ್ತಿಗಳ ವಿಶ್ವಾಸ ಚೆನ್ನಾಗಿ ಕುದುರಿತ್ತು. ತಾ 3-5-1956ರಂದು ಬೆಳಗಿನ ಹೊತ್ತಿನಲ್ಲಿ ಸತೀಶ ಆಸ್ಪತ್ರೆಯಲ್ಲಿಯೇ ಕೊನೆ ಉಸಿರೆಳೆದ. ಡಾಕ್ಟರರು ಸತೀಶನ ಕೇಸ್ ಹಿಸ್ಟರಿಯಲ್ಲಿ ಸಾವಿನ ಕಾರಣವೊಂದನ್ನು ನಮೂದಿಸಿದರು. ಆ ಸಮಯದಲ್ಲಿ ಶಿರಟೆಯವರೊಬ್ಬರನ್ನು ಬಿಟ್ಟರೆ ಸತೀಶನಿಗಾಗಿ ದುಃಖಿಸುವವರು ಯಾರೂ ಇರಲಿಲ್ಲ.

ಸುಮಾರು ಹತ್ತು ಗಂಟೆಯ ಹೊತ್ತಿಗೆ ಸತೀಶನ ಕಳೇಬರವನ್ನು ಆಸ್ಪತ್ರೆಯ ಅಧಿಕಾರಿಗಳು ಪಾರ್ಶ್ವಕೀರ್ತಿಗಳ ವಶಕ್ಕೆ ಕೊಟ್ಟರು. ಇವರು ಬಾಡಿಗೆ ಕಾರೊಂದನ್ನು ಗೊತ್ತು ಮಾಡಿಕೊಂಡು ಬಂದು ಶವವನ್ನು ಅದರ ಡಿಕ್ಕಿಯಲ್ಲಿಡಿಸಿದರು. ಶಿರಟೆಯ ವರೂ ಅಲ್ಲಿಯೇ ಇದ್ದರು. ಕಾರು ಇನ್ನೇನು ಶೇಡಬಾಳಕ್ಕೆ ಹೊರಡುತ್ತದೆ ಎಂದು ಶಿರಟೆಯವರು ಭಾವಿಸಿರುವಾಗ, ಪಾರ್ಶ್ವಕೀರ್ತಿಗಳು ಸ್ವಲ್ಪ ಹೊತ್ತು ಕಾರಿನ ಹತ್ತಿರವೇ ಇರುವಂತೆ ಶಿರಟೆಯವರಿಗೆ ಹೇಳಿ ತಾವು ಆಸ್ಪತ್ರೆಯ ಆವರಣ ಬಿಟ್ಟು ಹೊರಟರು. ತಮ್ಮನ್ನು ಹೆಣ ಕಾಯಲು ಬಿಟ್ಟು ಪಾರ್ಶ್ವಕೀರ್ತಿಗಳು ಎಲ್ಲಿಗೆ ಹೋಗುತ್ತಿದ್ದಾರೆಂ ಬುದು ಶಿರಟೆಯವರಿಗೆ ತಿಳಿಯಲಿಲ್ಲ. ಪಾರ್ಶ್ವಕೀರ್ತಿಗಳು ನೇರವಾಗಿ ತಮ್ಮ ಪರಿಚ ಯದ ಗೃಹಸ್ಥರ ಮನೆಗೆ ಹೋದರು. ಆ ದಿನದ ಊಟವನ್ನು ನಿಶ್ಚಿಂತೆಯಿಂದ ಮುಗಿ ಸಿದರು. ಗೃಹಸ್ಥರೆದುರು ಆಸ್ಪತ್ರೆಯ ಸಂದ್ದಿಯನ್ನು ಇವರು ತೆಗೆಯಲಿಲ್ಲ, ಮತ್ತೆ ನೇರವಾಗಿ ಕಾರಿನ ಹತ್ತಿರಕ್ಕೆ ಬಂದರು. ಅಷ್ಟರಲ್ಲಿ ಕಾರಿನ ಡ್ರೈವರ್ ಊಟ ಮಾಡಿ ಬರಲು ಹೋಗಿದ್ದನು. ಆತನಿಗಾಗಿ ಇಬ್ಬರೂ ಕಾಯತೊಡಗಿದರು.

ಇವರು ಹೀಗೆ ಕಾಯುತ್ತಿರುವಾಗ ಸತೀಶನ ಸೋದರತ್ತೆ ಮತ್ತು ಆಕೆಯ ಗಂಡ ಇವರಿರುವ ಕಡೆಗೆ ಬರುತ್ತಿರುವುದು ಕಾಣಿಸಿತು. ಸತೀಶ ಹಲ್ಲೆಗೊಳಗಾಗಿ ಆಸ್ಪತ್ರೆ ಸೇರಿರುವ ಸುದ್ದಿ ಇವರಿಬ್ಬರಿಗೆ ಬೇರೆಯವರಿಂದ ತಿಳಿದು ತಕ್ಷಣ ಇಬ್ಬರೂ ಮಿರಜ್‌ಗೆ ಬಂದು ಆಸ್ಪತ್ರೆಯಲ್ಲಿ ವಿಚಾರಿಸಲೆಂದು ಆಸ್ಪತ್ರೆಯ ಆವರಣದೊಳಕ್ಕೆ ಬಂದಾಗ ಪಾರ್ಶ್ವಕೀರ್ತಿಗಳನ್ನು ದೂರದಿಂದಲೇ ಗುರುತಿಸಿ ಕಾರಿನ ಹತ್ತಿರಕ್ಕೆ ಹೆಜ್ಜೆ ಹಾಕಿದ್ದರು. ಬಂದ ಕೂಡಲೇ ಸತೀಶನ ಆರೋಗ್ಯದ ಬಗ್ಗೆ ವಿಚಾರಿಸಿದರು. “ನಮ್ಮ ಸತೀಶನನ್ನು

ಆಸ್ಪತ್ರೆಗೆ ಸೇರಿಸಿದ್ದೀರಂತೆ. ಅವನಿಗೆ ಏನಾಗಿದೆ ? ಯಾವ ಕೊಠಡಿಯಲ್ಲಿ ಅವನನ್ನು ಮಲಗಿಸಿದ್ದಾರೆ. ಹೇಗಿದ್ದಾನೆ ನಮ್ಮ ಸತೀಶ" ಎಂದು ಕಾತುರಗೊಂಡು ಪ್ರಶ್ನಿಸಿದರು. ಈ ಪ್ರಶ್ನೆಗಳಿಗೆ ಉತ್ತರ ನೀಡಲು ಅಲ್ಲಿದ್ದ ಶಿರಟೆಯವರಿಗೆ ಬಾಯಿ ಬರಲಿಲ್ಲ. ತಲೆ ಬಾಗಿಸಿ ಮೌನವಾದರು. ಪಾರ್ಶ್ವಕೀರ್ತಿಗಳು ಅವರಿಬ್ಬರನ್ನುದ್ದೇಶಿಸಿ "ನಿಮ್ಮ ಸತೀಶ ಬಹಳ ಪ್ರತಿಭಾಶಾಲಿ ಹುಡುಗ. ಈ ದಿನ ಅವನಿಗೆ ಆಶ್ರಮದಲ್ಲಿ ಸನ್ಮಾನ ಮಾಡುತ್ತೇವೆ. ಅಲ್ಲಿಯೇ ಅವನನ್ನು ನೋಡುವಿರಂತೆ ನಡೆಯಿರಿ" ಎಂದು ಅವರಿಬ್ಬರನ್ನೂ ಕಾರಿನೊಳಕ್ಕೆ ಕೂರಿಸಿದರು. ಸತೀಶನ ಸೋದರತ್ತೆಗೆ ಇದೆಲ್ಲಾ ವಿಚಿತ್ರವಾಗಿ ಕಾಣಿಸಿತು. ಈಗಂತೂ ಬೇಸಿಗೆ ಕಾಲ. ಶಾಲೆಗೆ ರಜೆಯಿದೆ. ಹುಡುಗರೇ ಇಲ್ಲದ ಕಾಲದಲ್ಲಿ ಸನ್ಮಾನ ಎಂದರೇನು ? ಸತೀಶನಿಗೆ ಆಸ್ಪತ್ರೆಯಿಂದ ಯಾವಾಗ ಬಿಡುಗಡೆಯಾಯಿತು ? ಅವನು ಶೇಡಬಾಳಕ್ಕೆ ಹೋಗಿಬಿಟ್ಟನೆ ? ಹಾಗಾದರೆ ಇವರೇಕೆ ಇಲ್ಲಿದ್ದಾರೆ ? ಮುಂತಾದ ಪ್ರಶ್ನೆಗಳು ಅವಳಲ್ಲಿ ಮೂಡಿ ಗೊಂದಲಕ್ಕೊಳಗಾದಳು. ಸ್ವಲ್ಪ ಹೊತ್ತಿನ ಮೇಲೆ ಡ್ರೈವರ್ ಬಂದನು, ಕಾರು ಶೇಡಬಾಳದ ಕಡೆಗೆ ಹೊರಟಿತು. ಹೆಚ್ಚು ಮಾತುಗಳಿಗೆ ಅವಕಾಶವಿಲ್ಲದೆಯೇ ಶೇಡಬಾಳದ ಆಶ್ರಮವನ್ನು ತಲುಪಿತು.

ಕಾರಿನ ಡಿಕ್ಕಿಯನ್ನು ತೆರೆದು ಸತೀಶನ ಹೆಣವನ್ನು ಕೆಳಗಿಳಿಸುತ್ತಿದ್ದಂತೆಯೇ ಸತೀಶನ ಸೋದರತ್ತೆಗೆ ವಿಷಯವೆಲ್ಲಾ ಪೂರ್ಣವಾಗಿ ತಿಳಿದುಹೋಯಿತು. ತನ್ನ ಪ್ರೀತಿ ಪಾತ್ರ ಸೋದರಳಿಯನ ಸಾವಿನ ಆಘಾತವನ್ನು ಸಹಿಸಲಾರದೆ ಆಕೆ ಗೊಳೋ ಎಂದು ರೋಧಿಸಲಾರಂಭಿಸಿದಳು ಇದನ್ನು ಕಂಡ ಪಾರ್ಶ್ವಕೀರ್ತಿಗಳು ಆಕೆಯತ್ತ ಧಾವಿಸಿ ಗಲ್ಲಸಹಿತ ಆಕೆಯ ಬಾಯಿಯನ್ನು ತಮ್ಮ ಕೈನಿಂದ ಒತ್ತಿ ಹಿಡಿದು ಅಳಬಾರದೆಂದು ಆದೇಶ ನೀಡಿದರು ಶವಸಂಸ್ಕಾರಕ್ಕಾಗಿ ಕೆಲವು ಜನರು ಅಲ್ಲಿ ಸೇರಿದರು ಪಂಚನಾಮೆ ಮಾಡಿದರು. ಸತೀಶನ ಸೋದರತ್ತೆ ಮತ್ತು ಆಕೆಯ ಪತಿಯಿಂದಲೂ ರುಜು ಮಾಡಿಸಿಕೊಂಡರು. ಆಶ್ರಮದ ಸಮೀಪದಲ್ಲಿಯೇ ದಹನಕ್ರಿಯೆ ನಡೆಯಿತು. ಇದಾದ 2–3 ದಿನಗಳ ಮೇಲೆ ಸತೀಶನ ಒಬ್ಬನೇ ಅಣ್ಣ ಶೇಡಬಾಳಕ್ಕೆ ಬಂದರು, ಬಂದವರು ಸುದ್ದಿ ತಿಳಿದು ಹಾಗೆಯೇ ಹಿಂದಕ್ಕೆ ಹೋದರು.

ಸತೀಶನ ದುರ್ಮರಣವಾದ ಮೇಲೆ ಆಶ್ರಮದ ಪಾಠ ಶಾಲೆಯ ಪ್ರವೇಶ ಪುಸ್ತಕದಲ್ಲಿ ಸತೀಶನ (ರಮ್ಯಕಾಂತ ರತನ್‌ಚಂದ್ ಷಹಾನ) ಹೆಸರಿದ್ದ ಕಡೆ ಹುಡುಗ ತಾ॥ 3–5–1956ರಲ್ಲಿ ತೀರಿಕೊಂಡ ಎಂದು ಬರೆದರು.

ಈ ಘಟನೆಯಾದ ಮೇಲೆ ಪಾರ್ಶ್ವಕೀರ್ತಿಗಳ ಕ್ರೂರ ಹೃದಯ ಮತ್ತಷ್ಟು ಕಲ್ಲಾಯಿತೇ ಹೊರತು ಪಶ್ಚಾತ್ತಾಪ, ಆತ್ಮಶೋಧನೆ ಎಂಬುದು ಹತ್ತಿರವೂ ಸುಳಿಯಲಿಲ್ಲ.

## ಅಧ್ಯಾಯ : ಏಳು

# ಪೋಲಿಸ್ ವಿಚಾರಣೆ

ಸತೀಶ ಪಾರ್ಶ್ವಕೀರ್ತಿ ವರ್ಣಿಗಳ ಕ್ರೂರ ಹಲ್ಲೆಯಿಂದ ದುರ್ಮರಣವನ್ನಪ್ಪಿದ್ದು ಶೇಡಬಾಳದ ಜನರಿಗೆಲ್ಲಾ ತಿಳಿದು ಅದೊಂದು ಚರ್ಚೆಯ ವಿಷಯವಾಯಿತು. ಜನರೆಲ್ಲಾ ಪಾರ್ಶ್ವಕೀರ್ತಿಗಳ ಕಾಮ ಕೃತ್ಯಗಳಿಗಾಗಿ ಜುಗುಪ್ಸೆ ತಾಳಿದರು. ಶೇಡಬಾಳದ ಸುತ್ತಮುತ್ತಲಿನ ಊರುಗಳಲ್ಲೆಲ್ಲಾ ಹಲ್ಲೆ ಮತ್ತು ದುರ್ಮರಣದ ಸುದ್ದಿ ತೀವ್ರಗತಿಯಲ್ಲಿ ಪ್ರಚಾರವಾಯಿತು. ಸತೀಶನ ಬಂಧುಗಳು ಪೋಲೀಸರಿಗೆ ದೂರು ನೀಡದೆಯೇ ಒಂದ ಹಾಗೆಯೇ ಹಿಂತಿರುಗಿದ್ದರು. ಪೋಲೀಸರಿಗೆ ದೂರು ನೀಡಿದರೆ ಊರಿನ ಹೆಸರು ಹಾಳಾಗುತ್ತದೆ. ಸಮಾಜಕ್ಕೆ ಕೆಟ್ಟ ಹೆಸರು ಬರುತ್ತದೆ ಎಂದು ಊರಿನ ಜೈನ ಪ್ರಮುಖರು ಕೈಕಟ್ಟಿ ಕುಳಿತರು. ಅನಾಥಾಶ್ರಮದ ಸಹಾಯಕ ಮಂತ್ರಿ ಅಣ್ಣಾ ಸಾಹೇಬ್ ಲಗಾರೆ ಕುಡಿತದಲ್ಲಿಯೇ ಮೈಮರೆತನು. ಆಶ್ರಮದ ಟ್ರಸ್ಟಿಗಳೂ ಸಹ ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಹೀಗಾಗಿ ಅನಾಥಾಶ್ರಮದ ಹುಡುಗರ ಹಿತರಕ್ಷಣೆ ಬಯಸಿ ಪೋಲೀಸರಿಗೆ ದೂರು ಸಲ್ಲಿಸಬೇಕಾದ ತಮ್ಮ ಅನಿವಾರ್ಯ ಕರ್ತವ್ಯದಿಂದ ಸಂಬಂಧಪಟ್ಟವರೆಲ್ಲರೂ ವಿಮುಖರಾದರು.

ಇಂತಹ ಸಂದರ್ಭದಲ್ಲಿ ಅಶೋಕ್‌ದಾದಾ ಪಾಟೀಲ್ ಮತ್ತು ಜಂಬುಕುಮಾರ್ ಪಾರ್ಶ್ವನಾಥ ಶಿರಟೆಯವರು ಕೈಕಟ್ಟಿ ಕೂರಲಿಲ್ಲ. ಇವರು ಪೋಲೀಸರಿಗೆ ದೂರು ಕೊಡುವ ಕಾರ್ಯವನ್ನು ಮಾಡದೇ ಹೋದರೂ, ಆಶ್ರಮದಲ್ಲಿ ಅನ್ಯಾಯ ಮಾಡುತ್ತಿರುವ ಪಾರ್ಶ್ವಕೀರ್ತಿಗಳನ್ನು ಬೇರಾವ ವಿಧದಿಂದಲಾದರೂ ಎದುರಿಸಲು ಮುಂದಾದರು. ಪಾರ್ಶ್ವಕೀರ್ತಿಗಳು ಆಶ್ರಮದಲ್ಲಿ ನಡೆಸಿರುವ ಹಣದ ಅವ್ಯವಹಾರಗಳು ಮತ್ತು ಮತ್ತಿತರ ಅವ್ಯವಹಾರಗಳನ್ನು ಪಟ್ಟಿಮಾಡಿ ಟ್ರಸ್ಟಿನ ಪದಾಧಿಕಾರಿಗಳ ಗಮನಕ್ಕೆ ತಂದರು. ಅಲ್ಲದೆ ಟ್ರಸ್ಟಿನ ಸಭೆ ಸೇರುವ ಸಮಯದಲ್ಲಿ ಈ ವಿಷಯಗಳಿಗೆ ಸಂಬಂಧಿಸಿದಂತೆ ವಾದ ಮಾಡಿದರು. ಅಶೋಕದಾದ ಪಾಟೀಲರು ಪಾರ್ಶ್ವಕೀರ್ತಿಗಳ ವಿರುದ್ಧ ಸಲ್ಲಿಸಿದ ಆರೋಪಪಟ್ಟಿಯಲ್ಲಿ ಹಣ ಮತ್ತು ಹೆಣ್ಣಿಗೆ ಸಂಬಂಧಿಸಿದಂತೆ ಮುವ್ವತ್ತೊಂದು ಆಪಾದನೆಗಳಿದ್ದವು. ಆಶ್ರಮದ ಎಮ್ಮೆಗಳು ಕರೆದ ಹಾಲನ್ನೂ ಕದ್ದು ಮಾರಿಕೊಳ್ಳುವ ನೀಚತನವನ್ನು ಪಾರ್ಶ್ವಕೀರ್ತಿಗಳು ತೋರಿದ್ದರು.

ಸತೀಶನ ದುರ್ಮರಣವಾದುದು, ಆಶ್ರಮದ ಅಭಿವೃದ್ಧಿಯ ಬಗೆಗೆ ಸಾರ್ವಜನಿಕರು ನಂಬಿಕೆಯನ್ನು ಕಳೆದುಕೊಂಡುದು, ಅಶೋಕರು ಆರೋಪಪಟ್ಟಿಯನ್ನು

ಸಲ್ಲಿಸಿದುದು ಈ ಮುಂತಾದ ಘಟನಾವಳಿಗಳಾದಾಗ ಟ್ರಸ್ಟಿಗಳು ಇನ್ನು ಮುಂದೆಯೂ ಸುಮ್ಮನಿರುವುದು ಸಾಧ್ಯವಾಗಲಿಲ್ಲ. ರೋಗ ಉಲ್ಬಣವಾಗಿ ಚಿಕಿತ್ಸೆ ನಡೆಸುವುದು ಅನಿವಾರ್ಯವಾಯಿತು. ಟ್ರಸ್ಟಿಗಳು ಪಾರ್ಶ್ವಕೀರ್ತಿಗಳನ್ನು ಆಶ್ರಮದಿಂದ ಯಾವ ಕ್ಷಣದಲ್ಲಿ ಬೇಕಾದರೂ ಉಚ್ಚಾಟಿಸಬಹುದೆಂಬ ಸನ್ನಿವೇಶ ನಿರ್ಮಾಣವಾಯಿತು. ಇದು ಹತ್ತಿರವಾದಂತೆಯೂ ಕಂಡಿತು.

## ರಾಜೀನಾಮೆಯ ತಂತ್ರ

ಆಶ್ರಮದಲ್ಲಿ, ಊರಿನಲ್ಲಿ ಮತ್ತು ಟ್ರಸ್ಟಿನ ಅಧಿಕಾರ ವಲಯಗಳಲ್ಲಿ ತಮ್ಮ ವಿರುದ್ಧ ಗರಿಗೂಡಿಕೊಂಡಿರುವ ಅಸಹನೆಯ ಪ್ರಖರತೆಯನ್ನು ಪಾರ್ಶ್ವಕೀರ್ತಿಗಳು ಅರಿತುಕೊಂಡರು. ಇದನ್ನು ಯಾವ ರೀತಿಯಿಂದಲಾದರೂ ಮುರಿಯಬೇಕೆಂಬ ಕುಟಿಲಾಲೋಚನೆ ಅವರಿಗುಂಟಾಯಿತು. ಸತೀಶನ ಸಾವಿನ ಪ್ರಕರಣದಲ್ಲಿ ಪೋಲೀಸ್ ಕೇಸ್ ಇನ್ನೂ ಆಗದೇ ಇದ್ದುದು ಪಾರ್ಶ್ವಕೀರ್ತಿಗಳಿಗೆ ಕುಯುಕ್ತಿಯನ್ನು ಮಾಡಲು ಹೆಚ್ಚು ಧೈರ್ಯ ನೀಡಿತ್ತು. ಏನೇ ಆದರೂ ಆಶ್ರಮವನ್ನು ಮಾತ್ರ ಬಿಡಬಾರದೆಂದು ಅವರು ನಿಶ್ಚಯಿಸಿಕೊಂಡಿದ್ದರು. ವಿರೋಧಗಳು ಹೆಚ್ಚಾದಾಗ ಏನಾದರೊಂದು ಅನಿರೀಕ್ಷಿತವಾದ ನಿರ್ಧಾರ ಪ್ರಕಟಿಸಿ ವಿರೋಧಿಗಳನ್ನು ಚಕಿತಗೊಳಿಸಿ ದಿಗ್ಭ್ರಮೆಗೊಳಿಸಿ ದಿಗ್ಮೂಢರನ್ನಾಗಿ ಮಾಡುವುದು ವಿರೋಧವನ್ನು ನಾಶಪಡಿಸುವ ಒಂದು ತಂತ್ರವಾಗಿದೆ. ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು ಎಂಬಂತೆ ಇಂತಹ ತಂತ್ರಗಳಿಂದ ಪ್ರಯೋಜನವಾಗಬಹುದು. ಪಾರ್ಶ್ವಕೀರ್ತಿಗಳು ಈ ತಂತ್ರಕ್ಕೆ ಶರಣುಹೋಗಿ ತಮ್ಮ ಅಧಿಷ್ಠಾತನ ಹುದ್ದೆಗೆ ಇದ್ದಕ್ಕಿದ್ದಂತೆಯೇ ರಾಜೀನಾಮೆ ಸಲ್ಲಿಸಿ ಆಶ್ರಮ ತ್ಯಜಿಸುವ ಸೋಗನ್ನು ಹಾಕಿದರು.

ಪಾರ್ಶ್ವಕೀರ್ತಿಗಳ ಕುತಂತ್ರ ತಾತ್ಕಾಲಿಕವಾಗಿ ಫಲಿಸಿತು. ಟ್ರಸ್ಟಿನ ಅಧಿಕಾರ ವರ್ಗದವರಿಗೆ ಈ ರಾಜೀನಾಮೆಯಿಂದ ಆಶ್ಚರ್ಯವಾದರೂ ಪಾರ್ಶ್ವಕೀರ್ತಿಗಳ ಬಗ್ಗೆ ತಮಗೆ ಆಗ ಉಂಟಾಗತೊಡಗಿದ್ದ ಸಂಶಯವನ್ನು ಮಾತ್ರ ಬಿಟ್ಟುಕೊಡಲಿಲ್ಲ. ಅವರು ರಾಜೀನಾಮೆ ಪತ್ರವನ್ನು ಅಂಗೀಕರಿಸಲೂ ಇಲ್ಲ ; ಅಥವಾ ತಿರಸ್ಕರಿಸಲೂ ಇಲ್ಲ. ಮುಂದೆ ಉಪಯೋಗಕ್ಕೆ ಬರಬಹುದಾದ ಒಂದು ಅಸ್ತ್ರವನ್ನಾಗಿ ಆ ರಾಜೀನಾಮೆ ಪತ್ರವನ್ನು ಕಾಯ್ದಿರಿಸಿಕೊಂಡರು. ಪಾರ್ಶ್ವಕೀರ್ತಿಗಳಿಗೆ ಸಧ್ಯಕ್ಕೆ ಆಶ್ರಮದಲ್ಲಿರಬಹುದೆಂದೂ ತಾವು ಈ ಬಗ್ಗೆ ಮುಂದೆ ಒಂದು ಇತ್ಯರ್ಥಕ್ಕೆ ಬರಲಿರುವುದಾಗಿಯೂ ಆಡಳಿತ ವರ್ಗ ಸೂಚಿಸಿತು. ಟ್ರಸ್ಟಿನ ಮಹಾಮಂತ್ರಿಯಾದ ಸಾಂಗ್ಲಿಯ ಶ್ರೀ ಗುಲಾಬ್‌ಚಂದ್ ಖೇಮ್‌ಚಂದ್ ಷಹಾರವರು ಈ ತೀರ್ಮಾನಕ್ಕೆ ಬರಲು ಮುಖ್ಯ ಕಾರಣರಾಗಿದ್ದರು.

## ಮೂಗರ್ಜಿಯ ದೂರು

ಶಾಲೆಯ ಅಮಾಯಕ ಹುಡುಗನನ್ನು ಬಡಿದು ಸಾಯಿಸಿಯೂ ಪಾರ್ಶ್ವಕೀರ್ತಿಗಳು ಆಶ್ರಮದಲ್ಲಿ ತಳವೂರಿರುವುದನ್ನು ಕಂಡು ಶೇಡಬಾಳದ ಕೆಲವರಿಗೆ ಸಹಿಸಲಾಗಲಿಲ್ಲ. ಅನ್ಯಾಯಕ್ಕೇ ಕಾಲವಾಯಿತಲ್ಲ ಎಂದು ಪರಿತಪಿಸಿದರು. ಎಲ್ಲಾ ಬಗೆಯ ಅನಾಚಾರಗಳನ್ನು ಮಾಡುವ ಒಬ್ಬ ಮನುಷ್ಯ ಕಾವಿಬಟ್ಟೆ ತೊಟ್ಟು ಪಿಂಛ ಕಮಂಡಲಗಳನ್ನು ಹಿಡಿದಿದ್ದ ಮಾತ್ರಕ್ಕೆ ಅವನಿಗೆ ವಿನಾಯಿತಿಯುಂಟೆ ? ಸಾರ್ವಜನಿಕ ಹಿತ ಸಾಧಿಸುವ ಸಂಸ್ಥೆಗಳು ಕಪಟಸನ್ಯಾಸಿಗಳು ನಡೆಸುವ ಕರಾಳಕೃತ್ಯಗಳ ಆಡುಂಬೊಲಗಳಾಗಬೇಕೆ ? ಹೀಗೆ ಚಿಂತಿಸಿದ ಕೆಲವರು ಸತೀಶನ ದುರ್ಮರಣದ ವಿಚಾರವಾಗಿ ಪೋಲೀಸರಿಗೆ ದೂರು ಸಲ್ಲಿಸಲು ನಿರ್ಧಾರಮಾಡಿದರು. ಆದರೆ ಇವರು ತಮ್ಮ ಪ್ರತಿಭಟನೆಯನ್ನು ಬಹಿರಂಗಪಡಿಸಿಕೊಳ್ಳಲು ಇಷ್ಟಪಡದೆ ಒಂದು ಮೂಗರ್ಜಿಯ ಮೂಲಕ ತಮ್ಮ ದೂರನ್ನು ಸಲ್ಲಿಸಿದರು. ಈ ದೂರಿನಲ್ಲಿ ಪಾರ್ಶ್ವಕೀರ್ತಿಗಳೇ ಸತೀಶನ ಮೇಲೆ ಹಲ್ಲೆ ನಡೆಸಿ ಅವನನ್ನು ಚೆನ್ನಾಗಿ ಬಡಿದು ಸಾಯಿಸಿದ್ದಾರೆ. ಹುಡುಗ ಚೆನ್ನಾಗಿ ಪೆಟ್ಟುತಿಂದು ಆಸ್ಪತ್ರೆ ಸೇರಿದ್ದ ಮೇಲೆ ಪಾರ್ಶ್ವಕೀರ್ತಿಗಳು ಆಸ್ಪತ್ರೆಗೂ ಹೋಗಿ ಡಾಕ್ಟರನ್ನು ಲಂಚದಮೂಲಕ ಒಲಿಸಿಕೊಂಡು ಹುಡುಗ ಸತ್ತ ಕಾರಣವನ್ನು ತಮಗೆ ಬೇಕಾದಂತೆ ಬರೆಸಿಕೊಂಡಿದ್ದಾರೆ. ಹುಡುಗನ ಶವವನ್ನು ಆಸ್ಪತ್ರೆಯಿಂದ ಲಗುಬಗೆಯಲ್ಲಿ ತೆಗೆದುಕೊಂಡು ಬಂದು ಪೋಲೀಸರಿಗೆ ಹುಡುಗ ಸತ್ತಿರುವ ಸುದ್ದಿಯನ್ನು ತಿಳಿಸದೆ ಆತುರಾತುರವಾಗಿ ಅವನ ದಹನ ಕ್ರಿಯೆಯನ್ನೂ ಮುಗಿಸಿದ್ದಾರೆ. ಹುಡುಗ ಚೆನ್ನಾಗಿ ಪೆಟ್ಟು ತಿಂದು ಎರಡು ದಿವಸ ಅರೆಪ್ರಜ್ಞಾವಸ್ಥೆಯಲ್ಲಿದ್ದು ನಂತರ ಎರಡು ದಿನಗಳ ಕಾಲ ಆಸ್ಪತ್ರೆಯಲ್ಲಿದ್ದು ಸಂಶಯಾಸ್ಪದ ರೀತಿಯಲ್ಲಿ ತೀರಿಕೊಂಡಿದ್ದರೂ ಈ ವಿಷಯವನ್ನು ಪೋಲೀಸರಿಗೆ ತಿಳಿಸದೇ ಇರುವುದರಿಂದ ಮತ್ತು ಆತುರಾತುರದಲ್ಲಿ ದಹನ ಕ್ರಿಯೆ ನಡೆಸಿರುವುದರಿಂದ ಪಾರ್ಶ್ವಕೀರ್ತಿಗಳು ಈ ಪ್ರಸಂಗದಲ್ಲಿ ಹುಡುಗನ ಪ್ರಾಣಾಪಹಾರ ಮಾಡಿದ ಕ್ರಿಮಿನಲ್ ಅಪರಾಧಿ ಎಂಬುದು ಶತಸ್ಸಿದ್ಧವಾಗುತ್ತದೆ—ಎಂದು ಮುಂತಾಗಿ ಪಾರ್ಶ್ವಕೀರ್ತಿಗಳ ಮೇಲೆ ಆಪಾದನೆಗಳನ್ನು ಹೊರಿಸಿದರು.

ಈ ದೂರನ್ನು ಬೆರಳಚ್ಚು ಮಾಡಿಸಿ ಬೆಳಗಾವಿ ಜಿಲ್ಲಾ ಪೋಲೀಸ್ ಕೇಂದ್ರ ಕಛೇರಿಗೆ ಕಳುಹಿಸಿದರು ಇದರ ಪ್ರತಿಗಳನ್ನು ಚಿಕ್ಕೋಡಿ ಪೋಲೀಸ್ ಸ್ಟೇಷನ್ನಿಗೂ ಮತ್ತು ಕಾಗವಾಡ ಪೋಲೀಸ್ ಸ್ಟೇಷನ್ನಿಗೂ ಕಳುಹಿಸಿದರು. 'ಪೋಲೀಸರು ತನಿಖೆ ಮಾಡಲು ಶೇಡಬಾಳಕ್ಕೆ ಬರದೇ ಹೋದಾಗ ಇವರು ಜಿಲ್ಲೆಯ ಭ್ರಷ್ಟಾಚಾರ ನಿರೋಧ ಇಲಾಖೆಯ ಕೆಲವು ಅಧಿಕಾರಿಗಳನ್ನು ಹಿಡಿದು ಅವರ ಮೂಲಕ ಪೋಲೀಸರ ಮೇಲೆ ಒತ್ತಡ ತಂದು ಪೋಲೀಸರು ಈ ಪ್ರಕರಣದ ವಿಚಾರಣೆಗಾಗಿ ಶೇಡಬಾಳಕ್ಕೆ ಬರುವಂತೆ ಮಾಡಿದರು.

ಚಿಕ್ಕೋಡಿಯಿಂದ ಪೋಲೀಸ್ ಸಬ್‌ಇನ್‌ಸ್ಪೆಕ್ಟರ್‌ರೊಬ್ಬರು ಶೇಡಬಾಳಕ್ಕೆ ಬಂದು ವಿಚಾರಣೆಗೆ ತೊಡಗಿದರು. ಅನೇಕರನ್ನು ಕಂಡು ಮಾಹಿತಿ ಸಾಕ್ಷ್ಯಗಳನ್ನು ಸಂಗ್ರಹಿಸಿಕೊಂಡರು. ಈ ಪೋಲೀಸ್ ವಿಚಾರಣೆಯ ಸಮಯದಲ್ಲಿ ಶಿರಟೆಯವರೂ ಸಹ ಸಾಕ್ಷ್ಯ ನುಡಿದರು. ಹಿಂದೆ ಶಿರಟೆಯವರು ಆಸ್ಪತ್ರೆಯಲ್ಲಿ ಸತೀಶನಿಗೆ ಚಿಕಿತ್ಸೆಯ ಏರ್ಪಾಟು ಮಾಡುತ್ತಿದ್ದಾಗ ಪಾರ್ಶ್ವಕೀರ್ತಿಯವರು ಕಳುಹಿಸಿದ್ದ "ನಾನು ಹುಡುಗನಿಗೆ ಬಡಿದ ಸಂಗತಿಯನ್ನು ಡಾಕ್ಟರಿಗೆ ಹೇಳಬಾರದು" ಎಂಬ ಬರಹದ ರುಜುವಿದ್ದ ಚೀಟಿಯನ್ನು ಶಿರಟೆಯವರು ಈ ಸಂದರ್ಭದಲ್ಲಿ ಸಬ್‌ಇನ್‌ಸ್ಪೆಕ್ಟರ್‌ರ ವಶಕ್ಕೆ ಒಪ್ಪಿಸಿದರು. ಗುರುತರ ಅಪರಾಧ ಮಾಡಿರುವ ಪಾರ್ಶ್ವಕೀರ್ತಿಗಳಿಗೆ ನಿಜವಾಗಿಯೂ ಶಿಕ್ಷೆಯಾಗಬೇಕು ಎಂಬುದು ಶಿರಟೆಯವರ ಆಕಾಂಕ್ಷೆಯಾಗಿತ್ತು.

## ನೆಲಕಚ್ಚಿದ ವಿಚಾರಣೆ

ಚಿಕ್ಕೋಡಿಯ ಸಬ್‌ಇನ್‌ಸ್ಪೆಕ್ಟರ್‌ರವರು ಶೇಡಬಾಳಕ್ಕೆ ಬಂದು ವಿಚಾರಣೆ ಮಾಡುತ್ತಿದ್ದಾಗ ಪಾರ್ಶ್ವಕೀರ್ತಿವರ್ಣಿಗಳು ಸುಮ್ಮನೆ ಕೂರಲಿಲ್ಲ. ತಮ್ಮ ಬಡಿತಗಳಿಂದ ಸತೀಶ ಸತ್ತಿರುವುದು ರುಜುವಾತಾದರೆ ಮುಂದಿನ ಗತಿ! ಮರಣದಂಡನೆಯಾಗಬಹುದು, ಇಲ್ಲವೆ ಜೀವಾವಧಿ ಜೈಲುಶಿಕ್ಷೆಯಾಗಬಹುದು! ತಮ್ಮ ಜೀವ ಅಥವಾ ಜೀವನವನ್ನೇ ಬಯಸಿ ತಮ್ಮತ್ತ ಚಾಚಲಿರುವ ಈ ಕಾನೂನಿನ ಕೈಗಳಿಂದ ಮೋಕ್ಷ ಕಾಣಲು ಸತೀಶನ ಜೀವವನ್ನು ಆಹುತಿ ತೆಗೆದುಕೊಂಡ ಪಾರ್ಶ್ವಕೀರ್ತಿಗಳು ಬಯಸಿದರು. ತಾವು ಆಶ್ರಮದ ಹೆಸರಿನಲ್ಲಿ ಇದುವರೆಗೂ ದೋಚಿರುವ ಹಣವೆಲ್ಲಾ ಕೈಜಾರಿದರೂ ಸರಿ ಜೈಲುಕಂಬಿಯ ವಾಸ ಮಾತ್ರ ಬೇಡವೆಂದು ಅಂಗಲಾಚಿತು ಅವರ ಕ್ರೂರ ಮನಸ್ಸು. ಪಾರ್ಶ್ವಕೀರ್ತಿಗಳು ಕೂಡಲೇ ಕಾರ್ಯೋನ್ಮುಖರಾದರು.

ಪಾರ್ಶ್ವಕೀರ್ತಿಗಳ ಆಪತ್ಕಾಲದ ನೆಂಟನಾಗಿ ಅವರ ದುಷ್ಕೃತ್ಯಗಳ ಮಹಾಪೋಷಕನಾದ ಅಣ್ಣಾಸಾಹೇಬ್ ಲಗಾರೆಯೇ ಒದಗಿಬಂದನು. ಲಗಾರೆಗೆ ಚಿಕ್ಕೋಡಿಯ ಪ್ರಭಾವಶಾಲಿಗಳಾದ ಹಣವಂತರೊಬ್ಬರ ಪರಿಚಯವಿತ್ತು. ಇವರ ಹೆಸರು ಶಕಾರದಿಂದ ಪ್ರಾರಂಭವಾಗುತ್ತದೆ. ಪಾರ್ಶ್ವಕೀರ್ತಿಗಳು ಲಗಾರೆಯನ್ನು ಕೂಡಿಕೊಂಡು ಚಿಕ್ಕೋಡಿಗೆ ಬಂದು ಈ ಪ್ರಭಾವಶಾಲಿಗಳನ್ನು ಕಂಡರು. ಈ ಪ್ರಭಾವ ಚೆನ್ನಾಗಿ ಕೆಲಸ ಮಾಡಿತು. ವಿಚಾರಣೆಯಲ್ಲಿ ಸಂಗ್ರಹಿಸಿದ ಸಾಕ್ಷ್ಯಗಳನ್ನೆಲ್ಲಾ ಈ ಪ್ರಭಾವ ಸ್ಥಗಿತಗೊಳಿಸುವುದರಲ್ಲಿ ಯಶಸ್ವಿಯಾಯಿತು. ಪೋಲೀಸ್ ವಿಚಾರಣೆಯಾದ ಮೇಲೆ ಈ ಪ್ರಕರಣದಲ್ಲಿ ಪೋಲೀಸರು ಯಾವ ಕ್ರಮವನ್ನು ಕೈಗೊಂಡರು ಎಂಬುದನ್ನು ತಿಳಿಯಲು ಶೇಡಬಾಳದ ಜನರು ಆತುರದಿಂದ ಕಾದಿದ್ದರು. ವಿಚಾರಣೆಯನ್ನು ನೆಲಕಚ್ಚಿಸಲು ಪಾರ್ಶ್ವಕೀರ್ತಿಗಳು ನಡೆಸಿದ ಕರಾಮತ್ತು ಶೇಡಬಾಳದ ಅನೇಕರಿಗೆ ತಿಳಿಯಿತು. ನ್ಯಾಯಬಯಸಿದ ಜನರು ಈ ಸುದ್ದಿಯನ್ನು ಕೇಳಿ ನಿಟ್ಟುಸಿರು ಬಿಟ್ಟರು.

ಇದಾದಮೇಲೆ ಮೂಗರ್ಜಿದಾರರು ಮತ್ತೆ ಮೇಲಧಿಕಾರಿಗಳಿಗೆ ಇನ್ನೊಂದು ಮೂಗರ್ಜಿಯನ್ನು ಬರೆಯಲು ಹೋಗಲಿಲ್ಲ. ಅವರ ಜೀವನ ಸಮಸ್ಯೆಗಳೂ ಅವರಿಗೆ ಸಾಕಷ್ಟಿದ್ದುವು.

### ಮಾನಸ್ತಂಭದ ಪುನರ್ನಿರ್ಮಾಣ

ಈ ಸಮಯದಲ್ಲಿ ಆಶ್ರಮದಲ್ಲಿ ಹೊಸದಾದ ಮಾನಸ್ತಂಭವೊಂದನ್ನು ಕಟ್ಟಿಸಲು ದಾನಿಗಳು ಮುಂದಾದರು. ಶೇಡಬಾಳದ ಜಿನಗೌಡ ಕಲಗೌಡ ಪಾಟೀಲ್ ಎಂಬುವರ ಚಿಕ್ಕಮ್ಮನ ಮಗಳಾದ ಬಹಿಣಾಬಾಯಿ ಎಂಬುವರು ಮಾನಸ್ತಂಭ ಕಟ್ಟಿಸಲು ನಿರ್ಧರಿಸಿ ಅದಕ್ಕೆ ಅಗತ್ಯವಾದ ಹಣವನ್ನು ಆಕೆ ತನ್ನ ಅಣ್ಣ ಜಿನಗೌಡ ಕಲಗೌಡ ಪಾಟೀಲ (ಚಾವು ಸಾಹುಕಾರರು ಎಂದೂ ಕರೆಯುವುದುಂಟು) ರಿಗೆ ಕೊಟ್ಟು ಮಾನಸ್ತಂಭ ಕಟ್ಟಿಸುವ ಜವಾಬ್ದಾರಿಯನ್ನು ವಹಿಸಿದರು. ಚಾವು ಸಾಹುಕಾರರು 1956ರಲ್ಲಿ ಟ್ರಸ್ಟಿಗಳ ಅನುಮತಿ ಪಡೆದು ಆಶ್ರಮದಲ್ಲಿ ಮಾನಸ್ತಂಭ ಕಟ್ಟಿಸಲು ಪ್ರಾರಂಭ ಮಾಡಿದರು. ಈ ಕೆಲಸ ನಡೆಯುತ್ತಿರುವಾಗ ಪಾರ್ಶ್ವಕೀರ್ತಿಗಳು ಚಾವುಸಾಹುಕಾರರಿಗೆ ನೀಡಬೇಕಾದ ಸಹಕಾರವನ್ನು ನೀಡಲಿಲ್ಲ.

ಪಾರ್ಶ್ವಕೀರ್ತಿಗಳ ನೀತಿಹೀನ ವ್ಯವಹಾರಗಳಿಂದಾಗಿ ಮಣ್ಣುಗೂಡಿರುವ ಆಶ್ರಮದ ಮಾನ ಈ ಧರ್ಮಕಾರ್ಯದಿಂದಲಾದರೂ ಮತ್ತೆ ಕೂಡಿಬರುವುದೋ ಏನೋ ನೋಡಬೇಕು ಎಂದು ಕೆಲವರು ಕಟ್ಟುತ್ತಿದ್ದ ಮಾನಸ್ತಂಭವನ್ನು ನೋಡಿ ಮಾತನಾಡಿಕೊಳ್ಳಲಾರಂಭಿಸಿದರು.

ಅಧ್ಯಾಯ : ಎಂಟು

## ಆಶ್ರಮದಿಂದ ಉಚ್ಚಾಟನೆ

ಶೇಡಬಾಳದ ಆಶ್ರಮದಲ್ಲಿ ಪಾರ್ಶ್ವಕೀರ್ತಿಗಳ ಇರುವಿಕೆ ಊರಿನ ಬಹುಜನರಿಗೆ ಜಿಗುಪ್ಸೆಯನ್ನು ಉಂಟುಮಾಡಿತ್ತು. ಅವರನ್ನು ಇನ್ನೂ ಉಳಿಸಿಕೊಂಡಿರುವ ಟ್ರಸ್ಟಿಗಳ ನೈತಿಕತೆಯ ಬಗೆಗೇ ಜನರು ಸಂಶಯ ಪಡುವಂತಾಯಿತು. ಪಾರ್ಶ್ವಕೀರ್ತಿಗಳು ರಾಜೀನಾಮೆಯ ನಾಟಕವಾಡಿ ಟ್ರಸ್ಟಿಗಳನ್ನು ದಂಗುಬಡಿಸಿ ಅನಂತರ ಪೋಲೀಸ್ ವಿಚಾರಣೆಗೆ ಮಂಗಳಹಾಡಿಸಿ ತಮ್ಮ ಅಸತ್ಯ ಕೆಲಸಗಳಿಗೆ ಪಟ್ಟು ಕಟ್ಟಿಸಿಕೊಂಡರಲ್ಲಾ

ಎಂದು ವಿರೋಧಿಗಳು ತಮ್ಮ ಮುಂದಿನ ಕಾರ್ಯತಂತ್ರಗಳನ್ನು ಕುರಿತು ಆಲೋಚಿಸ ಲಾರಂಭಿಸಿದರು. ಆಶ್ರಮದ ಹುಡುಗರಂತೂ ಸದಾಕಾಲ ಭಯಭೀತಿಗಳಿಂದ ಕೂಡಿ ಕಾಲ ಹಾಕಲಾರಂಭಿಸಿದರು. ಇಂತಹ ದುರ್ಭರ ಸನ್ನಿವೇಶದಲ್ಲಿ ಪಾರ್ಶ್ವಕೀರ್ತಿಗಳೇ, ನಾಯಿಬಾಲ ಡೊಂಕು ಎಂಬಂತೆ ತಮ್ಮ ಮತ್ತೊಂದು ದುರ್ನಡತೆಯಿಂದ ಎಲ್ಲರ ಸಮಸ್ಯೆಗಳನ್ನು ಬಗೆಹರಿಸುವಂತಾದರು.

## ಶಾಂತಮತಿ ಕಂಡ ದೃಶ್ಯ

1957ನೇ ವರ್ಷದ ಮೇ ತಿಂಗಳ ಕಾಲ ಇರಬಹುದು. ಈ ಸಮಯದಲ್ಲಿ ಶೇಡಬಾಳ ಆಶ್ರಮದ ಧಾರ್ಮಿಕ ಶಿಕ್ಷಕರಾದ ಶಿರಟೆಯವರು ಬೆಳಗಾವಿಗೆ ಆಶ್ರಮದ ಕೆಲಸದ ನಿಮಿತ್ತ ಹೋಗಿದ್ದರು. ಆಶ್ರಮದಲ್ಲಿಯೇ ಇದ್ದ ಅವರ ಪತ್ನಿ ಶಾಂತಮತಿ ಒಂದುದಿನ ಬೆಳಗ್ಗೆ ಒಂಭತ್ತು ಗಂಟೆಯ ಸಮಯದಲ್ಲಿ ಹಾಲು ತರಲೆಂದು ತುಸು ದೂರದಲ್ಲಿಯೇ ಇದ್ದ ಮನೆಯೊಂದರ ಕಡೆ ಹೊರಟರು. ಈಕೆ ಹೋಗುತ್ತಿರುವುವನ್ನು ಕಂಡ ಪಾರ್ಶ್ವಕೀರ್ತಿಗಳು ಒಬ್ಬ ಚಿಕ್ಕ ಹುಡುಗನನ್ನು ಕರೆದು ಬನಾರಸೀಬಾಯಿ ಯನ್ನು ಕರೆದುಬರಲು ಸೂಚಿಸಿದರು. ಆಕೆ ಬಾಪಕೂಡಲೇ ಆ ಚಿಕ್ಕಹುಡುಗನನ್ನು ಬೇರೊಂದೆಡೆಗೆ ಕಳುಹಿಸಿದ ಪಾರ್ಶ್ವಕೀರ್ತಿಗಳು ಆಕೆಯೊಂದಿಗೆ ಸೋನೂಬಾಯಿ ತೀಸ ವಾಲ ವಾಸಿಸುತ್ತಿದ್ದ ಮನೆಯಲ್ಲಿ ಸೇರಿಕೊಂಡರು. ಆ ಸಮಯದಲ್ಲಿ ಸೋನೂಬಾಯಿ ಗುಜರಾತಿನ ಕಡೆಗೆ ಹೋಗಿದ್ದರು. ಪಾರ್ಶ್ವಕೀರ್ತಿಗಳು ಆತುರದಲ್ಲಿ ಮನೆಯ ಬಾಗಿಲನ್ನು ಭದ್ರಪಡಿಸಲಿಲ್ಲ. ಸೋನೂಬಾಯಿಯೇ ಸ್ವತಃ ಆಶ್ರಮದಲ್ಲಿ ದಾನವಾಗಿ ಕಟ್ಟಿಸಿದ್ದ ಈ ಮನೆಯನ್ನು ಅವರಿಲ್ಲದಾಗ ಶಿರಟೆ ದಂಪತಿಗಳೂ ಸಹ ಉಪಯೋಗಿಸಿ ಕೊಳ್ಳುತ್ತಿದ್ದರು. ಈ ಸಮಯದಲ್ಲಿ ಶಾಂತಮತಿ ಅಲ್ಲಿಗೆ ಬರಲಾರಳೆಂಬ ಊಹೆಯಿಂದ ಪಾರ್ಶ್ವಕೀರ್ತಿಗಳು ಅಲ್ಲಿ ಬನಾರಸೀಬಾಯಿಯೊಂದಿಗೆ ಸೇರಿಕೊಂಡಿದ್ದರು.

ಹಾಲು ತೆಗೆದುಕೊಂಡು ಬಂದ ಶಾಂತಮತಿ ಸೋನೂಬಾಯಿಯ ಮನೆಯೊಳಗಡೆ ಯಿದ್ದ ತಮ್ಮ ಪದಾರ್ಥವನ್ನೇನೋ ತೆಗೆದುಕೊಳ್ಳಲು ಬಾಗಿಲನ್ನು ದೂಡಿಕೊಂಡು ಒಳಕ್ಕೆ ಬಂದರು. ಬರುತ್ತಿದ್ದಂತೆಯೇ ಕಣ್ಮುಂದಿನ ದೃಶ್ಯವನ್ನು ನೋಡಿ ಅವಕ್ಕಾದರು. ಪಾರ್ಶ್ವಕೀರ್ತಿ ಮತ್ತು ಬನಾರಸೀ ಬಾಯಿ ಇಬ್ಬರೂ ಅಸಹ್ಯಸ್ಥಿತಿಯಲ್ಲಿದ್ದರು.

ಶಾಂತಮತಿಗೆ ಪಾರ್ಶ್ವಕೀರ್ತಿಗಳು ದೂರದವರೇನೂ ಆಗಿರಲಿಲ್ಲ. ಶಾಂತ ಮತಿಯ ಹಿರಿಯರಿಗೂ ಪಾರ್ಶ್ವಕೀರ್ತಿಗಳ ಹಿರಿಯರಿಗೂ ಹತ್ತಿರದ ಸಂಬಂಧವಿತ್ತು. ಶಾಂತಮತಿಗೆ ಪಾರ್ಶ್ವಕೀರ್ತಿಗಳು ಸಂಬಂಧದಲ್ಲಿ ಕಾಕನಮಗನಾಗಬೇಕು. ಹೆಚ್ಚು ಕಡಿಮೆ ಇಬ್ಬರೂ ಸಮವಯಸ್ಕರು ಇದರಿಂದಾಗಿ ಪಾರ್ಶ್ವಕೀರ್ತಿಗಳು ಶಾಂತಮತಿಗೆ ಅಣ್ಣ ಇಲ್ಲವೆ ತಮ್ಮನಾಗಬೇಕು. ತನ್ನ ಸೋದರಸಂಬಂಧಿ ಹೀಗೆ ಬನಾರಸೀ ಬಾಯಿಯೊಂದಿಗೆ

ನಾಚಿಗೆಗೇಡಿನ ಸ್ಥಿತಿಯಲ್ಲಿರುವುದನ್ನು, ಶಾಂತಮತಿ ಪ್ರತ್ಯಕ್ಷವಾಗಿ ಕಂಡು ಚೀಂಕಿಯಂ ಹಾದಳು. ತಕ್ಷಣ ಅಲ್ಲಿದ್ದ ಕಮಂಡಲವನ್ನು ತೆಗೆದು ಬೇರೊಂದೆಡೆಯಲ್ಲಿಟ್ಟರು. ಬನಾರಸೀಬಾಯಿಗೆ ನಾಲ್ಕಾರು ಏಟುಗಳನ್ನು ಹಾಕಿದರು. ಪಾರ್ಶ್ವಕೀರ್ತಿಗಳು ತಮ್ಮ ಅಸ್ತವ್ಯಸ್ತವಾದ ಕಾವಿ ಬಟ್ಟೆಯನ್ನು ಸರಿಪಡಿಸಿಕೊಳ್ಳುತ್ತಾ, ಶಾಂತಮತಿಯ ಮೇಲೆ ಗೊಣಗುಟ್ಟುತ್ತಾ ಅಲ್ಲಿಂದ ಕಾಲ್ತೆಗೆದರು.

ಈ ಘಟನೆಯಾದ ಕೆಲವು ಕ್ಷಣಗಳಲ್ಲಿಯೇ ಶಾಂತಮತಿಯವರಿಗೆ ತಾನು ಆಶ್ರಮದಲ್ಲಿಯೇ ಉಳಿದುಕೊಳ್ಳುವುದು ಅಪಾಯಕಾರಿಯೆನಿಸಿತು. ಕಳೆದ ವರ್ಷ ಇಂತಹ ದೃಶ್ಯವನ್ನೇ ಕಂಡಿದ್ದ ಸತೀಶನಿಗುಂಟಾದ ಗತಿ ಆಕೆಯಲ್ಲಿ ಜೀವಭಯ ಹೆಚ್ಚಾಗುವಂತೆ ಮಾಡಿತು. ಇನ್ನು ತಾನೊಬ್ಬಳೇ ಆಶ್ರಮದಲ್ಲುಳಿದುಕೊಂಡರೆ ಪಾರ್ಶ್ವಕೀರ್ತಿಗಳು ಸೇಡಿನಿಂದ ಏನು ಮಾಡುವುದಕ್ಕೂ ಹೇಸುವವರಲ್ಲ ಎಂಬುದದರಲ್ಲಿ ಆಕೆಗೆ ಸಂಶಯವೇ ಉಳಿಯಲಿಲ್ಲ. ತಕ್ಷಣ ತನ್ನ ಎರಡು ವರ್ಷದ ಮಗು ಶಾಂತಕುಮಾರನನ್ನು ಕರೆದು ಕೊಂಡು ತನ್ನ ತೌರೂರಾದ ಕುಂಭೋಜಕ್ಕೆ ಹೊರಟು ನಿಂತರು. ಆಶ್ರಮದಲ್ಲಿಯೇ ಇದ್ದ ಪಾರ್ಶ್ವಕೀರ್ತಿಗಳ ಬೆಂಬಲಿಗರೊಬ್ಬರಲ್ಲಿ ಹಣವನ್ನು ಸಾಲವಾಗಿ ಕೇಳಿದರು. ಆಕೆಯ ಉದ್ದೇಶ ತಿಳಿದ ಆತ ಹಣ ನೀಡಲೊಪ್ಪಲಿಲ್ಲ. ಶಾಂತಮತಿ ಶೇಡಬಾಳ ಊರಿನ ಪರಿಚಯದ ಮನೆಯವರೊಬ್ಬರಿಂದ ಮೂವತ್ತು ರೂಪಾಯಿಗಳನ್ನು ಪಡೆದು ಕೊಂಡು ಜಟಕಾಗಾಡಿಯಲ್ಲಿ ರೈಲ್ವೆಸ್ಟೇಷನ್ ಸೇರಿ ಮಿರಜ್ ಮಾರ್ಗವಾಗಿ ಕುಂಭೋಜ ವನ್ನು ಸೇರಿದರು.

## ಬನಾರಸೀಬಾಯಿಯ ಸಾಕ್ಷ್ಯ

ಶಾಂತಮತಿ ತಕ್ಷಣ ಆಶ್ರಮವನ್ನು ಬಿಟ್ಟು ಕುಂಭೋಜಕ್ಕೆ ಹೊರಟುಹೋದುದು ಪಾರ್ಶ್ವಕೀರ್ತಿಗಳನ್ನು ಧೃತಿಗೆಡಿಸಿತು. ಆಕೆ ಇಲ್ಲಿಯೇ ಇದ್ದಿದ್ದರೆ ಆಕೆಯ ಕಾಲುಂಕಟ್ಟಿ ಯಾದರೂ ನಡೆದ ಪ್ರಸಂಗ ಬಯಲಾಗದಂತೆ ಮಾಡಬಹುದಿತ್ತೆಂದು ಅವರಿಗೆ ಅನ್ನಿ ಸಿತು. ತಾವು ಆಶ್ರಮದಲ್ಲಿ ಇನ್ನು ಮುಂದೆ ನಿರಾತಂಕವಾಗಿ ಉಳಿದುಕೊಳ್ಳಬೇಕಾದರೆ ಸೋನೂಬಾಯಿಯ ಮನೆಯಲ್ಲಿ ನಡೆದ ಘಟನೆಯನ್ನು ಮುಚ್ಚಿಹಾಕಬೇಕಾದುದು ಅತ್ಯಗತ್ಯ ಎಂದು ಭಾವಿಸಿ, ಹೆಚ್ಚು ಪ್ರಚಾರವಾಗುವುದಕ್ಕೆ ಮುಂಚೆ ಅದನ್ನು ತಡೆ ಗಟ್ಟಲು ಕಾರ್ಯೋದ್ಯುಕ್ತರಾದರು. ಅಣ್ಣಾಸಾಹೇಬ್ ಲಗಾರೆಯೊಂದಿಗೆ ಕೂಡಿ ಮತ್ತು ಮೊದಲಿನಿಂದಲೂ ಅತ್ಯಂತ ಆಪ್ತನಾದ ಅಂಗವಿಕಲ ಮನುಷ್ಯನೊಬ್ಬ ನೊಂದಿಗೆ ಕೂಡಿ ಎಡೆಬಿಡದೆ ಸಮಾಲೋಚನೆ ನಡೆಸಿದರು.

ಕುಂಭೋಜಕ್ಕೆ ಹೋಗಿರುವ ಶಾಂತಮತಿಯನ್ನೂ ಬೆಳಗಾಂಗೆ ಹೋಗಿರುವ ಶಿರಟೆ ಯವರನ್ನೂ ತಕ್ಷಣ ಆಶ್ರಮಕ್ಕೆ ಕರೆಸಿಕೊಂಡು ಅವರ ಮನವೊಲಿಸಿಕೊಳ್ಳಬೇಕೆಂದು

ಮೂವರೂ ಒಂದು ತೀರ್ಮಾನಕ್ಕೆ ಬಂದರು. ಅದರಂತೆ ಶಿರಟೆಯವರಿಗೆ ಒಂದು ಪತ್ರ ಬರೆದು ಆಶ್ರಮದಲ್ಲಿ ತುರ್ತುಕೆಲಸವಿದೆ ಬನ್ನಿ ಎಂದು ಸೂಚಿಸಿದರು. ಹಾಗೆಯೇ ಶಾಂತಮತಿಗೆ ನಿಮ್ಮ ಯಜಮಾನರು ಆಶ್ರಮಕ್ಕೆ ಹಿಂತಿರುಗಿದ್ದಾರೆ ಕೂಡಲೇ ಹೊರಟು ಬನ್ನಿ ಎಂದು ಪತ್ರ ಬರೆದರು. ಶಾಂತಮತಿಗೆ ಪತ್ರ ಬಂದ ಕೂಡಲೇ ಆಕೆಯ ಸಹೋದರರು ಮೂರು ದಿನ ತಡಮಾಡಿ ಹೋಗುವಂತೆ ಸಲಹೆ ನೀಡಿದರು. ಅದರಂತೆ ಆಕೆ ಮೂರು ದಿನ ಕಳೆದ ಮೇಲೆ ಮಿರಜ್‌ಗೆ ಬಂದು ಶೇಡಬಾಳದ ರೈಲನ್ನು ಹಿಡಿದರು. ಶಾಂತಮತಿ ಶೇಡಬಾಳದ ರೈಲ್ವೆಸ್ಟೇಷನ್ನಿನಲ್ಲಿ ಇಳಿದ ಸ್ವಲ್ಪ ಮುಂಚೆ ಶಿರಟೆಯವರು ಬೆಳಗಾಂ ಕಡೆಯಿಂದ ಬಂದ ರೈಲಿನಲ್ಲಿ ಬಂದು ಶೇಡಬಾಳದ ಸ್ಟೇಷನ್‌ನಲ್ಲಿ ಇಳಿದಿದ್ದರು. ಶೇಡಬಾಳ ಸ್ಟೇಷನ್ ಮಿರಜ್ ಮತ್ತು ಬೆಳಗಾಂ ರೈಲುಗಳು ಕ್ರಾಸ್ ಆಗುವ ಸ್ಥಳವಾಗಿತ್ತು. ಪತಿಪತ್ನಿಯರು ಅಲ್ಲಿಯೇ ಭೇಟಿಯಾಗಿ ಆಶ್ರಮದ ಮನೆಗೆ ಜೊತೆಯಾಗಿ ಹೊರಟರು. ದಾರಿಯಲ್ಲಿ ಶಾಂತಮತಿ ಹಿಂದೆ ನಡೆದ ಘಟನೆಯನ್ನೆಲ್ಲಾ ವಿವರಿಸಿದರು.

ಶಿರಟೆಯವರಿಗೆ ಹೆಂಡತಿಯ ಮಾತುಗಳನ್ನು ನಂಬದೇ ಇರಲು ಕಾರಣಗಳೇನಿರಲಿಲ್ಲ. ಆದರೂ ಒಂದು ಕ್ಷಣ ತಮ್ಮ ಹೆಂಡತಿಯೇನಾದರೂ ಕಥೆ ಕಟ್ಟಿರಬಹುದೇ ಅನ್ನಿಸಿತು. ಶಾಂತಮತಿ ಮೊದಲಿನಿಂದಲೂ ಪಾರ್ಶ್ವಕೀರ್ತಿಗಳನ್ನು ತಾತ್ಸಾರ ಭಾವನೆಯಿಂದ ಕಾಣುತ್ತಿದ್ದುದು ಶಿರಟೆಯವರಿಗೆ ತಿಳಿದಿತ್ತು. ಈ ಅಸಮಾಧಾನವೇನಾದರೂ ಕಥೆ ಕಟ್ಟಲು ಕಾರಣವಾಗಿಬಹುದೇ ಎಂದುಕೊಂಡ ಶಿರಟೆಯವರು ನೇರವಾಗಿ ಬನಾರಸೀಬಾಯಿಯನ್ನೇ ಈ ಬಗ್ಗೆ ವಿಚಾರಿಸಿ ಸತ್ಯ ತಿಳಿದುಕೊಳ್ಳಬೇಕೆಂದು ಆಲೋಚಿಸಿ ತಕ್ಷಣವೇ ಊರೊಳಗಿದ್ದ ಬನಾರಸೀ ಬಾಯಿಯ ಮನೆಯತ್ತ ಹೊರಟರು.

ಶಿರಟೆಯವರು ಬಂದಾಗ ಬನಾರಸೀಬಾಯಿ ತನ್ನ ಗಂಡನಿಗೆ ಊಟಕ್ಕೆ ಬಡಿಸುತ್ತಿದ್ದಳು. ಶಿರಟೆಯವರು ಆಕೆಯ ಗಂಡನ ಮುಂದೆ ಈ ಪ್ರಸ್ತಾಪ ತೆಗೆಯುವುದು ಹೇಗೆಂದು ಒಂದು ಕ್ಷಣ ಚಿಂತಿಸಿ ನಂತರ ಆಕೆಯನ್ನು ಕರೆದು "ನಿನ್ನ ಮಗನಿಗೆ ಪಗಾರ (ಸಂಬಳ) ಕೊಡೋದಿದೆ ಆಶ್ರಮಕ್ಕೆ ಬಾ" ಎಂದು ಕರೆದರು. ಬನಾರಸೀ ಬಾಯಿ ಗಂಡನಿಗೆ ಬಡಿಸಿಕೊಳ್ಳಲು ಹೇಳಿ ಶಿರಟೆಯವರನ್ನು ಹಿಂಬಾಲಿಸಿದಳು.

ಶಿರಟೆಯವರ ಮನೆಗೆ ಬಂದ ಬನಾರಸೀಬಾಯಿ ಶಾಂತಮತಿಯನ್ನು ಕಾಣುತ್ತಿದ್ದಂತೆಯೇ, ತನ್ನನ್ನು ಕರೆದುಕೊಂಡು ಬಂದ ನಿಜವಾದ ಕಾರಣ ಅವಳಿಗೆ ತಿಳಿದು ಹೋಯಿತು. ಲಜ್ಜೆಯಿಂದ ತಲೆತಗ್ಗಿಸಿದಳು ಶಿರಟೆಯವರು ಇನ್ನೇನು ಆಕೆಯನ್ನು ಪ್ರಶ್ನಿಸಬೇಕೆನ್ನುವಷ್ಟರಲ್ಲಿ ಆಕೆ ತಾನಾಗಿಯೇ "ನಿಮ್ಗಾಕಿ ಹೇಳೋದಲ್ಲಾ ಖರೇ ಐತ್ರಿ. ನಾವು ತಪ್ಪು ಮಾಡಿದ್ದು ಉಂಟು." ಎಂದು ನುಡಿದು ತನ್ನ ಮತ್ತು ಪಾರ್ಶ್ವಕೀರ್ತಿಗಳ ಅನೈತಿಕ ಸಂಬಂಧವನ್ನು ಒಪ್ಪಿಕೊಂಡಳು. ಶಿರಟೆಯವರು ಈ ಪ್ರಕರಣವನ್ನು

ಅಲ್ಲಿಗೆ ಮುಚ್ಚಾಯ ಮಾಡಲು ಇಷ್ಟಪಡಲಿಲ್ಲ. ಪಾರ್ಶ್ವಕೀರ್ತಿಗಳ ದುಷ್ಕೃತ್ಯಗಳನ್ನು ಅದುವರೆಗೂ ಸಹಿಸಿ ಸಹಿಸಿ ಅವರಿಗೆ ಸಾಕಾಗಿತ್ತು. ಇನ್ನು ಸುಮ್ಮನಿರಬಾರದೆಂದು ಅವರು ಬನಾರಸೀಬಾಯಿಯನ್ನು ಕುರಿತು "ನೀನು ನಿಜ ಹೇಳಿದ್ದಕ್ಕೆ ಸಂತೋಷ. ನಾನು ಈ ಸಂಗತಿಯನ್ನು ಈ ಊರಿನಲ್ಲಿ ಯಾರ ಹತ್ತಿರವೂ ಹೇಳುವುದಿಲ್ಲ. ಶಾಂತಮತಿಗೂ ಸಹ ಪ್ರಚಾರ ಮಾಡಬಾರದೆಂದು ಹೇಳುತ್ತೇನೆ. ಆದರೆ ಇದಕ್ಕೆ ಒಂದು ನಿಬಂಧನೆಯಿದೆ. ಅದೆಂದರೆ ನೀನು ನನ್ನ ಸಂಗಡ ಸಾಂಗ್ಲಿಗೆ ಬಂದು ಆಶ್ರಮದ ಮಹಾಮಂತ್ರಿಗಳಾದ ಗುಲಾಬ್‌ಚಂದರ ಹತ್ತಿರ ನಡೆದ ಘಟನೆಯ ಬಗೆಗೆ ಸಾಕ್ಷ್ಯ ಹೇಳಬೇಕು ಇಷ್ಟು ಕೆಲಸ ಮಾಡಿದರೆ ಈ ಊರಿನಲ್ಲಿ ನಿನ್ನ ಮರ್ಯಾದೆ ಉಳಿದು ನಿನಗೆ ನಿಶ್ಚಿಂತೆಯಾಗುತ್ತದೆ, ಅಲ್ಲದೆ ಆಶ್ರಮದ ಮರ್ಯಾದೆಯನ್ನೂ ಉಳಿಸಿದಂತಾಗುತ್ತದೆ" ಎಂದು ಹೇಳಿದರು. ಬನಾರಸೀಬಾಯಿ ಎರಡನೆಯ ಮಾರ್ಗವಿಲ್ಲದೆ ಇದಕ್ಕೆ ಸುಲಭವಾಗಿ ಒಪ್ಪಿಕೊಂಡಳು. ಮರುದಿನವೇ ಪ್ರಯಾಣ ಏರ್ಪಾಟಾಯಿತು.

ಶಿರಟೆಯವರು ಮತ್ತು ಶಾಂತಮತಿ ಪ್ರತ್ಯೇಕ ಪ್ರತ್ಯೇಕವಾಗಿ ಆಶ್ರಮಕ್ಕೆ ಬರದೆ ಇಬ್ಬರೂ ಒಟ್ಟಿಗೇ ಆಶ್ರಮಕ್ಕೆ ಬಂದುದು ಪಾರ್ಶ್ವಕೀರ್ತಿಗಳಿಗೆ ದಿಗಿಲನ್ನುಂಟು ಮಾಡಿತ್ತು. ಹೀಗೆ ಬಂದವರೇ ಬನಾರಸೀಬಾಯಿಯನ್ನು ಮನೆಗೆ ಕರೆಸಿ ಏನನ್ನೋ ಮಾತನಾಡಿರುವುದನ್ನು ಕಂಡ ಮೇಲಂತೂ ಪಾರ್ಶ್ವಕೀರ್ತಿಗಳು ಭೂಮಿಗೇ ಇಳಿದು ಹೋದರು. ಇಷ್ಟಾದರೂ ಪಾರ್ಶ್ವಕೀರ್ತಿಗಳು ತಮ್ಮ ಕುಯುಕ್ತಿಗಳನ್ನು ಮಾತ್ರ ಬಿಡಲಿಲ್ಲ. ತಕ್ಷಣ ತಮ್ಮ ದಳ್ಳಾಳಿಗಳಲ್ಲಿ ಒಬ್ಬನಾದ ಅಂಗವಿಕಲ ಮನುಷ್ಯನಿಗೆ ಮುಂದೆ ಮಾಡಬೇಕಾಗಿರುವ ಕಾರ್ಯಗಳನ್ನು ವಹಿಸಿದರು. ಅಂಗವಿಕಲ ಮನುಷ್ಯ ಬನಾರಸೀಬಾಯಿ ಶಿರಟೆಯವರ ಮನೆಯಿಂದ ಬಂದಮೇಲೆ ಆಕೆಯನ್ನು ಸುದ್ದಿ ತಿಳಿದುಕೊಳ್ಳಲು ಕರೆಸಿದನು. ಅವಳಿಂದ ಮಾರನೆಯ ದಿನ ಶಿರಟೆಯವರೊಂದಿಗೆ ಸಾಂಗ್ಲಿಗೆ ಹೋಗಲಿರುವ ವಿಚಾರ ತಿಳಿದು ಬಂತು. ಬನಾರಸೀಬಾಯಿ ತಾನು ಸಾಕ್ಷ್ಯ ಹೇಳಲಿರುವ ವಿಷಯವನ್ನು ಮರೆಮಾಚಿದಳು. ಇಷ್ಟಾದರೂ ಆಕೆ ಗುಲಾಬ್‌ಚಂದರ ಹತ್ತಿರ ತನ್ನ ತಪ್ಪನ್ನು ಒಪ್ಪಿಕೊಳ್ಳಬಹುದೆಂಬ ಶಂಕೆಯಿಂದ ಅಂಗವಿಕಲ ಮನುಷ್ಯ ಪಾರ್ಶ್ವಕೀರ್ತಿಗಳ ಪರವಾಗಿ ಆಕೆಗೆ ಐದುನೂರು ರೂಪಾಯಿಗಳನ್ನು ಕೊಡಲು ಹೋಗುತ್ತಾ "ತೆಗೆದುಕೋ ಈ ಹಣವನ್ನು ಏನೇ ಆದರೂ ನೀನು ಗುಲಾಬ್‌ಚಂದರ ಹತ್ತಿರ ನಿಜ ವಿಚಾರವನ್ನು ಹೇಳಬೇಡ. ಒಂದು ಪಕ್ಷ ನೀನು ಬಾಯಿಬಿಟ್ಟೆಯಾದರೆ ನಿನ್ನ ಕಾಲಮೇಲೆ ನೀನೇ ಚಪ್ಪಡಿಯನ್ನು ಹಾಕಿಕೊಳ್ಳುವೆ. ಎಚ್ಚರವಿರಲಿ" ಎಂದು ಮುಂತಾಗಿ ಉಪದೇಶ ಮಾಡಿದನು. ಬನಾರಸೀಬಾಯಿ ಇದಕ್ಕೆ ಪ್ರತಿಯಾಗಿ "ಹಣವೇನೂ ಬೇಡ್ರಿ. ನಾನು ಸಾಂಗ್ಲಿಗೆ ಹೋದರೂ ನಿಜವಿಷಯವನ್ನು ಹೇಳುವುದಿಲ್ಲ ನೀವು ಅಂಜಬೇಡಿ ಸ್ವಾಮಿಗಳ ಗುಟ್ಟನ್ನು ನಾನು ಬಿಟ್ಟುಕೊಡುವುದಿಲ್ಲ" ಎಂದು ಹಾರಿಕೆಯ ಮಾತುಗಳಿಂದ ಅವನನ್ನು ನಂಬಿಸಿ ಅವನು ಕೊಡಲು ಬಂದ ಹಣವನ್ನು ತೆಗೆದುಕೊಳ್ಳದೆ ಹಾಗೆಯೇ

ಹಿಂತಿರುಗಿದಳು. ಅಷ್ಟು ದೊಡ್ಡ ಮೊತ್ತದ ಹಣವನ್ನು ತೆಗೆದುಕೊಂಡು ಮನೆಗೆ ಹೋದರೆ ಗಂಡನಿಗೆ ಸಮಜಾಯಿಷಿ ಹೇಳುವುದು ಹೇಗೆ ? ಅವನು ತನ್ನನ್ನು ಸುಮ್ಮನೆ ಬಿಡುತ್ತಾನೆಯೇ ? ಈಗಾಗಿರುವ ಸಂಕಟವೇ ಸಾಕು. ಇನ್ನೊಂದು ರಂಪವಾಗುವುದು ಬೇಡ ಎಂಬ ಅಂಜಿಕೆಯಿಂದ ಆಕೆ ಹಣವನ್ನು ತೆಗೆದುಕೊಳ್ಳಲು ಇಷ್ಟಪಡಲಿಲ್ಲ.

ಮರುದಿವಸ ಬೆಳಗ್ಗೆಯೇ ಶಿರಟೆಯವರು ಬನಾರಸೀಬಾಯಿಯೊಂದಿಗೆ ಸಾಂಗಲಿಗೆ ಬಂದು ಗುಲಾಬ್‌ಚಂದ್ ಖೇಮ್‌ಚಂದ್‌ಷಹಾರನ್ನು ಕಂಡರು. ಆಕೆಯ ಸಮ್ಮುಖದಲ್ಲಿಯೇ ತಮ್ಮ ಪತ್ನಿ ಶಾಂತವ್ವನವರಿಗೆ ವಿವರಿಸಿದಂತೆ ಪಾರ್ಶ್ವಕೀರ್ತಿಗಳ ಮನ್ಮಥ ಲೀಲೆಯನ್ನು ಗುಲಾಬ್‌ಚಂದರಿಗೆ ವಿವರಿಸಿದರು. ಶಿರಟೆಯವರ ವಿವರಣೆ ಮುಗಿದ ಮೇಲೆ ಗುಲಾಬ್‌ಚಂದರು ಬನಾರಸೀಬಾಯಿಯ ಕಡೆ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು. ಆಕೆ ಗುಲಾಬ್‌ಚಂದರಿಗೆ "ಅವರು ಹೇಳೋದೆಲ್ಲಾ ಖರೇ ಐತ್ರಿ" ಎಂದು ಹೇಳಿ ತನ್ನ ತಪ್ಪನ್ನು ಅಲ್ಲಿಯೂ ಒಪ್ಪಿಕೊಂಡಳು. ಇಷ್ಟು ಹೊತ್ತಿಗೆ ಅವಳ ಮನಸ್ಸು ಪಶ್ಚಾತ್ತಾಪದಿಂದ ಸಾಕಷ್ಟು ಬೆಂದಿತ್ತು. ಪ್ರಲೋಭಕ್ಕೊಳಗಾಗಿ ಮಾಡಿದ ತಪ್ಪನ್ನು ಇಲ್ಲವೆಂದು ಮೊಂಡುಹಿಡಿದು ಹೇಳಲು ಅವಳ ಪ್ರಾಮಾಣಿಕ ಅಂತರಂಗ ಒಪ್ಪಲಿಲ್ಲ. ಜೊತೆಗೆ ನಿಜ ಹೇಳದಿದ್ದರೆ ಮುಂದೆ ಶೇಡಬಾಳದಲ್ಲುಂಟಾಗಬಹುದಾದ ಅಪಮಾನಕರ ಪ್ರಸಂಗಗಳ ನಿರೀಕ್ಷೆ ಅವಳನ್ನು ಸತ್ಯದ ಬಗೆಗೆ ಸಾಕ್ಷ್ಯ ಹೇಳುವಂತೆ ಮಾಡಿತ್ತು.

ಗುಲಾಬ್‌ಚಂದರು ಇದನ್ನೆಲ್ಲಾ ಕೇಳಿಕೊಂಡ ಮೇಲೆ "ಈ ಪ್ರಕರಣವನ್ನು ನನ್ನ ಮುಂದೆ ಹೇಳದಂತೆ ಬೇರೆ ಯಾರ ಮುಂದೆಯೂ ಹೇಳಲು ಹೋಗಬೇಡಿ. ಇದರಿಂದ ಸಮಾಜದ ಮರ್ಯಾದೆ ಹೋಗುತ್ತದೆ. ನಾನು ಟ್ರಸ್ಟಿಗಳ ಮೀಟಿಂಗ್ ಕರೆದು ಎಲ್ಲವನ್ನೂ ಸರಿಪಡಿಸುತ್ತೇನೆ" ಎಂದು ಶಿರಟೆಯವರಿಗೆ ಆಶ್ವಾಸನೆ ಕೊಟ್ಟು ಇಬ್ಬರನ್ನೂ ಕಳುಹಿಸಿ ಕೊಟ್ಟರು.

## ಟ್ರಸ್ಟಿಗಳ ಕಾರ್ಯಾಚರಣೆ

ಪಾರ್ಶ್ವಕೀರ್ತಿಗಳು ವಿದ್ಯಾದೇಗುಲವಾದ ಆಶ್ರಮದಲ್ಲಿ ಮಾಡುತ್ತಿರುವ ಅವ್ಯವಹಾರಗಳು ಮತ್ತು ಅನಾಚಾರಗಳ ಬಗೆಗೆ ಮೊದಲಿನಿಂದಲೂ ಉದಾಸೀನ ಮತ್ತು ನಿಧಾನಪ್ರವೃತ್ತಿಯನ್ನು ತೋರಿಸುತ್ತಿದ್ದ ಟ್ರಸ್ಟಿನ ಅಧಿಕಾರವರ್ಗದವರು ಈಗ ಸುಮ್ಮನೆ ಕೂರುವ ಹಾಗಿರಲಿಲ್ಲ. ಪಾರ್ಶ್ವಕೀರ್ತಿಗಳು ವ್ಯಭಿಚಾರನಿರತರಾಗಿದ್ದಾಗಲೇ ಸಿಕ್ಕಿಬಿದ್ದುದು, ಬನಾರಸೀಬಾಯಿ ಅದರ ಬಗ್ಗೆ ಗುಲಾಬ್‌ಚಂದರ ಹತ್ತಿರ ಸಾಕ್ಷ್ಯ ಹೇಳಿದ್ದು ಈ ಸುದ್ದಿಗಳೆಲ್ಲಾ ರಹಸ್ಯವಾಗಿಯೇನೂ ಉಳಿಯಲಿಲ್ಲ. ಹೇಗೋ ಇದು ಬಹಿರಂಗವಾಗಿ ಒಬ್ಬರಿಂದೊಬ್ಬರಿಗೆ ಹಬ್ಬಿ ಊರ ಸುದ್ದಿಯಾಯಿತು. ಊರಿನ ಜನಗಳೂ ಸಹ ಇನ್ನೂ ಸುಮ್ಮನೆ ಕೂರದೆ ಟ್ರಸ್ಟಿಗಳ ಮೇಲೆ ಒತ್ತಡ ತಂದರು. ಅಶೋಕ

ದಾದಾ ಪಾಟೀಲರು ಮತ್ತು ಶಿರಟೆಯವರು ಮತ್ತೊಮ್ಮೆ ಪಾರ್ಶ್ವಕೀರ್ತಿಗಳ ವಿರುದ್ಧ ಹೊಸ ಆರೋಪಪಟ್ಟಿಯನ್ನು ಸಿದ್ಧಪಡಿಸಿದರು. ಇದರಲ್ಲಿ ಪಾರ್ಶ್ವಕೀರ್ತಿಗಳ ಇತ್ತೀಚಿನ ಹಣದ ಅವ್ಯವಹಾರಗಳೂ ಸೇರಿದ್ದವು. ನಿದರ್ಶನಕ್ಕೆ ಒಂದು ವಂಚನೆಯ ಪ್ರಕರಣ ಹೀಗಿದೆ.

ಆಶ್ರಮದ ಒಬ್ಬ ಕೆಲಸಗಾರನಿಗೆ ಇಪ್ಪತ್ತು ರೂಪಾಯಿ ಸಂಬಳ ಕೊಡಬೇಕಾಗಿತ್ತು. ಪಾರ್ಶ್ವಕೀರ್ತಿಗಳು ಆತನಿಗೆ ಸಂಬಳದ ಇಪ್ಪತ್ತು ರೂಪಾಯಿಗಳ ಜೋಳವನ್ನು ಅಳೆಸಿ ಕೊಟ್ಟರು. ಮುಂದೆ ಶಿರಟೆಯವರು ಲೆಕ್ಕ ಬರೆಯುವಾಗ ಪಾರ್ಶ್ವಕೀರ್ತಿಗಳು ಸಂಬಳದ ಬಾಬ್ತು ಇಪ್ಪತ್ತು ರೂಪಾಯಿಗಳ ಖರ್ಚನ್ನೂ ಸಹ ಹಾಕಿಸಿ ಹಣ ಪಡೆದುಕೊಂಡರು. ಕೆಲಸಗಾರನಿಗೆ ಜೋಳ ಕೊಟ್ಟಿರುವ ಸಂಗತಿಯನ್ನು ಶಿರಟೆಯವರಿಗೆ ಇವರು ತಿಳಿಸಲಿಲ್ಲ. ಸಂಬಳದ ಖರ್ಚು ಹಾಕಿಸುವಾಗಲೇ ಜೋಳದ ಬಾಬ್ತು ಅದನ್ನು ಜಮಾ ಮಾಡಿಸಬೇಕಾಗಿತ್ತು. ಆದರೆ ಹಾಗೆ ಮಾಡಿಸದೆ ಇಪ್ಪತ್ತು ರೂಪಾಯಿಗಳನ್ನು ತಾವೇ ಇಟ್ಟುಕೊಂಡರು. ಸ್ವಲ್ಪ ಕಾಲದ ಮೇಲೆ ಜೋಳ ಕೊಟ್ಟಿರುವ ಸಂಗತಿ ಶಿರಟೆಯವರಿಗೆ ತಿಳಿದು ಬಂತು.

ಟ್ರಸ್ಟಿಗಳು ಎಲ್ಲರ ನಿರೀಕ್ಷೆಯಂತೆ ಬೇಗನೆ ಆಶ್ರಮದಲ್ಲಿ ಸಭೆ ಸೇರಿದರು. ಹೊರಗಡೆ ಅಸಂಖ್ಯಾತ ಜನರು ಸಭೆಯ ನಿರ್ಣಯವನ್ನು ಎದುರುನೋಡುತ್ತಾ ನಿಂತರು. ಸಭೆಯಲ್ಲಿ ಪಾರ್ಶ್ವಕೀರ್ತಿಗಳ ದುರ್ವ್ಯವಹಾರಗಳ ವಿಚಾರವಾಗಿ ಚರ್ಚೆಯಾಯಿತು. ಪಾರ್ಶ್ವಕೀರ್ತಿಗಳನ್ನು ಆಶ್ರಮದಿಂದ ಹೊರದೂಡುವ ವಿಷಯದಲ್ಲಿ ಯಾವುದೇ ಭಿನ್ನಾಭಿಪ್ರಾಯವಿರಲಿಲ್ಲ. ಆದರೆ ಸಭೆ ಮಾಡುವ ನಿರ್ಣಯದಲ್ಲಿ ಪಾರ್ಶ್ವಕೀರ್ತಿಗಳು ಮಾಡಿರುವ ಹಣದ ವಂಚನೆ–ಹೊಲಸು ಕೆಲಸಗಳ ಪ್ರಸ್ತಾಪ ಮಾಡಬೇಕೇ ಬೇಡವೇ ಎಂಬ ಮಾತು ಬಂದು ಅವರನ್ನು ಆಶ್ರಮದಿಂದ ತೆಗೆಯುವುದು ನಮಗೆ ಮುಖ್ಯ. ಅವರು ಈ ಹಿಂದೆಯೇ ಅಧಿಷ್ಠಾತ ಹುದ್ದೆಗೆ ಕೊಟ್ಟಿರುವ ರಾಜೀನಾಮೆಯನ್ನು ಒಪ್ಪಿಕೊಂಡು ಅವರನ್ನು ಸುಲಭವಾಗಿ ಕಳುಹಿಸಿಕೊಟ್ಟರಾಯಿತೆಂದು ಒಂದು ತೀರ್ಮಾನಕ್ಕೆ ಬಂದರು. ಇದರಂತೆ ಪಾರ್ಶ್ವಕೀರ್ತಿಗಳು ಹಿಂದೆ ನೀಡಿದ್ದ ರಾಜೀನಾಮೆ ಪತ್ರವನ್ನು ಒಪ್ಪಿಕೊಂಡು ನಿರ್ಣಯ ಮಾಡಿದರು. ಟ್ರಸ್ಟಿನ ನಿರ್ಣಯವನ್ನು ಪಾರ್ಶ್ವಕೀರ್ತಿಗಳಿಗೆ ತಿಳಿಸಿ ಆಶ್ರಮದ ಅಧಿಕಾರವನ್ನು ಒಪ್ಪಿಸಿ ಹೋಗುವಂತೆ ಆದೇಶ ನೀಡಲಾಯಿತು.

### ಭಂಡತನ

ಟ್ರಸ್ಟಿಗಳು ಪಾರ್ಶ್ವಕೀರ್ತಿಗಳನ್ನು ಆಶ್ರಮದಿಂದ ಸುಲಭವಾಗಿ ತೆರವು ಮಾಡಿಸುತ್ತೇವೆಂದುಕೊಂಡರು. ಆದರೆ ಪಾರ್ಶ್ವಕೀರ್ತಿಗಳು ಅಷ್ಟೇ ಸುಲಭವಾಗಿ ಹೊರಟು ಹೋಗುವ ಮನುಷ್ಯರಾಗಿರಲಿಲ್ಲ. ನೀರಿನಲ್ಲಿ ಮುಳುಗಿದವನಿಗೆ ಚಳಿಯೇನು ? ಮಳೆಯೇನು ? ಅವರು ಭಂಡತನಕ್ಕಿಳಿದು ಟ್ರಸ್ಟಿನ ನಿರ್ಣಯವನ್ನು ಕಾಲಕಸವಾಗಿ ಕಂಡರು.

ನಾನು ಹಿಂದೆ ಕೊಟ್ಟಿದ್ದ ರಾಜೀನಾಮೆಗೆ ಈಗ ಒಪ್ಪುವುದಿಲ್ಲ. ಆದ್ದರಿಂದ ನಾನು ಆಶ್ರಮ ಬಿಟ್ಟು ಹೋಗುವುದೂ ಇಲ್ಲ, ಅಧಿಕಾರವನ್ನೂ ವಹಿಸಿಕೊಡುವುದಿಲ್ಲ ಎಂದು ಹಠಹಿಡಿದು ಕುಳಿತರು.

ಈ ಪ್ರಕರಣವಾದ ಕೆಲವು ದಿನಗಳಲ್ಲಿಯೇ ಗುಲಾಬ್‌ಚಂದ್ ಖೇಮ್‌ಚಂದ್‌ಷಹಾ ರವರು ಟ್ರಸ್ಟಿನ ಇನ್ನೊಂದು ಸಭೆಯನ್ನು ಕರೆದರು. ಈ ಬಾರಿ ಆಶ್ರಮದಲ್ಲಿ ಅಸಾಧ್ಯ ಜನಸಂದಣಿ ಜಮಾಯಿಸಿತು. ಜನರ ಕ್ರೋಧ ಟ್ರಸ್ಟಿಗಳ ಕಡೆಗೂ ತಿರುಗಿ ನೀವು ಪಾರ್ಶ್ವಕೀರ್ತಿಗಳನ್ನು ಆಶ್ರಮದಿಂದ ಓಡಿಸದಿದ್ದರೆ ನಾವು ನಿಮ್ಮನ್ನು ಸುಮ್ಮನೆ ಬಿಡುವವರಲ್ಲ ಎಂದು ಎಚ್ಚರಿಸಿದರು.

## ಉಚ್ಚಾಟನೆ

ಆಶ್ರಮದ ಆಧಿಕಾರವರ್ಗ ಪಾರ್ಶ್ವಕೀರ್ತಿಗಳ ಕಪಿಮುಷ್ಟಿಯಿಂದ ಆಶ್ರಮವನ್ನು ಪಾರುಮಾಡಲು ಈ ಸಾರಿ ಸಕಲಸಿದ್ಧತೆಗಳನ್ನು ಮುಂಚಿತವಾಗಿಯೇ ಮಾಡಿಕೊಂಡಿತ್ತು. ಅಗತ್ಯವಾದರೆ ಟ್ರಸ್ಟಿನ ಸಭೆ ಅಥವಾ ಸಾರ್ವಜನಿಕರೆದುರು ಬಹಿರಂಗವಾಗಿ ಸಾಕ್ಷ್ಯ ಹೇಳಿ ಸಲು ಬನಾರಸೀಬಾಯಿಯನ್ನು ಮೊದಲೇ ಕರೆಸಿಕೊಂಡಿದ್ದರು. ಆಕೆ ಇದಕ್ಕೆ ಒಪ್ಪಿ ಆಶ್ರಮಕ್ಕೆ ಬಂದು ಟ್ರಸ್ಟಿಗಳ ಸಮಕ್ಷಮದಲ್ಲಿ ಮಂಡಿಸಿದಳು. ಸಭೆ ಆರಂಭವಾಗಿ ಪಾರ್ಶ್ವಕೀರ್ತಿಗಳ ಪ್ರಕರಣವನ್ನು ಚರ್ಚಿಸಿತು. ಕಡೆಗೆ ಒಂದು ನಿರ್ಣಯವನ್ನು ಸರ್ವಾನುಮತದಿಂದ ಅಂಗೀಕರಿಸಿತು. ಮರಾಠಿ ಭಾಷೆಯಲ್ಲಾದ ನಿರ್ಣಯದ ಸಾರಾಂಶ ಹೀಗಿದೆ.

''ಪಾರ್ಶ್ವಕೀರ್ತಿವರ್ಣಿಗಳು ಆಶ್ರಮದ ತಮ್ಮ ಜವಾಬ್ದಾರಿಗಳ ಚಾರ್ಜು ಕೊಡುವುದಿಲ್ಲವೆಂದು ಹೇಳುತ್ತಿದ್ದಾರೆ. ಆದಕಾರಣ ಪೋಲೀಸ್ ಪಾರ್ಟಿ ಕರೆತಂದು ಅವರ ಮೂಲಕ ಆಶ್ರಮದ ಚಾರ್ಜನ್ನು ತೆಗೆದುಕೊಳ್ಳತಕ್ಕದ್ದು''

ಈ ರೀತಿ ನಿರ್ಣಯವನ್ನು ಅಂಗೀಕರಿಸಿದ ಮೇಲೆ ಪಾರ್ಶ್ವಕೀರ್ತಿಗಳನ್ನು ಪ್ರತ್ಯೇಕವಾಗಿ ಕರೆದು. ಮತ್ತೆ ನೀವು ಭಂಡಾಟ ಮಾಡಿದರೆ ಬನಾರಸೀಬಾಯಿಯಿಂದ ಬಹಿರಂಗವಾಗಿ ಸಾಕ್ಷ್ಯ ಹೇಳಿಸುತ್ತೇವೆದೂ, ಅಲ್ಲದೆ ನಿರ್ಣಯದ ಪ್ರಕಾರ ಪೋಲೀಸ ರನ್ನು ತಪ್ಪದೆ ಕರೆಸಿ ಆಶ್ರಮದ ಚಾರ್ಜನ್ನು ತೆಗೆದುಕೊಳ್ಳುತ್ತೇವೆಂದೂ ಮುಂಚಿತಾಗಿ ಉಗ್ರ ಎಚ್ಚರಿಕೆ ನೀಡಿದರು. ಇಷ್ಟಲ್ಲದೆ ಶೇಡಬಾಳದಲ್ಲಿ ಪಾರ್ಶ್ವಕೀರ್ತಿಗಳ ಹಿತ ಚಿಂತಕರಂತೆ ಇದ್ದ ಒಂದಿಬ್ಬರನ್ನು ಕರೆಸಿ ಪಾರ್ಶ್ವಕೀರ್ತಿಗಳಿಗೆ ಬುದ್ಧಿವಾದ ಹೇಳಿ ಆಶ್ರಮವನ್ನು ಬಿಟ್ಟು ಹೊರಡುವಂತೆ ಪ್ರೇರೇಪಿಸಬೇಕೆಂದೂ ಸಲಹೆ ನೀಡಿದರು. ಟ್ರಸ್ಟಿಗಳ ಪ್ರಯತ್ನ ನೆರವೇರುವಂತಾಯಿತು. ಟ್ರಸ್ಟಿಗಳ ದೃಢನಿರ್ಧಾರವನ್ನೂ ಆಶ್ರಮದಲ್ಲಿ ಕಿಕ್ಕಿರಿದಿರುವ ಊರ ಜನರನ್ನೂ, ಸಾಕ್ಷ್ಯ ನುಡಿಯಲು ಬಂದಿರುವ

ಬನಾರಸೀಬಾಯಿಯನ್ನೂ ಕಂಡು ಪಾರ್ಶ್ವಕೀರ್ತಿಗಳ ಜಂಘಾಬಲವೇ ಉಡುಗಿ ಹೋದಂತಾಯಿತು. ಪ್ರತಿರೋಧ ತೋರಲು ಅವಕಾಶವೇ ಇಲ್ಲದ ಪಾರ್ಶ್ವಕೀರ್ತಿಗಳ ಮನಸ್ಸು ಇನ್ನು ಇಲ್ಲಿ ಭಂಡತನ ಸಾಕೆಂದು ಅವರನ್ನು ಎಚ್ಚರಿಸಿತು.

ಮರುದಿವಸವೇ ಪಾರ್ಶ್ವಕೀರ್ತಿ ವರ್ಣಿಗಳು ತಮ್ಮ ಸುಪರ್ದಿನಲ್ಲಿದ್ದ ಆಶ್ರಮದ ವ್ಯವಹಾರಗಳ ಚಾರ್ಜನ್ನೆಲ್ಲಾ ಸಂಬಂಧಪಟ್ಟವರಿಗೆ ವಹಿಸಿಕೊಟ್ಟರು. ಸುಮಾರು ಏಳು ವರ್ಷಗಳ ಕಾಲ ಅವರು ಆಶ್ರಮದಲ್ಲಿ ನಡೆಸಿದ ದುರಾಚಾರಕ್ಕೆ ಅಂದು ತೆರೆ ಬಿದ್ದಿತು. ಪಾರ್ಶ್ವ ಕೀರ್ತಿಗಳು ಅಧಿಕಾರ ಬಿಟ್ಟುಕೊಟ್ಟ ಸಮಯ 1957ರ ಜೂನ್ ತಿಂಗಳು ಇರಬಹುದು. ಆಶ್ರಮದಿಂದ ಉಚ್ಚಾಟನೆಗೊಂಡಮೇಲೆ ಪಾರ್ಶ್ವಕೀರ್ತಿಗಳು ಬೆಳಗಾವಿಗೆ ಬಂದು ತಮ್ಮ ಆಪ್ತರೊಬ್ಬರ ಮನೆಯಲ್ಲಿ ತಂಗಿದ್ದು ಅನಂತರ ಶಿವಮೊಗ್ಗ ಜಿಲ್ಲೆಯ ಹೊಂಬುಜ ಕ್ಷೇತ್ರದ ಕಡೆಗೆ ಪ್ರಯಾಣ ಬೆಳೆಸಿದರು.

ತಮ್ಮನ್ನು ಆಶ್ರಮದಿಂದ ಹೊರದೂಡುವುದು ಖಚಿತವೆಂಬುದು ಪಾರ್ಶ್ವಕೀರ್ತಿಗಳಿಗೆ ಮೊದಲೇ ಮನವರಿಕೆಯಾಗಿತ್ತು. ಇದರಿಂದಾಗಿ ಅವರು ಟ್ರಸ್ಟಿಗಳ ಸಭೆ ಸೇರುವುದಕ್ಕೆ ಸಾಕಷ್ಟು ಮುಂಚಿತವಾಗಿಯೇ ಆಶ್ರಮದ ಕೆಲವು ಬೆಳ್ಳಿ ಪದಾರ್ಥಗಳೂ ಒಳಗೊಂಡಂತೆ ಬೆಲೆಬಾಳುವ ಪದಾರ್ಥಗಳು ಮತ್ತು ಉಪಕರಣಗಳನ್ನು ತಮ್ಮ ಕೆಲವು ಹಿತಚಿಂತಕರಿಗೂ ಮತ್ತು ದಳ್ಳಾಳಿಗಳ ಗುಂಪಿಗೂ ಗೋಪ್ಯವಾಗಿ ವಿತರಣೆ ಮಾಡಿದ್ದರು. ಆಶ್ರಮದ ಚಾರ್ಜು ತೆಗೆದುಕೊಳ್ಳುವ ಸಮಯದಲ್ಲಿ ಮತ್ತು ಅನಂತರ ಈ ಕಳ್ಳವಿದ್ಯಾಮಾನಗಳೆಲ್ಲಾ ಅಧಿಕಾರ ವರ್ಗದವರ ಗಮನಕ್ಕೆ ಬಂದುವು. ಅಧಿಕಾರವರ್ಗದವರು ಇದನ್ನು ದೊಡ್ಡದು ಮಾಡಲು ಹೋಗಲಿಲ್ಲ. ಪಾರ್ಶ್ವಕೀರ್ತಿಗಳನ್ನು ಮೊದಲು ಆಶ್ರಮದಿಂದ ಓಡಿಸುವುದು ಇವರೆಲ್ಲರ ಮುಖ್ಯ ಗುರಿಯಾದುದರಿಂದ ಆಶ್ರಮದಲ್ಲಿ ಕಣ್ಮರೆಯಾದ ಬೆಲೆಬಾಳುವ ಉಪಕರಣಗಳ ಬಗೆಗೆ ಇವರು ಉದಾಸೀನ ವಹಿಸಿದರು.

## ನೆಮ್ಮದಿ

ಆಶ್ರಮಕ್ಕೆ ಹಿಡಿದ ಗ್ರಹಣ ಬಿಟ್ಟುದರಿಂದ ಶೇಡಬಾಳದ ಜನರು ನೆಮ್ಮದಿಯ ನಿಟ್ಟುಸಿರು ಬಿಟ್ಟರು. ಪಾರ್ಶ್ವಕೀರ್ತಿಗಳು ಆಶ್ರಮದಲ್ಲಿದ್ದಾಗ ಅವರನ್ನು ವಿರೋಧಿಸಿದವರಿಗೆ ಅವರು ಕೊಟ್ಟ ಕಿರುಕುಳ ಮಾನಸಿಕ ಹಿಂಸೆ ತೊಂದರೆಗಳೇನೂ ಕಡಿಮೆಯಿರಲಿಲ್ಲ. ಬೇರೆಯವರ ಹೆಸರಿನಲ್ಲಿ ಅಸಹ್ಯವಾಗಿ ಪತ್ರ ಬರೆದು ಬೆದರಿಸುವುದು, ಕರಪತ್ರಗಳನ್ನು ಹಂಚಿ ತೇಜೋವಧೆ ಮಾಡುವುದು, ಕೆಲವು ಸಂದರ್ಭಗಳಲ್ಲಿ ತಮ್ಮ ವಿರುದ್ಧ ತಾವೇ ಗುಪ್ತವಾದ ಹೆಸರಿನಲ್ಲಿ ಕೆಟ್ಟರಾಗಿ ಬರೆದುಕೊಂಡು ಅದರ ಹೊರೆಯನ್ನು ವಿರೋಧಿಗಳ ಮೇಲೆ ಹಾಕಿ ಹುಯಿಲೆಬ್ಬಿಸುವುದು ಈ ಕುತಂತ್ರಗಳನ್ನೆಲ್ಲಾ ಅನುಸರಿಸಿ ಬೇರೆಯವರ ಮಾನ ಪ್ರಾಣಗಳ ಮೇಲೆ ಪಾರ್ಶ್ವಕೀರ್ತಿಗಳು ಚೆಲ್ಲಾಟವಾಡಿ

ದ್ದರು. ಪಾರ್ಶ್ವಕೀರ್ತಿಗಳು ಆಶ್ರಮಬಿಟ್ಟು ಹೋದುದರಿಂದ ಇಂತಹ ಎಲ್ಲಾ ಅಸಹ್ಯ ತಂತ್ರಗಳಿಂದ ಶೇಡಬಾಳ ಬಿಡುಗಡೆಯಾಯಿತೆಂದು ಅವರ ವಿರೋಧಿಗಳು ಹರ್ಷ ತಾಳಿದರು.

ಪಾರ್ಶ್ವಕೀರ್ತಿಗಳನ್ನನುಸರಿಸಿ ಆಶ್ರಮದ ಸಹಾಯಕ ಮಂತ್ರಿ ಅಣ್ಣಾಸಾಹೇಬ್ ಲಗಾರೆಯನ್ನೂ ಆ ಹುದ್ದೆಯಿಂದ ಟ್ರಸ್ಟಿಗಳು ವಜಾಮಾಡಿದರು. ಅದರೊಂದಿಗೆ ಆಶ್ರಮದಲ್ಲಿ ಬೇರೂರಿಂದ ಪಾರ್ಶ್ವಕೀರ್ತಿಗಳ ಇನ್ನೊಬ್ಬ ಭಂಟನಾಗಿದ್ದ ಅಂಗವಿಕಲ ಮನುಷ್ಯನನ್ನೂ ಆಶ್ರಮದ ಪರಿಸರದಿಂದ ಓಡಿಸಿದರು. ಹೀಗೆ ಪಾರ್ಶ್ವಕೀರ್ತಿಗಳು ಆಶ್ರಮದಲ್ಲಿ ಕಟ್ಟಿಕೊಂಡಿದ್ದ ಗುಂಪೆಲ್ಲವನ್ನು ಟ್ರಸ್ಟಿಗಳು ಕರಗಿಸಿ ಆಶ್ರಮದ ಹೊಲಸನ್ನು ಗುಡಿಸಿಹಾಕಿದರು.

ಮುಂದೆ ಟ್ರಸ್ಟಿಗಳು ಜನಗೌಡ ದಾದಾಪಾಟೀಲ್[1] ಎಂಬುವರನ್ನು ಆಶ್ರಮದ ಅಧಿಷ್ಠಾತರನ್ನಾಗಿ ನೇಮಿಸಿದರು. ಶೇಡಬಾಳದ ಸಭ್ಯವ್ಯಕ್ತಿಗಳಲ್ಲೊಬ್ಬರಾದ ಆದಗೌಡ ಸಾತಗೌಡ ಪಾಟೀಲ್[2] ಎಂಬುವರನ್ನು ಆಶ್ರಮದ ಸಹಾಯಕ ಮಂತ್ರಿಗಳನ್ನಾಗಿ ನೇಮಿಸಿದರು. ಜಂಬುಕುಮಾರ್ ಪಾರ್ಶ್ವನಾಥ ಶಿರಟೆ[3]ಯವರನ್ನು ಶಾಲೆಯ ಮುಖ್ಯೋಪಾಧ್ಯಾಯರನ್ನಾಗಿ ನೇಮಿಸಿದರು. ಟ್ರಸ್ಟಿಗಳ ಈ ಕಾರ್ಯಗಳಿಂದಾಗಿ ಶೇಡಬಾಳದ ಜನರು ಮತ್ತಷ್ಟು ಹರ್ಷಚಿತ್ತರಾದರು. ಚಾಮು ಸಾಹುಕಾರರು ತಮ್ಮ ತಂಗಿ ಬಹಿಣಾಬಾಯಿಯ ಪರವಾಗಿ ಕಟ್ಟಿಸುತ್ತಿದ್ದ ಮಾನಸ್ತಂಭದ ಕೆಲಸ ಈ ಸಮಯದಲ್ಲಿ ನಿರ್ವಿಘ್ನವಾಗಿ ನಡೆಯತೊಡಗಿತು.

---

1. ಈಗ ಇವರು ಮಹಾರಾಷ್ಟ್ರದ ನಾಂದನಿ ಮಠದಲ್ಲಿ ಶ್ರೀಜಿನಸೇನ ಭಟ್ಟಾರಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

2. ಈಗ ಇವರು ಶೇಡಬಾಳದ ಜೈನಸಮಾಜದ ಮುಖಂಡರಾಗಿದ್ದಾರೆ.

3. ಈಗ ಇವರು ಸಾಂಗ್ಲಿಯಲ್ಲಿ ನಿವೃತ್ತ ಜೀವನವನ್ನು ನಡೆಸುತ್ತಿದ್ದಾರೆ.

ಅಧ್ಯಾಯ : ಒಂಬತ್ತು

# ಹೊಂಬುಜ ಕ್ಷೇತ್ರದಲ್ಲಿ ಪಾರ್ಶ್ವಕೀರ್ತಿಗಳು

ಶಿವಮೊಗ್ಗ ಜಿಲ್ಲೆಯ ಹೊಂಬುಜ (ಹುಂಚ) ಕ್ಷೇತ್ರವು ಸು. ಎಂಟನೆಯ ಶತಮಾನದಲ್ಲಿ ರಾಜಾ ಜಿನದತ್ತರಾಯನಿಂದ ಸ್ಥಾಪಿತವಾಯಿತೆಂದು ಇತಿಹಾಸಜ್ಞರ ಅಭಿಪ್ರಾಯ. ಪಾರ್ಶ್ವನಾಥ ತೀರ್ಥಂಕರರ ಯಕ್ಷಿಯಾದ ಪದ್ಮಾವತೀದೇವಿ ನೆಲೆಸಿರುವ ಪುಣ್ಯ ಕ್ಷೇತ್ರವಾಗಿ ಹುಂಚವು ಕರ್ನಾಟಕದಲ್ಲಿ ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಇಲ್ಲಿನ ಗುರುಪೀಠದ ಭಟ್ಟಾರಕ ಸ್ವಾಮಿಗಳನ್ನು 'ಶ್ರೀ ದೇವೇಂದ್ರ ಕೀರ್ತಿ'ಗಳೆಂಬ ಹೆಸರಿನಿಂದ ಕರೆಯುತ್ತಾರೆ. ಪ್ರತಿ ವರ್ಷ ಮಾರ್ಚಿ ತಿಂಗಳಿನಲ್ಲಿ ನಡೆಯುವ ರಥೋತ್ಸವ, ಶ್ರಾವಣ ಶುಕ್ರವಾರಗಳೆಂದು ನಡೆಯುವ ಪೂಜಾ ಕಾರ್ಯಗಳು—ಇವುಗಳಿಗೆ ಅತ್ಯಧಿಕ ಸಂಖ್ಯೆಯಲ್ಲಿ ಭಕ್ತರು ಆಗಮಿಸುತ್ತಾರೆ. ಬೆಳಗಾವಿ ಜಿಲ್ಲೆ ಮತ್ತು ಕೊಲ್ಲಾಪುರದ ಕಡೆಯಿಂದ ಬರುವ ಭಕ್ತರ ಸಂಖ್ಯೆಯಂತೂ ಯಾವಾಗಲೂ ಅಧಿಕ.

**ಆಗಮನ**

ಪಾರ್ಶ್ವಕೀರ್ತಿಗಳು ಶೇಡಬಾಳದ ಅನಾಥಾಶ್ರಮದಿಂದ ಉಚ್ಚಾಟನೆಗೊಂಡ ಮೇಲೆ ಅವರು ಬೆಳಗಾಂ ನಗರದಲ್ಲಿ ಕೆಲವು ದಿನಗಳ ಕಾಲ ತಂಗಿದ್ದು ನಂತರ ಪ್ರಯಾಣ ಬೆಳೆಸಿ ಹೊಂಬುಜಕ್ಕೆ ಪಾದಾರ್ಪಣೆ ಮಾಡಿದರು. ಇವರು ಹೊಂಬುಜಕ್ಕೆ ಎರಡನೇ ಬಾರಿ ಹೆಜ್ಜೆಯಿಟ್ಟ ಈ ಸಮಯದಲ್ಲಿ ಪದ್ಮನಾಭ ಕವಿ ಸಾಂಗತ್ಯದಲ್ಲಿ ಬರೆದಿರುವ 'ಪದ್ಮಾವತಿ ಮಹಾತ್ಮ್ಯ' ಎಂಬ ಕನ್ನಡ ಗ್ರಂಥದ ಕಡೆಯ ಭಾಗವನ್ನು ಇಲ್ಲಿ ನೆನಪು ಮಾಡಿಕೊಳ್ಳುವುದು ಉಚಿತ.

ಗ್ರಂಥಾಂತ್ಯದಲ್ಲಿ ಕವಿ ಪದ್ಮಾವತಿದೇವಿಯು ಜಿನದತ್ತರಾಯನ ಅಂತರಂಗವನ್ನು ಪರೀಕ್ಷಿಸಿದ್ದನ್ನು ವರ್ಣಿಸಿದ್ದಾನೆ. ದೇವಿಯು ಕ್ಷೇತ್ರದ ಕೊಳದಲ್ಲಿ ಎರಡು ಮುತ್ತುಗಳನ್ನು ಸೃಷ್ಟಿಸುತ್ತಾಳೆ. ಅದರಲ್ಲಿ ಒಂದು ಮುತ್ತು ದೋಷಪೂರ್ಣವಾಗಿರುತ್ತದೆ. ರಾಜನು ಶ್ರೇಷ್ಠವಾದ ಮುತ್ತಿನಿಂದ ತನ್ನ ಹೆಂಡತಿಗೆ ಮೂಗುತಿ ಮಾಡಿಸಿಕೊಡುತ್ತಾನೆ. ಪದ್ಮಾವತಿದೇವಿಗೆ ದೋಷಪೂರ್ಣ ಮುತ್ತಿನಿಂದ ಮೂಗುತಿ ಮಾಡಿ ಅರ್ಪಿಸುತ್ತಾನೆ. ದೇವಿಗೆ ಮೂಗುತಿಯನ್ನರ್ಪಿಸಿದ ಮಾರನೇ ದಿನ ರಾಜನು ದೇವಿಯ ದರ್ಶನಕ್ಕೆ ಹೋದಾಗ ಮೂರ್ತಿಯ ಮೂಗಿನಲ್ಲಿ ಶ್ರೇಷ್ಠವಾದ ಮುತ್ತಿನ ಮೂಗುತಿಯೇ ಇರುತ್ತದೆ. ರಾಜನಿಗೆ ಆಶ್ಚರ್ಯವಾಗಿ ಈ ಬಗ್ಗೆ ರಾಣಿಯನ್ನು ವಿಚಾರಿಸಿದಾಗ ತಾನು ಮೂಗುತಿಯನ್ನು ಬದಲಾಯಿಸಿಲ್ಲವೆಂದು ತಿಳಿಸುತ್ತಾಳೆ. ಆಗ ಜಿನದತ್ತರಾಯ ತಾನು

ಸ್ತ್ರೀ ವ್ಯಾಮೋಹದಿಂದ ಪಕ್ಷಪಾತ ಮಾಡಿ ದೇವಿಯನ್ನು ಕಡೆಗಣಿಸಿದೆನಲ್ಲಾ ಎಂದು ಪಶ್ಚಾತ್ತಾಪ ಪಡುತ್ತಾನೆ.

ಅದೇ ದಿನ ಪದ್ಮಾವತಿದೇವಿ ರಾಜನ ಕನಸಿನಲ್ಲಿ ಕಾಣಿಸಿಕೊಂಡು "ಸ್ತ್ರೀ ವ್ಯಾಮೋಹದಿಂದ ಸಾಕಾರ ಮಹಾರಾಜನು ನ್ಯಾಯವನ್ನೂ ಜಾತಿಯನ್ನೂ ಧರ್ಮವನ್ನೂ ಆಹಾರ ನಿಯಮಾದಿಗಳನ್ನೂ ತೊರೆದು ಕೊನೆಗೆ ಮಗನನ್ನೇ ಕೊಂದು ತಿನ್ನಲು ಬಯಸಿದನು. ಸ್ತ್ರೀ ವ್ಯಾಮೋಹವು ಯಾರನ್ನೂ ಬಿಟ್ಟಿಲ್ಲ. ಇನ್ನು ನಿನ್ನ ಪಟ್ಟಣವು ನನಗೆ ಸಾಕಾಗಿದೆ. ಹುಂಡಾವಸರ್ಪಿಣಿ ಮಹಿಮೆಯನ್ನು ಚೆನ್ನಾಗಿ ಕಂಡುದಾಯಿತು. ಇಂದು ನನ್ನ ಮೂರ್ತಿಯ ಪರುಶಶಕ್ತಿಯನ್ನು ಪಾತಾಳಕ್ಕಿಳಿಸುವೆನು ಎಂದು ಹೇಳಿದಳು. ಜಿನದತ್ತರಾಯನು ತಕ್ಷಣ ಎಚ್ಚರಗೊಂಡು ದೇವಿಯ ದರ್ಶನಮಾಡಿ ತನ್ನ ಅಪರಾಧವನ್ನು ಮನ್ನಿಸುವಂತೆ ಪ್ರಾರ್ಥಿಸುತ್ತಾನೆ. ಆಗ ದೇವಿಯು "ಕಾಲವು ಸಮೀಪಿಸಿತು. ಇನ್ನಿರಲಾರೆ. ಲಕ್ಕಿಯ ಮರವಿರುವವರೆಗೂ ಭಕ್ತರನ್ನು ಕಾಪಾಡುವೆನು" ಎಂದು ಅಭಯವೀಯುತ್ತಾಳೆ. ಮುಂದೆ ಜಿನದತ್ತರಾಯ ವೈರಾಗ್ಯ ಹೊಂದಿ ದೀಕ್ಷೆ ಪಡೆದು ತಪಸ್ವಿಯಾಗುತ್ತಾನೆ.

ಧರ್ಮವನ್ನೂ ದೈವವನ್ನೂ ಉಪೇಕ್ಷೆ ಮಾಡಿ ಸ್ತ್ರೀ ವ್ಯಾಮೋಹಕ್ಕೊಳಗಾದರೆ ಪುನಃ ಗಳಿಸಲಾಗದ ಎಂತಹ ದೊಡ್ಡ ನಷ್ಟವುಂಟಾಗುತ್ತದೆ ಎಂಬುದನ್ನು ಮೇಲಿನ ಕಥೆಯ ಪ್ರಸಂಗ ಮನದಟ್ಟು ಮಾಡಿಕೊಡುತ್ತದೆ. ಭಕ್ತ ಜನರಿಗೆ ಇಂತಹ ಉದಾತ್ತ ತತ್ವವೊಂದರ ಮೂಲಕ ಎಚ್ಚರಿಕೆ ನೀಡುವ ಪವಿತ್ರ ಕ್ಷೇತ್ರಕ್ಕೆ ಕಾವಿತೊಟ್ಟು ಪಿಂಛ ಕಮಂಡಲ ಹಿಡಿದ ಪರಮ ಸ್ತ್ರೀ ಲಂಪಟರೂ, ಧರ್ಮದ ಹಣವನ್ನು ಯಾವ ಅಳುಕೂ ಇಲ್ಲದೆ ಲೂಟಿ ಹೊಡೆಯುವವರೂ, ಮಾನ ಮರ್ಯಾದೆಗಳಿಗೆ ಸಂಪೂರ್ಣವಾಗಿ ತಿಲಾಂಜಲಿಯಿತ್ತು ಭಂಡತನದಲ್ಲಿಯೇ ಸರ್ವಸ್ವವನ್ನು ಕಾಣುವವರೂ ಆದ ಪಾರ್ಶ್ವಕೀರ್ತಿ ವರ್ಣಿಗಳು ಬಸ್ಸಿನಿಂದ ಇಳಿದು ದಯಮಾಡಿಸಿದರು. ಇವರ ಕೇಡಬಾಳದ ದುಸ್ಸಾಹಸಗಳ ವಿಚಾರವಾಗಿ ಏನೊಂದೂ ತಿಳಿಯದ ಹೊಂಬುಜ ಮಠದ ಸ್ವಾಮಿ (ಅರ್ಹದ್ದಾಸರು)ಗಳು ಇವರನ್ನು ಬರಮಾಡಿಕೊಂಡರು.

ಪಾರ್ಶ್ವಕೀರ್ತಿಗಳು ಹುಂಚಕ್ಕೆ ಬಂದಾಗ ಒಂದು ಲಂಗೋಟಿಯನ್ನು ಮಾತ್ರ ಧರಿಸಿ 'ಐಲಕ' ವೇಷದಲ್ಲಿದ್ದರು. ಎಲ್ಲರೂ ಇವರನ್ನು ಐಲಕ ಸ್ವಾಮಿಗಳೆಂದೇ ತಿಳಿದುಕೊಂಡರು. ಆದರೆ ಕೆಲವು ದಿನಗಳು ಕಳೆಯುತ್ತಿದ್ದಂತೆಯೇ ಇವರು ಲಂಗೋಟಿಯ ಜೊತೆಗೆ ಮೇಲೊಂದು ಕಾವಿವಸ್ತ್ರವನ್ನು ಹೊದೆಯಲು ಪ್ರಾರಂಭಿಸಿದರು. ಈ ಪರಿವರ್ತನೆ ಹೊಂಬುಜದ ಕೆಲವು ಜನರಿಗೆ ಬಹಳ ವಿಚಿತ್ರವಾಗಿ ಕಂಡಿತು. ಒಂದು ಬಟ್ಟೆಯ ಐಲಕ ವೇಷದಿಂದ ಎರಡು ಬಟ್ಟೆಯ ಕ್ಷುಲ್ಲಕ ವೇಷಕ್ಕೆ ಹಿಂಬಡ್ತಿ ಪಡೆದ ಇವರ ಬಗ್ಗೆ ಜೈನಶಾಸ್ತ್ರ ತಿಳಿದವರು ಅನುಮಾನಪಟ್ಟರು. ಹೊಂಬುಜದ ಪೀಠಾಧಿಕಾರಿಗಳು ಈ ಬಗ್ಗೆ ಮೌನ ವಹಿಸಿದರು.

## ಅಧಿಕಾರ ಪತ್ರ

ಪಾರ್ಶ್ವಕೀರ್ತಿಗಳು ಹೊಂಬುಜಕ್ಕೆ ಬಂದಾಗ ಅವರಿಗೆ ಮೂವತ್ತೆರಡು ವರ್ಷಗಳು. ಶೇಡಬಾಳದಲ್ಲಿ ನಡೆದ ಘಟನೆಗಳ ನಿಜ ಸ್ವರೂಪವನ್ನು ಪಾರ್ಶ್ವಕೀರ್ತಿಗಳು ಬಚ್ಚಿಟ್ಟರು. ಬದಲಾಗಿ ಅವುಗಳಿಗೆ ತಮ್ಮದೇ ಆದ ಬಣ್ಣವನ್ನು ಕೊಟ್ಟು ಸುಳ್ಳಿನ ಸರಪಳಿಯನ್ನು ಹೆಣೆದು ದೇವೇಂದ್ರ ಕೀರ್ತಿಸ್ವಾಮಿಗಳ ಸಹಾನುಭೂತಿಯನ್ನು ಸಂಪಾದಿಸಿಕೊಂಡರು. ಅವರ ಮೇಲೆ ತಮ್ಮ ಪ್ರಭಾವವನ್ನು ಚೆನ್ನಾಗಿ ಮೂಡಿಸಿದ ಮೇಲೆ ಪಾರ್ಶ್ವಕೀರ್ತಿಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕ್ಷೇತ್ರದ ದಿನನಿತ್ಯದ ಆಡಳಿತದ ವ್ಯವಹಾರಗಳನ್ನು ತಾವು ವಹಿಸಿಕೊಳ್ಳುವಂತಾದರು. ದೇವೇಂದ್ರ ಕೀರ್ತಿಗಳು ಪಾರ್ಶ್ವಕೀರ್ತಿಗಳಿಗೆ ಹುಂಚ ಕ್ಷೇತ್ರದ ದಿನನಿತ್ಯದ ಆಡಳಿತವನ್ನು ನೋಡಿಕೊಳ್ಳಲು ಅಧಿಕಾರ ನೀಡುವ ಹಕ್ಕು ಪತ್ರ (ಜನರಲ್ ಪವರ್ ಆಫ್ ಅಟಾರ್ನಿ)ವೊಂದನ್ನು ಬರೆದು ಕೊಟ್ಟರು. ಈ ಪತ್ರ ಹೊಸನಗರ ತಾಲ್ಲೂಕಿನ ಸಬ್ ರಿಜಿಸ್ಟ್ರಾರ್ ಕಛೇರಿಯಲ್ಲಿ ರಿಜಿಸ್ಟರ್ ಸಹಾ ಆಯಿತು. ಹೀಗೆ ಪಾರ್ಶ್ವಕೀರ್ತಿಗಳು ಹೊಂಬುಜದ ಸ್ವಾಮಿಗಳಿಗೂ ಮಂಕುಬೂದಿ ಹಾಕಿ ಸುಲಭವಾಗಿ ಕ್ಷೇತ್ರದ ಆಡಳಿತವನ್ನು ತಮ್ಮ ಕೈಗೆ ತೆಗೆದುಕೊಂಡರು.

ಹೊಂಬುಜದಲ್ಲಿ ತಮ್ಮ ಸ್ಥಾನ ಭದ್ರವಾದ ಮೇಲೆ ಪಾರ್ಶ್ವಕೀರ್ತಿಗಳು ಶೇಡಬಾಳದಲ್ಲಿ ತಮ್ಮ ದುಷ್ಕೃತ್ಯಗಳಿಗೆಲ್ಲಾ ಬೆಂಬಲಿಗರಾಗಿ ನಿಂತ ಇಬ್ಬರು ದಳ್ಳಾಳಿ ಶಿಷ್ಯರನ್ನು ಹೊಂಬುಜಕ್ಕೂ ಸಹ ಕರೆಸಿಕೊಂಡರು. ಇವರಿಬ್ಬರನ್ನು ಕ್ಷೇತ್ರದ ಪ್ರಮುಖ ಅಧಿಕಾರ ಸ್ಥಾನಗಳಲ್ಲಿ ನೇಮಿಸಿಕೊಂಡರು. ಇವರಲ್ಲಿ ಒಬ್ಬ ಅಂಗವಿಕಲ ಮನುಷ್ಯ. ಇನ್ನೊಬ್ಬನ ಹೆಸರನ್ನು ಇಲ್ಲಿ ಬದಲಾಯಿಸಿ ನರಿಗೌಡ ಎಂದಿಟ್ಟುಕೊಳ್ಳಬಹುದು. ನರಿಗೌಡ ಹೊಂಬುಜದಲ್ಲಿಯೇ ಉಳಿದುಕೊಂಡನು. ಅಂಗವಿಕಲ ಮನುಷ್ಯ ಶಿವಮೊಗ್ಗದಲ್ಲಿದ್ದುಕೊಂಡು ಪಾರ್ಶ್ವಕೀರ್ತಿಗಳಿಗೆ ನೆರವಾಗುತ್ತಿದ್ದನು. ನರಿಗೌಡ ಪಾರ್ಶ್ವಕೀರ್ತಿಗಳ ಹಣಕಾಸಿನ ಖಜಾನೆಯಾದರೆ ಅಂಗವಿಕಲ ಮನುಷ್ಯ ಬರವಣಿಗೆ ಮತ್ತಿತರ ವ್ಯವಹಾರಗಳ ಕಛೇರಿಯಾದನು. ಒಂದೆರಡು ವರ್ಷಗಳ ಕಾಲ ಈ ತ್ರಿಮೂರ್ತಿಗಳ ದುಷ್ಕೃತ್ಯಗಳ ಸುಳಿವು ಅಷ್ಟಾಗಿ ಯಾರ ಗಮನಕ್ಕೂ ಬರಲಿಲ್ಲ.

## ಜಗನ್ನಾಥ ಶಾಸ್ತ್ರಿಗಳಲ್ಲಿ ವಿದ್ಯಾಭ್ಯಾಸ

ಒರಿಸ್ಸಾ ರಾಜ್ಯದ ಜಗನ್ನಾಥಪುರಿಯ ಶ್ರೀ ಜಗನಾಥಶಾಸ್ತ್ರಿಗಳು ಜೈನಸಿದ್ಧಾಂತದಲ್ಲಿ ಅದ್ವಿತೀಯ ವಿದ್ವಾಂಸರಾಗಿದ್ದರು. ಇವರು ದೇವೇಂದ್ರಕೀರ್ತಿಗಳ ಇಷ್ಟದಂತೆ ಹೊಂಬುಜಕ್ಷೇತ್ರದಲ್ಲಿ ನೆಲಸಿ ಆಶ್ರಮದ ವಿದ್ಯಾರ್ಥಿಗಳಿಗೆ ಧಾರ್ಮಿಕ ಶಿಕ್ಷಣ ನೀಡುತ್ತಿದ್ದರು. ಇವರ ಬಳಿ ಪಾರ್ಶ್ವಕೀರ್ತಿಗಳಿಗೂ ಶಿಕ್ಷಣದ ವ್ಯವಸ್ಥೆಯಾಯಿತು.

ಪಾರ್ಶ್ವಕೀರ್ತಿಗಳು ಆತ್ಮೋದ್ಧಾರದ ಉದ್ದೇಶದಿಂದ ಧಾರ್ಮಿಕ ಶಿಕ್ಷಣವನ್ನು ಪಡೆಯುವುದರ ಬದಲಾಗಿ ಅದನ್ನು ಪರವಂಚನೆಯ ಸಾಧನವನ್ನಾಗಿಸಿಕೊಳ್ಳುವ ಉದ್ದೇಶದಿಂದ ಅವರ ಹತ್ತಿರ ಕಲಿಯತೊಡಗಿದರು. ಕಲಿಯುವವರಲ್ಲಿರಬೇಕಾದ ವಿನಯಗುಣ, ಸೌಜನ್ಯ, ಶಿಸ್ತಿನ ನಡವಳಿಕೆಗಳು ಪಾರ್ಶ್ವಕೀರ್ತಿಗಳಲ್ಲಿ ಕಂಡುಬರಲಿಲ್ಲ. ಜಗನ್ನಾಥಶಾಸ್ತ್ರಿಗಳು ಈ ವರ್ತನೆಯನ್ನು ಕಂಡು ಅಸಮಾಧಾನ ಪಟ್ಟರು. ದೇವೇಂದ್ರ ಕೀರ್ತಿಗಳೂ ಸಹ ಸಾಧ್ಯವಾದಷ್ಟು ಶಿಕ್ಷಣವನ್ನು ಪಾರ್ಶ್ವಕೀರ್ತಿಗಳಿಗೆ ನೀಡಿದರು. ದೇವೇಂದ್ರಕೀರ್ತಿಗಳು ಪಾಠ ಹೇಳುವಾಗ ಉಪನ್ಯಾಸದ ನಡುವೆ ಉಪಕಥೆಗಳನ್ನು ಸೇರಿಸಿಹೇಳುತ್ತಿದ್ದರು. ಇದು ಪಾರ್ಶ್ವಕೀರ್ತಿಗಳ ಗಮನವನ್ನು ವಿಶೇಷವಾಗಿ ಸೆಳೆಯಿತು.

## ಶಿರಟಿಯವರಿಗೆ ಬರೆದ ಅಸಭ್ಯ ಪತ್ರ

ಪಾರ್ಶ್ವಕೀರ್ತಿಗಳು ಹೊಂಬುಜ ಕ್ಷೇತ್ರದ ವ್ಯವಹಾರಗಳನ್ನು ನೋಡಿಕೊಳ್ಳ ತೊಡಗಿದ ಮೇಲೆ ಹಣದ ವಿಚಾರದಲ್ಲಿ ಅವರೆಷ್ಟು ಅಪ್ರಾಮಾಣಿಕವಾಗಿ ನಡೆದುಕೊಂಡಿರಬಹುದೆಂಬುದನ್ನು ಅವರ ಶೇಡಬಾಳದ ಅವ್ಯವಹಾರಗಳ ಪರಿಚಯದಿಂದ ಊಹಿಸಬಹುದು. ಪಾರ್ಶ್ವಕೀರ್ತಿಗಳ ಕೈನಲ್ಲಿ ಹಣ ಹೇರಳವಾಗಿ ಓಡಾಡಲಾರಂಭಿಸಿತು. ಕ್ಷೇತ್ರದ ಪ್ರಭಾವಶಾಲಿ ವ್ಯಕ್ತಿಗಳಿಗೆ ಅದೂ ಇದು ವಸ್ತುಗಳನ್ನು ಕಾಣಿಕೆಯಾಗಿ ನೀಡಿ ಅವರನ್ನು ತಮ್ಮ ಅಂಕೆಯಲ್ಲಿಟ್ಟುಕೊಂಡರು. ಆಗಾಗ್ಗೆ ಹೊಂಬುಜ ಬಿಟ್ಟು ದೇಶಾದ್ಯಂತ ಸಂಚಾರ ಮಾಡುವುದು ಹೆಚ್ಚಾಯಿತು. ಕಾಲ ಕಳೆದಂತೆ ಪಾರ್ಶ್ವಕೀರ್ತಿಗಳೇ ಹೊಂಬುಜ ಗುರುಪೀಠದ ಮುಂದಿನ ಉತ್ತರಾಧಿಕಾರಿಗಳು ಎಂಬ ಸುದ್ದಿಯೂ ಹರಡತೊಡಗಿತು. ಪಾರ್ಶ್ವಕೀರ್ತಿಗಳ ಸಂಚಿನ ಜಾಲದಲ್ಲಿ ಸಿಲುಕಿದ ದೇವೇಂದ್ರಕೀರ್ತಿಗಳೂ ಸಹ ಇದನ್ನು ಸಮರ್ಥಿಸಿದರು.

ತಾವು ಹೊಂಬುಜಕ್ಕೆ ಕಾಲಿಟ್ಟನಂತರ ಯಾವ ತೊಡಕೂ ಇಲ್ಲದೆ ಕ್ಷೇತ್ರ ತಮ್ಮ ನಿಯಂತ್ರಣಕ್ಕೊಳಪಟ್ಟಿದ್ದು, ನಂತರ ಅದು ಭವಿಷ್ಯದಲ್ಲಿ ಸಂಪೂರ್ಣವಾಗಿ ತಮ್ಮ ಅಂಗೈಗೇ ಬರಲಿರುವುದನ್ನು ನೆನೆದು ಪಾರ್ಶ್ವಕೀರ್ತಿಗಳು ಸಂತೋಷಭರಿತರಾದರು. ತಮ್ಮ ಕುತಂತ್ರಗಳು ಫಲಿಸುತ್ತಿರುವುದನ್ನು ಯೋಚಿಸುತ್ತಾ ಹೋದಂತೆ ಅವರು ಮೈಮರೆಯುವಂತಾಯಿತು. ಈಮನಸ್ಥಿತಿಯಲ್ಲಿ ಅವರು ಶೇಡಬಾಳದಲ್ಲಿ ತಮ್ಮನ್ನು ವಿರೋಧಿಸಿದವರ ಮೇಲೆ ಸೇಡು ತೀರಿಸಿಕೊಳ್ಳಲು ಆಲೋಚಿಸಿದರು. ಇದರ ಅಂಗವಾಗಿ ಶಿರಟಿಯವರಿಗೆ ಒಂದು ಪತ್ರ ಬರೆದು ಮುಂದೆ ನಾನು ಹೊಂಬುಜಕ್ಷೇತ್ರದ ಮಠಾಧಿಪತಿಯಾಗಲಿದ್ದೇನೆ ಇದಕ್ಕೆ ನೀವು ಏನು ಹೇಳುತ್ತೀರಿ ಎಂದು ಅವರ ಅಭಿಪ್ರಾಯವನ್ನು ಕೇಳಿದರು. ಇದಕ್ಕೆ ಪ್ರತ್ಯುತ್ತರವಾಗಿ ಶಿರಟಿಯವರು "ಹಿಂದೆ ಮಹಾಘನಂದಿ ಮುನಿಗಳು ದೀಕ್ಷಿತರಾಗಿದ್ದರೂ ಸ್ತ್ರೀ ವ್ಯಾಮೋಹಕ್ಕೆ ಸಿಲುಕಿ ಎಲ್ಲರ

ಸಮ್ಮುಖದಲ್ಲಿಯೇ ಸಂಸಾರಸ್ಥರಾಗಿ ಅನಂತರ ಪಶ್ಚಾತ್ತಾಪ ಪಟ್ಟು ಪುನಃ ದೀಕ್ಷೆಯನ್ನು ಪಡೆದು ಚಾರಿತ್ರ ಸಂಪನ್ನರಾಗಿ ಆತ್ಮಹಿತವನ್ನು ಸಾಧಿಸಿದರು. ಅದರಂತೆ ನೀವೂ ಸಹ ಹಿಂದೆ ಮಾಡಿರುವ ಅನೀತಿಯ ಕೆಲಸಗಳಿಗೆ ಪಶ್ಚಾತ್ತಾಪ ಪಟ್ಟು ಇನ್ನು ಮುಂದಾದರೂ ಉತ್ತಮ ಮಾರ್ಗದಲ್ಲಿ ವಿಹಿತವಾಗಿ ನಡೆದುಕೊಳ್ಳುವ ಪಕ್ಷದಲ್ಲಿ ಮಠಾಧಿಪತಿಗಳಾಗ ಬಹುದು. ಇದಕ್ಕೆ ನನ್ನ ಅಭ್ಯಂತರವೇನೂ ಇಲ್ಲ.'' ಎಂದು ಮುಂತಾಗಿ ಬರೆದರು.

ಶಿರಟೆಯವರ ಪತ್ರವನ್ನು ನೋಡಿ ಪಾರ್ಶ್ವಕೀರ್ತಿಗಳ ಕ್ಷುಲ್ಲಕ ಮನಸ್ಸು ಸೇಡಿನ ಉತ್ಕರ್ಷದಿಂದ ಹೆಡೆಯಾಡಿಸಿತು. ತಕ್ಷಣವೇ ಶಿರಟೆಯವರನ್ನು ಕುಟುಕಲು ಮುಂದಾ ಯಿತು. ಶಿರಟೆಯವರ ಪತ್ರಕ್ಕೆ ಪ್ರತಿಕ್ರಿಯೆಯಾಗಿ ಪಾರ್ಶ್ವಕೀರ್ತಿಗಳು ಅವರಿಗೆ ಮಾನಸಿಕ ಹಿಂಸೆಯನ್ನುಂಟುಮಾಡುವ ಉದ್ದೇಶದಿಂದ ಅತ್ಯಂತ ಅಸಭ್ಯವೂ, ಅಶ್ಲೀಲವೂ ಹೇಯವೂ ಆದಂತಹ ಪತ್ರವೊಂದನ್ನು ಬರೆದು ಹಾಕಿದರು. ಈ ಪತ್ರದ ವಿಷಯ ವನ್ನು ತಿಳಿದ ಸಭ್ಯರಾರೇ ಆಗಲಿ ಅವರು ಇಂತಹ ಪತ್ರವನ್ನು ಬರೆದ ಕಠೋರ ಹೃದಯದ ಪಾರ್ಶ್ವಕೀರ್ತಿಗಳನ್ನು ಯಾವ ಕಾಲಕ್ಕೂ ಕ್ಷಮಿಸಲು ಸಿದ್ಧರಾಗುವುದಿಲ್ಲ.[1]

ಮನೋವೇದಕವಾದ ಈ ಅಸಭ್ಯ ಪತ್ರ ಶೇಡಬಾಳದ ಅನಾಥಾಶ್ರಮದ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಶಿರಟೆಯವರಿಗೆ ಬಂದಮೇಲೆ ಅವರು ಮೃತ್ಯುಂಜಯನಂತೆ ಅದರ ಹಾಲಾಹಲವನ್ನು ಸಹಿಸಿಕೊಂಡರು. ಅವರಂತಹ ಸಾತ್ವಿಕ ಪ್ರವೃತ್ತಿಯ ಶಾಂತಮೂರ್ತಿಯ ಬದಲಾಗಿ ರಾಜಸಪ್ರವೃತ್ತಿಯ ಬೇರಾರೇ ಆಗಿದ್ದರೆ ಆಗಿನ ಕಥೆಯೇ ಬೇರೆ ರೀತಿ ಇರುತ್ತಿತ್ತು.

ಶಿರಟೆಯವರು ಆ ಪತ್ರವನ್ನು ತಮಗೆ ಆಪ್ತರಾದ ಅಶೋಕದಾದಾ ಪಾಟೀಲರಿಗೆ ತೋರಿಸಿ ಸಲಹೆ ಕೇಳಿದರು. ''ಪಾರ್ಶ್ವಕೀರ್ತಿಗಳು ಈ ಮಟ್ಟಕ್ಕೆ ಇಳಿದು ಅಸಭ್ಯ ಪತ್ರವನ್ನು ಬರೆಯಬಾರದಾಗಿತ್ತು. ಈ ಪತ್ರವನ್ನು ನಾಶಪಡಿಸಬೇಡಿ ಮುಂದೆ ಉಪ ಯೋಗಕ್ಕೆ ಬರಬಹುದು ಜೋಪಾನವಾಗಿಟ್ಟಿರಿ'' ಎಂದು ಅವರು ಸಲಹೆ ನೀಡಿದರು. ಶಿರಟೆಯವರು ಹಾಗೆಯೇ ನಡೆದುಕೊಂಡರು.

---

1. ಪಾರ್ಶ್ವಕೀರ್ತಿಯವರು ಶಿರಟೆಯವರಿಗೆ ಬರೆದ ಪತ್ರದ ಒಕ್ಕಣೆಯನ್ನು ಅಂತಃಕರಣವುಳ್ಳವ ರಿಗೆ ಬಾಯಿಮಾತಿನಲ್ಲಿ ಹೇಳಲು ಮಾತ್ರ ಸಾಧ್ಯ.

ಅಧ್ಯಾಯ : ಹತ್ತು

# ನ್ಯಾಯಮೂರ್ತಿ, ಪಿ. ಹೆಚ್. ಗುಂಜಾಳರ ವಿರೋಧ

ಪಿ. ಹೆಚ್. ಗುಂಜಾಳರು[1] (ಪದ್ಮಪ್ಪ ಹಿರಿಯಪ್ಪ ಗುಂಜಾಳರು) ಕರ್ನಾಟಕದ ಸುಪ್ರಸಿದ್ಧ ಸಮಾಜಸೇವಾ ಧುರೀಣರು. ಧಾರವಾಡ ಜಿಲ್ಲೆಯ ಹಮ್ಮಿಗೆ ಊರಲ್ಲಿ ಜನಿಸಿ, ಜಿಲ್ಲೆಯ ಮೊದಲ ಜೈನ ವಕೀಲರಾಗಿ, ಹುಬ್ಬಳ್ಳಿಯ ಜೈನಬೋರ್ಡಿಂಗಿನ ಕಾರ್ಯದರ್ಶಿಯಾಗಿ ಸಾರ್ವಜನಿಕ ಕಾರ್ಯಗಳಲ್ಲಿ ಇವರು ಪ್ರವೇಶಮಾಡಿದರು. ಪ್ರಾಮಾಣಿಕವಾಗಿ ದುಡಿದರು. ಮುಂದೆ ನ್ಯಾಯಾಧೀಶರಾಗಿ ಸರ್ಕಾರಿ ಸೇವೆಗೆ ಸೇರಿ ಕ್ರಮೇಣ ಜಿಲ್ಲಾ ನ್ಯಾಯಾಧೀಶರಾಗಿ ಒಡ್ತಿ ಹೊಂದಿದರು. ಸತಾರಾ, ಅಹಮದಾಬಾದ್, ನದಿಯಾ, ಕಾರವಾರ, ಬಿಜಾಪುರ, ಬೆಳಗಾವಿ—ಈ ಜಿಲ್ಲೆಗಳಲ್ಲೆಲ್ಲಾ ಜಿಲ್ಲಾ ನ್ಯಾಯಾಧೀಶರಾಗಿ ಅಮೋಘ ಸೇವೆಸಲ್ಲಿಸಿ 1950ರಲ್ಲಿ ನಿವೃತ್ತರಾದರು. ಅದೇ ವರ್ಷ ಅಥಣಿ ಚಿಕ್ಕೋಡಿ ಮತದಾರ ಕ್ಷೇತ್ರದಿಂದ ಚುನಾವಣೆಯಲ್ಲಿ ಗೆದ್ದು ಬಂದು ಮುಂಬಯಿ ವಿಧಾನ ಸಭೆಯ ಸದಸ್ಯರಾದರು. 1956ರಲ್ಲಿ ವಿಶಾಲ ಕರ್ನಾಟಕ ರಾಜ್ಯ ರಚನೆಯಾದ ನಂತರ ಪಬ್ಲಿಕ್ ಸರ್ವಿಸ್ ಕಮಿಶನ್‌ನಲ್ಲೂ ಸೇವೆಸಲ್ಲಿಸಿದರು.

ಜೈನ ಸಮಾಜದ ಇಂತಹ ಬಹುಮುಖ ಪ್ರತಿಭೆಯ ವರ್ಚಸ್ವೀ ವ್ಯಕ್ತಿಗಳಾದ ಪಿ. ಹೆಚ್. ಗುಂಜಾಳರು ಹೊಂಬುಜದ ಪದ್ಮಾವತಿದೇವಿಯ ಅವಿಚ್ಛಿನ್ನ ಭಕ್ತರೂ ಸಹ. ಆಗಿದ್ದರು. ಬಹುತೇಕ ಪ್ರತಿವರ್ಷವೂ ಇವರು ಹೊಂಬುಜದ ರಥೋತ್ಸವಕ್ಕೆ ತಪ್ಪದೆ ಆಗಮಿಸಿ ದೇವತಾಸೇವೆ ಸಲ್ಲಿಸುತ್ತಿದ್ದರು. ಇಂಥವರ ಗಮನಕ್ಕೆ ಬರದಂತೆ ಪಾರ್ಶ್ವಕೀರ್ತಿಗಳು ಹೊಂಬುಜದಲ್ಲಿರುವುದು ಸಾಧ್ಯವಾಗಲಿಲ್ಲ. ಪಿ. ಹೆಚ್. ಗುಂಜಾಳರಿಗೆ ಪಾರ್ಶ್ವಕೀರ್ತಿಗಳ ಹಿಂದಿನ ದುಷ್ಕೃತ್ಯಗಳ ಪ್ರತಿಯೊಂದು ವಿವರವೂ ಚನ್ನಾಗಿ ತಿಳಿದಿತ್ತು. ಇಂತಹ ದೊಡ್ಡ ಆಷಾಢಭೂತಿಯು ಪದ್ಮಾವತಿದೇವಿಯ ಕ್ಷೇತ್ರದ ಮುಂದಿನ ಪೀಠಾಧಿಕಾರಿ ಎಂದು ಕರೆಸಿಕೊಂಡುದನ್ನು ಕೇಳಿ ಗುಂಜಾಳರಿಗೆ ಸಿಡಿಲೇಟಿನಂತಹ ಆಘಾತವಾಯಿತು. ಈ ಗೋಮುಖವ್ಯಾಘ್ರ ಹೊಂಬುಜದಲ್ಲಿ ಬೇರೂರಿ ಪುಣ್ಯ ಕ್ಷೇತ್ರವನ್ನು ಅಪವಿತ್ರಗೊಳಿಸಿ ಅದರ ಸರ್ವನಾಶಮಾಡಲು ಹಾತೊರೆಯುತ್ತಿದ್ದಾನಲ್ಲ! ಇದನ್ನು

---

1. ಪಿ. ಹೆಚ್. ಗುಂಜಾಳರು 1967 ಅಕ್ಟೋಬರ್ 5ನೇ ತಾರೀಖಿನಂದು ದೈವಾಧೀನರಾದರು. (ಜನನ . 1890, ಮರಣ : 1967)

ಹೇಗಾದರೂ ತಡೆಗಟ್ಟಲೇಬೇಕು ಎಂದು ಅವರ ನ್ಯಾಯನಿಷ್ಠುರ ಮನಸ್ಸು ಅವರನ್ನು ಎಚ್ಚರಿಸಿತು.

ಗುಂಜಾಳರು ತಮ್ಮ ಮುಂದಿನ ಹೊಂಬುಜ ಭೇಟಿಯ ಸಮಯದಲ್ಲಿ ದೇವೇಂದ್ರ ಕೀರ್ತಿಸ್ವಾಮಿಗಳನ್ನು ಕಂಡು ಪಾರ್ಶ್ವಕೀರ್ತಿ ವರ್ಣಿಗಳ ಕರಾಳ ಅಧ್ಯಾಯಗಳ ಪೂರ್ವ ಚರಿತ್ರೆಯನ್ನೆಲ್ಲಾ ಆದ್ಯಂತವಾಗಿ ವಿವರಿಸಿದರು. ಏನೇ ಆದರೂ ಇಂತಹ ವಂಚಕನಿಗೆ ಖಂಡಿತವಾಗಿಯೂ ಗುರುಪೀಠದ ಮುಂದಿನ ಪಟ್ಟ ಕಟ್ಟಬಾರದೆಂದು ತಮ್ಮ ವಿರೋಧ ವನ್ನು ಅತ್ಯಂತ ಪ್ರಬಲವಾಗಿ ವ್ಯಕ್ತಪಡಿಸಿದರು. ನ್ಯಾಯಮೂರ್ತಿ ಪಿ. ಹೆಚ್. ಗುಂಜಾಳರ ಮಾತುಗಳನ್ನು ಕೇಳಿ ದೇವೇಂದ್ರ ಕೀರ್ತಿಗಳು ಕಕ್ಕಾಬಿಕ್ಕಿಯಾದರು ! ಪಾರ್ಶ್ವಕೀರ್ತಿವರ್ಣಿಗಳ ದುರಾಚಾರಗಳ ವಿಚಾರವಾಗಿ ಆಗಾಗ್ಗೆ ಶೇಡಬಾಳದ ಕಡೆ ಯವರಿಂದ ವಿರೋಧದ ಮಾತುಗಳನ್ನು ದೇವೇಂದ್ರಕೀರ್ತಿಗಳು ಕೇಳಿದ್ದರೂ ಸಹ ಅವುಗಳನ್ನೆಲ್ಲಾ ಉಪೇಕ್ಷೆಯಿಂದ ಕಂಡಿದ್ದರು. ಪಾರ್ಶ್ವಕೀರ್ತಿಗಳು ಹೂಡಿದ್ದ ನಯ ವಂಚನೆಯ ಉಕ್ಕಿನ ಬಲೆಯನ್ನು ಭೇದಿಸಿಕೊಂಡು ಆ ಮಾತುಗಳು ದೇವೇಂದ್ರ ಕೀರ್ತಿ ಗಳ ಹೃದಯವನ್ನು ಪ್ರವೇಶಿಸುವುದು ಸಾಧ್ಯವೇ ಇರಲಿಲ್ಲ ! ಆದರೆ ಈಗ ಪಾರ್ಶ್ವ ಕೀರ್ತಿಗಳ ವಿರುದ್ಧವಾಗಿ ಹೇಳುತ್ತಿರುವವರು ಕಡೆಗಣಿಸುವಂತಹ ಸಾಮಾನ್ಯ ವ್ಯಕ್ತಿ ಯಲ್ಲ. ಗುಂಜಾಳರು ದೇವೇಂದ್ರ ಕೀರ್ತಿಗಳಿಗೆ ಬಹು ಆಪ್ತರಾದ ಶಿಷ್ಯರಾಗಿದ್ದುದು ಮಾತ್ರವಲ್ಲ ಅವರಿಗೆ ಹಿಂದೆ ಪಟ್ಟಾಭಿಷೇಕವಾಗುವ ಸಂದರ್ಭದಲ್ಲಿ ಬಹಳ ಉಪಕಾರ ಮಾಡಿದವರೂ ಆಗಿದ್ದರು.

1938 ರಿಂದ 1946ರವರೆಗೆ ಹೊಂಬುಜದ ಪೀಠಾಧಿಕಾರಿಗಳಾಗಿದ್ದ ಶ್ರೀ ಚಿನ್ನತಂಬಿನಯನಾರ್‌ರವರು ಅರ್ಹದ್ದಾಸರನ್ನು ಹೊಂಬುಜ ಗುರುಪೀಠದ ಉತ್ತರಾಧಿ ಕಾರಿಯೆಂದು ಮೊದಲು ಘೋಷಿಸಿದ್ದರು. ಆದರೆ ಮುಂದೆ ಇವರಿಗೆ ಅರ್ಹದ್ದಾಸರಲ್ಲಿ ಏನು ಅನರ್ಹತೆ ಕಂಡಿತೋ ಏನೋ ಅರ್ಹದ್ದಾಸರಿಗೆ ಪಟ್ಟ ಕಟ್ಟುವುದಿಲ್ಲ ಅವರು ಈ ಪೀಠದ ಉತ್ತರಾಧಿಕಾರಿಯಾಗುವುದು ಖಂಡಿತಾ ಸಾಧ್ಯವಿಲ್ಲ ಎಂದು ಪಟ್ಟು ಹಿಡಿದು ಕುಳಿತರು[1] ಆದರೆ ಅರ್ಹದ್ದಾಸರು ಸುಮ್ಮನಿರಲಿಲ್ಲ. ಈ ವ್ಯವಹಾರ ಕೋರ್ಟಿನ ಕಟ್ಟೆ ಹತ್ತಿತು. ಆಗ ಮುಂಬಯಿ ಸರ್ಕಾರದ ಜಿಲ್ಲಾ ನ್ಯಾಯಾಧೀಶರಾಗಿದ್ದ ಪಿ. ಹೆಚ್. ಗುಂಜಾಳರು ಈ ಮೊಕದ್ದಮೆಯ ಕಡೆ ಗಮನ ಕೊಡುವಂತಾಯಿತು. ಗುಂಜಾಳರು

---

1. ಶ್ರೀ ಚಿನ್ನತಂಬಿನಯನಾರ್‌ರವರು ಹೀಗೆ ಪಟ್ಟುಹಿಡಿಯಲು ಕಾರಣವೇನೆಂದು ನಾನು ಹೊಂಬುಜದಲ್ಲಿ ವಿಚಾರ ಮಾಡಿದಾಗ, ಅರ್ಹದ್ದಾಸರು ಕ್ಷೇತ್ರದ ಪರವಾಗಿ ಸಂಗ್ರಹಿಸಿದ ಹಣದಲ್ಲಿ ಒಂದು ಭಾಗ ಮೊತ್ತವನ್ನು ಬಚ್ಚಿಟ್ಟು ಉಳಿದ ಹಣವನ್ನು ಶ್ರೀ ಚಿನ್ನತಂಬಿ ನಯನಾರ್‌ರವರಿಗೆ ಒಪ್ಪಿಸಿದರಂತೆ. ಈ ವಂಚನೆ ಸ್ವಲ್ಪ ದಿನಗಳಲ್ಲಿಯೇ ಹಿರಿಯಸ್ವಾಮಿಗಳ ಗಮನಕ್ಕೆ ಬಂದು ಮೇಲಿನ ನಿರ್ಧಾರವನ್ನು ತೆಗೆದುಕೊಂಡರಂತೆ.

ನೀಡಿದ ತೀರ್ಪು ಅರ್ಹದ್ದಾಸರ ಪರವಾಯಿತು. ಹೀಗೆ ಪಿ. ಹೆಚ್. ಗುಂಜಾಳರು ಅರ್ಹದ್ದಾಸರು ಹೊಂಬುಜದ ಗುರುಪೀಠಕ್ಕೆ ಬರುವುದಕ್ಕೆ ನೇರವಾಗಿ ಕಾರಣಕರ್ತರಾಗಿದ್ದರು.

ಈಹಿನ್ನೆಲೆಯಿಂದಾಗಿ ಪಿ. ಹೆಚ್. ಗುಂಜಾಳರ ಮಾತುಗಳನ್ನು ದೇವೇಂದ್ರಕೀರ್ತಿಗಳು ಉಪೇಕ್ಷೆ ಮಾಡುವುದಾದರೂ ಹೇಗೆ ? ಇಂತಹ ಅಧಿಕೃತ ವಿರೋಧದ ಸಂದರ್ಭದಲ್ಲಿ ದೇವೇಂದ್ರಕೀರ್ತಿಗಳು ಈ ಸಮಸ್ಯೆಯ ಇತ್ಯರ್ಥದ ಬಗೆಗೆ ಯಾವ ಒಂದು ಖಚಿತವಾದ ನಿರ್ಧಾರವನ್ನೂ ತೆಗೆದುಕೊಳ್ಳಲಿಲ್ಲ. ಈ ಬಗ್ಗೆ ಗುಂಜಾಳರಿಗೆ ಈ ಸಮಸ್ಯೆಯ ಕಡೆ ಗಮನ ಕೊಡುವುದಾಗಿ ತಿಳಿಸಿ ಅವರನ್ನು ಸಮಾಧಾನ ಪಡಿಸಿದರು.

## ಗುಂಜಾಳರ ವಶವಾದ ಅಸಭ್ಯ ಪತ್ರ

ಗುಂಜಾಳರು ಹೊಂಬುಜದ ಕಳವಳಕಾರಿ ವಿದ್ಯಮಾನಗಳ ಬಗೆಗೆ ಸುಮ್ಮನೆ ಕೂರದೆ ಪಾರ್ಶ್ವಕೀರ್ತಿಗಳನ್ನು ಕ್ಷೇತ್ರದಿಂದ ಹೊರಗಟ್ಟುವಂತೆ ಮಾಡುವ ಆಲೋಚನೆಯಲ್ಲೇ ಕಾಲ ಕಳೆದರು. ಇವರ ಬೆಂಬಲಕ್ಕೆ ಬೆಳಗಾಂ ಕಡೆಯ ಅನೇಕ ಗಣ್ಯರು ನಿಂತರು. ಈ ಸಂದರ್ಭದಲ್ಲಿ ಗುಂಜಾಳರು ಶೇಡಬಾಳದಪರೊಬ್ಬರನ್ನು ಸಂಪರ್ಕಿಸಿ ಪಾರ್ಶ್ವಕೀರ್ತಿಗಳು ಶೇಡಬಾಳದಲ್ಲಿ ಮಾಡಿರುವ ದುಷ್ಕೃತ್ಯಗಳ ಬಗೆಗೆ ಯಾವುದಾದರೂ ಲಿಖಿತ ದಾಖಲೆಯಿದ್ದರೆ ಅದನ್ನು ಕಳುಹಿಸಿಕೊಡುವಂತೆ ಕೇಳಿದರು.

ಶೇಡಬಾಳದವರು ತಮ್ಮ ಮಿತ್ರರೊಬ್ಬರ ಮೂಲಕ ಆಶ್ರಮದಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ಶಿರಟೆಯವರನ್ನು ಇದರ ಬಗ್ಗೆ ವಿಚಾರಿಸಿದರು. ಶಿರಟೆಯವರು ತಮ್ಮ ಹತ್ತಿರವಿದ್ದ, ಪಾರ್ಶ್ವಕೀರ್ತಿಗಳು ಬರೆದಿದ್ದ ಅಸಭ್ಯಪತ್ರವನ್ನು ನೀಡಿದರು. ಶೇಡಬಾಳದ ಪ್ರಮುಖ ವ್ಯಕ್ತಿ ಪತ್ರವನ್ನು . ಪಿ. ಹೆಚ್. ಗುಂಜಾಳರಿಗೆ ರವಾನಿಸಿದರು. ಗುಂಜಾಳರು ಇದನ್ನು ನೇರವಾಗಿ ಹೊಂಬುಜಕ್ಕೆ ತೆಗೆದುಕೊಂಡು ಹೋಗಿ ದೇವೇಂದ್ರಕೀರ್ತಿಸ್ವಾಮಿಗಳ ಮುಂದೆ ಹಾಜರುಪಡಿಸಿ, ಪಾರ್ಶ್ವಕೀರ್ತಿಗಳನ್ನು ಈಗಲಾದರೂ ಹೊಂಬುಜದಿಂದ ದೂರಮಾಡಿ ಎಂದು ವಿನಂತಿಸಿಕೊಂಡರು.

ಈ ಸಮಯ (ಸು. 1960)ದಲ್ಲಿ ದೇವೇಂದ್ರಕೀರ್ತಿಸ್ವಾಮಿಗಳು ಪಾರ್ಶ್ವಕೀರ್ತಿವರ್ಣಿಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳುವ ಅಧಿಕಾರವನ್ನು ಉಳಿಸಿಕೊಂಡಿರಲಿಲ್ಲ ! ಪಾರ್ಶ್ವಕೀರ್ತಿಗಳು ನಯವಂಚನೆ ಮತ್ತು ಭಂಡತನದ ಕಲೆಗಳಲ್ಲಿ ಬಹುಚೆನ್ನಾಗಿ ಪಳಗಿದವರಾದುದರಿಂದ ತಮ್ಮ ಮೇಲೆ ಯಾವಾಗಲಾದರೂ ವಿರೋಧ ಬರಬಹುದೆಂದು ಮೊದಲೇ ನಿರೀಕ್ಷಿಸಿ ಅದಕ್ಕೆ ತಕ್ಕ ಕುತಂತ್ರಗಳನ್ನು ಮಾಡಿ ದೇವೇಂದ್ರಕೀರ್ತಿಗಳನ್ನು ತಮ್ಮ ಸೂತ್ರದ ಬೊಂಬೆಯನ್ನಾಗಿ ಮಾಡಿಕೊಂಡುಬಿಟ್ಟಿದ್ದರು. ಪಾರ್ಶ್ವಕೀರ್ತಿಗಳ ಈ ಮೋಡಿಯಿಂದಾಗಿ ದೇವೇಂದ್ರಕೀರ್ತಿಗಳು ಈಗ ಉಭಯಸಂಕಟದಲ್ಲಿ ಸಿಕ್ಕಿಬೀಳು

ವಂತಾಯಿತು. ಪಿ. ಹೆಚ್. ಗುಂಜಾಳರಿಗೆ ಸ್ಪಷ್ಟವಾದ ಉತ್ತರವನ್ನು ಕೊಡಲಾರದೆ ಹೇಗೋ ಅವರಿಗೊಂದು 'ಹಾವೂ ಸಾಯಬಾರದು ಕೋಲೂ ಮುರಿಯಬಾರದು' ಎಂಬುವಂತಹ ಉತ್ತರವನ್ನು ನೀಡಿ ಆ ಸಂದರ್ಭಕ್ಕೆ ಅವರನ್ನು ಕಳುಹಿಸಿಕೊಟ್ಟರು.

ಗುಂಜಾಳರು ಹೋದಮೇಲೆ ದೇವೇಂದ್ರಕೀರ್ತಿಗಳು ಪಾರ್ಶ್ವಕೀರ್ತಿಗಳಿಗೆ ಗುಂಜಾಳರು ತಂದ ದಾಖಲೆಯ ವಿಚಾರ ಹೇಳಿದರು. ಆದರೆ ಅದು ಯಾವ ಬಗೆಯ ದಾಖಲೆ ಎಂಬುದನ್ನು ತಿಳಿಸದೆ ಶೇಡಬಾಳದ ಆಶ್ರಮದಿಂದ ಬಂದಿದೆಯೆಂಬುದಷ್ಟನ್ನು ಮಾತ್ರ ತಿಳಿಸಿದರು. ಪಾರ್ಶ್ವಕೀರ್ತಿಗಳು ತಕ್ಷಣವೇ ಶೇಡಬಾಳಕ್ಕೆ ಹೊರಟುನಿಂತು ಆ ದಾಖಲೆ ಕಳುಹಿಸಿರಬಹುದಾದವರನ್ನು ವಿಚಾರಿಸಿಕೊಳ್ಳಲು ಆತುರತೋರಿದರು. ಆ ಕ್ಷಣದ ಅವರ ಅವಿವೇಕದ ಮನಸ್ಸು ಹೇಳಿದಂತೆ ಆ ಕೂಡಲೇ ಹೊರಟು ಬಿಳಿಯಬಣ್ಣದ ಕಾರೊಂದನ್ನು ಬಾಡಿಗೆಗೆ ಹಿಡಿದು ಶೇಡಬಾಳಕ್ಕೆ ಬಂದರು. ಬಂದವರೇ ಅಶೋಕ ದಾದಾ ಪಾಟೀಲರನ್ನು ಕಂಡರು. ಅಶೋಕ್‌ರವರೇ ಏನೋ ದಾಖಲೆಯನ್ನು ಕಳುಹಿ ಸಿರಬಹುದೆಂಬ ಸಂಶಯ ಪಾರ್ಶ್ವಕೀರ್ತಿಗಳ ಮನಸ್ಸಿಗಂಟಿತ್ತು. ಅಶೋಕರು ತಾವು ಯಾವ ದಾಖಲೆಯನ್ನೂ ಕಳುಹಿಸಿಲ್ಲವೆಂದು ತಿಳಿಸಿ, ನೀವು ಯಾರಿಗಾದರೂ ಮನ ನೋಯಿಸುವ ಪತ್ರವನ್ನು ಬರೆದಿದ್ದಿರಾ ನೆನಪು ಮಾಡಿಕೊಳ್ಳಿ ಎಂದು ಪಾರ್ಶ್ವಕೀರ್ತಿ ಗಳಿಗೆ ಮರುಪ್ರಶ್ನೆ ಹಾಕಿದರು. ಮುಂದಿನ ಸಂಗತಿಯೆಲ್ಲಾ ಪಾರ್ಶ್ವಕೀರ್ತಿಗಳಿಗೆ ಅರ್ಥ ವಾಯಿತು. ತಾವು ಬರೆದ ಅಸಭ್ಯ ಪತ್ರವೇ ತಮಗೆ ಮುಳುವಾಗಲಿರುವುದನ್ನು ಯೋಚಿಸುತ್ತಾ ಅಗತ್ಯವಿರುವಷ್ಟು ಕಾಲ ಶೇಡಬಾಳದಲ್ಲಿದ್ದು ನಂತರ ಕಾರಿನಲ್ಲಿ ಹೊಂಬುಜಕ್ಕೆ ಹಿಂತಿರುಗಿದರು.

## ಮುದ್ದಮ್ಮನೊಂದಿಗೆ ಸರಸ

ಪಾರ್ಶ್ವಕೀರ್ತಿಗಳು ಹೊಂಬುಜ ಸೇರಿದ ಮೇಲೆ ಅವರಲ್ಲಿ ಹುಟ್ಟುಗುಣದಂತೆ ಮನೆಮಾಡಿಕೊಂಡಿದ್ದ ಸ್ತ್ರೀವ್ಯಸನ ಅದು ತನ್ನ ಮನೆಯನ್ನೇನೂ ತೆರವು ಮಾಡಿರಲಿಲ್ಲ. ಹೆಣ್ಣು ಮತ್ತು ಹಣಗಳು ಸದಾ ಅವರ ಮನಸ್ಸನ್ನು ಸೆಳೆಯುವ ಸೂಜಿಗಲ್ಲುಗಳಾಗಿ ದ್ದುವು. ಸೋಗಿನ ಕ್ಷುಲ್ಲಕವೇಷ ಹಣವನ್ನು ಶ್ರಮವಿಲ್ಲದೆ ಸೆಳೆಯುವ ಸಾಧನವಾಗಿತ್ತು. ಹೊಂಬುಜದಲ್ಲಿ ಅಧಿಕಾರಸ್ಥಾನಗಳನ್ನು ವಶಪಡಿಸಿಕೊಂಡಾಗ ಹಣದ ಅಗತ್ಯ ಈಡೇರಿತು. ಇನ್ನು ಹೆಣ್ಣಿನ ಬೇಟೆ ನಿಂತೀತೆ ?

ಪಾರ್ಶ್ವಕೀರ್ತಿಗಳು ಹೊಂಬುಜಕ್ಕೆ ಆಗಮಿಸಿದ ಹೊಸದರಲ್ಲಿ ಅವರು ನಡೆಸಿರ ಬಹುದಾದ ಲೈಂಗಿಕ ಸಾಹಸಗಳ ಸುಳಿವು ಯಾರಿಗೂ ತಿಳಿದಂತೆ ಕಾಣಲಿಲ್ಲ. ಆದರೆ ಸು. 1960ರ ಹೊತ್ತಿಗೆ ಈ ವಿಷಯವಾಗಿ ಹೊಂಬುಜದಲ್ಲಿ ಗುಸುಗುಸು ಸುದ್ದಿ ಪ್ರಾರಂಭ ವಾಯಿತು. 1961ರ ಹೊತ್ತಿಗೆ ಈ ಸುದ್ದಿಗೆ ಖಚಿತ ಆಧಾರಗಳು ದೊರಕಿದುವು.

ಮಠದ ದನಗಳ ಕೊಟ್ಟಿಗೆಯಲ್ಲಿ ಕಸಗುಡಿಸಲು ಹೆಣ್ಣಾಳುಗಳು ಬರುತ್ತಿದ್ದರು. ಅವರಲ್ಲಿ ಇಬ್ಬರು ಹೆಣ್ಣಾಳುಗಳ ಜೊತೆ ಪಾರ್ಶ್ವಕೀರ್ತಿಗಳು ದೇಹಸಂಪರ್ಕವಿರಿಸಿ ಕೊಂಡರು. ನಂತರ ಈ ಮನ್ಮಥವ್ಯಾಧಿ ಉಲ್ಬಣಿಸಿತು. ಹೊಂಬುಜದಲ್ಲಿಯೇ ಒಬ್ಬ ಗೃಹಸ್ಥರ ಮನೆಯ ಕೊಟ್ಟಿಗೆ ಕೆಲಸಕ್ಕೆ ಒಬ್ಬ ಸ್ಫುರದ್ರೂಪಿ ಹೆಣ್ಣಾಳು ಬರುತ್ತಿದ್ದಳು. ಈಕೆಗೆ ಮದುವೆಯಾಗಿತ್ತು. ಆದರೆ ಮದುವೆಯಾಗಿ ವರ್ಷ ಕಳೆಯುತ್ತಿರುವಂತೆಯೇ ಆಕೆ ಕಾರಣಾಂತರಗಳಿಂದ ಗಂಡನಿಂದ ತಾನೇ ದೂರವಾಗಿ ಆತನನ್ನು ತೊರೆದಿದ್ದಳು. ಒಬ್ಬಂಟಿಗಳಾದ ಆಕೆ ಹದಿನೆಂಟರ ತಾರುಣ್ಯದಿಂದ ಕೂಡಿ, ನೋಡಲು ಮುತ್ಸ್ಯಗಂಧಿ ಯಂತೆ ಆಕರ್ಷಕವಾಗಿದ್ದಳು. ಇವಳ ಹೆಸರು ಮುದ್ದಮ್ಮ.[1]

ಪಾರ್ಶ್ವಕೀರ್ತಿಗಳು ಮುದ್ದಮ್ಮನನ್ನು ಯಾವ ಸಂದರ್ಭದಲ್ಲಿ ಯಾವ ಗಳಿಗೆ ಯಲ್ಲಿ ಕಂಡರೋ ಅಂತೂ ಅವಳ ಮೇಲೆ ಇವರ ಕಾಮುಕದೃಷ್ಟಿ ಬಿದ್ದಿತು. ಪಾಲಕ ರಿಲ್ಲದ ಆಕೆಯನ್ನು ವಶಪಡಿಸಿಕೊಳ್ಳುವ ವಿಧಾನವನ್ನು ಯಾರೂ ಇವರಿಗೆ ಹೇಳಿಕೊಡ ಬೇಕಾಗಿರಲಿಲ್ಲ ! ಇವರೊಂದಿಗೆ ಅನೈತಿಕ ಸಂಪರ್ಕವಿಟ್ಟುಕೊಂಡಿದ್ದ ಇಬ್ಬರು ಹೆಣ್ಣಾಳು ಗಳಲ್ಲಿ ಒಬ್ಬಳು ಮುದ್ದಮ್ಮನನ್ನು ಪಾರ್ಶ್ವಕೀರ್ತಿಗಳಿಗೆ ಗೊತ್ತುಮಾಡಿಕೊಟ್ಟಳು. ಹೊಂಬುಜದಲ್ಲಿಯೇ ಆದ ಈ ಹೊಸ ಸಂಬಂಧವೂ ಬಹಿರಂಗವಾಗಲು ಹೆಚ್ಚುಕಾಲ ಹಿಡಿಯಲಿಲ್ಲ. ಮುದ್ದಮ್ಮನ ಅಕ್ಕಪಕ್ಕದ ಮನೆಯವರಿಗೆ ಈ ರಹಸ್ಯವ್ಯವಹಾರ ತಿಳಿಯಿತು. ಇದು ಕ್ರಮೇಣ ಊರಿಗೆಲ್ಲಾ ಹರಡಿತು.

ಬೆಕ್ಕು ಕಣ್ಮುಚ್ಚಿ ಹಾಲು ಕುಡಿಯುತ್ತದಂತೆ. ತಾನು ಕುಡಿಯುವಾಗ ಯಾರೂ ನೋಡುತ್ತಿಲ್ಲವೆಂದೇ ಅದರ ಭಾವನೆ. ಆದರೆ ಓಡಿನಿಂದ ಬೀಳಲಿರುವ ಬಡಿಗೆಯ ಪೆಟ್ಟಿನ ಅರಿವು ಅದಕ್ಕಿರುವುದಿಲ್ಲ. ಪಾರ್ಶ್ವಕೀರ್ತಿಗಳ ಹೆಣ್ಣಿನ ಚಪಲವನ್ನು ತಿಳಿದ ಹೊಂಬುಜದ ಅನೇಕರು ಅವರ ಹತ್ತಿರ ಹೋಗಿ ಬಹಳ ನಾಜೂಕಾಗಿ ಈ ವಿಷಯ ಪ್ರಸ್ತಾಪವಾದಿ ಅವರಿಂದ ಹಣ ಸುಲಿದರು. ಈ ವಿಷಯವನ್ನು ಪ್ರಚಾರಮಾಡ ಬಹುದಾದಂತಹ ವ್ಯಕ್ತಿಗಳನ್ನು ಪಾರ್ಶ್ವಕೀರ್ತಿಗಳೇ ಮುಂದಾಗಿ ಹಣಚೆಲ್ಲಿ, ರೇಡಿಯೋ ಮತ್ತಿತರ ಬೆಲೆ ಬಾಳುವ ವಸ್ತುಗಳನ್ನು ಕಾಣಿಕೆಯೆಂದು ನೀಡಿ ವಶಪಡಿಸಿಕೊಂಡರು. ಈ ಸುಲಿಗೆ ಮತ್ತು ವಶೀಕರಣದ ವಿಚಾರಗಳೆಲ್ಲಾ ಊರಿನ ಜನರ ನಾಲಿಗೆಗೆ ಗ್ರಾಸ ವನ್ನೊದಗಿಸಿದವು. ಜನರು ಮಠದ ಬಗೆಗೆ ಬಹಳ ಹಗುರವಾಗಿ ಮಾತನಾಡಿಕೊಳ್ಳ ಲಾರಂಭಿಸಿದರು.

---

1. 'ಮುದ್ದಮ್ಮ' ಎಂಬ ಹೆಸರು ಆಕೆಯ ನಿಜವಾದ ಹೆಸರಲ್ಲ. ಅದು ಬೇರೆಯೇ ಇದೆ. ಕಾರಣಾಂತರಗಳಿಂದ ಆಕೆಯ ಹೆಸರನ್ನು ಬದಲಾಯಿಸಿ ಮುದ್ದಮ್ಮ ಎಂದು ಈ ಕೃತಿಯಲ್ಲಿ ಕರೆಯ ಲಾಗಿದೆ. ಈಕೆ ಈಗಲೂ ಹೊಂಬುಜದಲ್ಲಿ ವಾಸಿಸುತ್ತಿದ್ದಾಳೆ.

ಊರೆಲ್ಲಾ ಢಾಣಾಡಂಗುರವಾಗಿರುವ ಈ ಸುದ್ದಿಯನ್ನು ದೇವೇಂದ್ರಕೀರ್ತಿ ಸ್ವಾಮಿಗಳಿಗೆ ತಿಳಿಸಿ ಕ್ಷೇತ್ರದ ಹೆಸರನ್ನು ಉಳಿಸಲು ಹೋರಾಡುವವರಾರು ? ಪಾರ್ಶ್ವ ಕೀರ್ತಿಗಳು ಕಾವಿ, ಪಿಂಛ ಮತ್ತು ಕಮಂಡಲಗಳ ಮರ್ಯಾದೆಯನ್ನು ಹಾಳುಮಾಡಿ ಶುದ್ಧ ಹಲ್ಕಾಕೆಲಸ ಮಾಡುತ್ತಿದ್ದಾರೆ ಎಂದು ಎಲ್ಲರೂ ಪರಸ್ಪರರಲ್ಲಿ ಮಾತನಾಡಿ ಕೊಳ್ಳುತ್ತಾರಾದರೂ ಬೆಕ್ಕಿಗೆ ಗಂಟೆ ಕಟ್ಟುವ ಪ್ರಶ್ನೆ ಬಂದಾಗ ಅವರೆಲ್ಲರೂ ಉತ್ತರ ಕುಮಾರರಾಗುತ್ತಿದ್ದರು. ಜನರ ಗುಸುಗುಸು ಏನೇ ಇರಲಿ ಈ ನಡುವೆ ಪಾರ್ಶ್ವಕೀರ್ತಿ ಮತ್ತು ಮುದ್ದವ್ವ ಇವರಿಬ್ಬರ ಕಾಮದ ಫಲವಾಗಿ ಗಂಡುಮಗುವೊಂದು ಜಗತ್ತಿಗೆ ಅವತರಿಸಿ ಕಿಲಕಿಲನೆ ನಲಿದಾಡತೊಡಗಿತು. ಇದಕ್ಕೆ ಮುದ್ದ[1] ಎಂದು ಹೆಸರಿಟ್ಟರು.

## ಭಕ್ತರ ಬಹಿರಂಗ ಸಭೆ

ಪಿ. ಹೆಚ್. ಗುಂಜಾಳರು ಹೊಂಬುಜ ಕ್ಷೇತ್ರವನ್ನು ಪಾರ್ಶ್ವಕೀರ್ತಿಗಳಿಂದ ಪಾರು ಮಾಡಬೇಕೆಂಬ ತಮ್ಮ ಪ್ರಯತ್ನವನ್ನು ನಿಲ್ಲಿಸಲಿಲ್ಲ. ನ್ಯಾಯಮೂರ್ತಿಯಾಗಿ ಅವರಿಗೆ ಅಪರಾಧ ಪ್ರಜ್ಞೆಯುಳ್ಳವರ ತಂತ್ರಕುತಂತ್ರಗಳೆಲ್ಲವುಗಳ ಪರಿಚಯವಿತ್ತು. ಹೀಗಾಗಿ ಪಾರ್ಶ್ವಕೀರ್ತಿಗಳಂತಹ ವೇಷಧಾರಿ ಡಾಂಬಿಕರಿಂದ ಹೊಂಬುಜ ಕ್ಷೇತ್ರವನ್ನು ಮುಕ್ತ ಗೊಳಿಸದೆ ಅವರಿಗೆ ನಿದ್ರೆ ದೂರವಾಯಿತು. ಇವರು ಸತತ ಪ್ರಯತ್ನಪಟ್ಟು 1962ನೇ ವರ್ಷದ ಹೊಂಬುಜದ ರಥೋತ್ಸವದಲ್ಲಿ ಗುರುಪೀಠದ ಉತ್ತರಾಧಿಕಾರಿಯ ಪ್ರಶ್ನೆ ಅಲ್ಲಿ ಸೇರಿದ್ದ ಭಕ್ತಸಮೂಹದ ಮುಂದೆ ಚರ್ಚೆಗೆ ಬರುವ ಹಾಗೆ ಮಾಡಿದರು. ರಥೋತ್ಸವವಾದ ಮರುದಿನ ಬೆಳಿಗ್ಗೆ 9 ಗಂಟೆಯ ಹೊತ್ತಿಗೆ ಸೇರಿದ ಕ್ಷೇತ್ರದ ಭಕ್ತರ ಬಹಿರಂಗ ಸಭೆಯಲ್ಲಿ ಉತ್ತರಾಧಿಕಾರಿಯ ಪ್ರಶ್ನೆಯನ್ನು ಚರ್ಚಿಸಲಾಯಿತು. ಬೆಳಗಾವಿ, ಶೇಡಬಾಳ ಸಾಂಗಲಿ ಕಡೆಯ ಗಣ್ಯರು ಪಾರ್ಶ್ವಕೀರ್ತಿಗಳಿಗೆ ಪಟ್ಟಾಭಿಷೇಕವಾಗ ಕೂಡದು ಎಂದು ಸಕಾರಣಗಳೊಂದಿಗೆ ಪ್ರಬಲವಾಗಿ ವಾದಿಸಿದರು. ಇವರ ಪ್ರಮುಖ ರಾಗಿ ನ್ಯಾಯಮೂರ್ತಿ ಪಿ. ಹೆಚ್. ಗುಂಜಾಳರು ವಾದ ಮಾಡುತ್ತಾ "ಪಾರ್ಶ್ವಕೀರ್ತಿ ಗಳು ಈ ಹಿಂದೆ ಶೇಡಬಾಳದಲ್ಲಿ ವ್ಯಭಿಚಾರ ಮಾಡಿದ್ದಾರೆ. ಸತೀಶನೆಂಬ ಹುಡುಗ ನೊಬ್ಬನನ್ನು ಒಡಿದು ಸಾಯಿಸಿದ್ದಾರೆ. ಇದಲ್ಲದೆ ಬೇಕಾದಷ್ಟು ದುರ್ವ್ಯವಹಾರ ಗಳನ್ನು ಮಾಡಿದ್ದಾರೆ. ಕ್ರಿಮಿನಲ್ ಅಪರಾಧಗಳನ್ನು ಮಾಡಿರುವ ಇಂತಹ ಧೂರ್ತ ಮನುಷ್ಯನನ್ನು ಖಂಡಿತವಾಗಿಯೂ ಈ ಕ್ಷೇತ್ರದ ಉತ್ತರಾಧಿಕಾರಿಯೆಂದು ಘೋಷಿಸ ಬೇಡಿ" ಎಂದು ಮುಂತಾಗಿ ತಮ್ಮ ವಿರೋಧವನ್ನು ಸ್ಪಷ್ಟವಾದ ಮಾತುಗಳಿಂದ ವ್ಯಕ್ತ ಪಡಿಸಿದರು.

---

1. ಮಗುವಿಗೆ ಇಟ್ಟ ಹೆಸರು ಬೇರೆಯೇ ಇದೆ. ಈ ಕೃತಿಯಲ್ಲಿ ಅದನ್ನು 'ಮುದ್ದ' ಎಂದು ಬದಲಾಯಿಸಿದೆ. ಈ ಮಗು ಈಗ ಬೆಳೆದು ದೊಡ್ಡವನಾಗಿ ಹೊಂಬುಜದಲ್ಲಿ ತಾಯಿಯೊಂದಿಗೆ ವಾಸ ಮಾಡಿಕೊಂಡಿದ್ದಾನೆ. ಈತನಿಗೆ ಈಗ 20-22ರ ಪ್ರಾಯ.

ಪಾರ್ಶ್ವಕೀರ್ತಿಗಳ ನಯವಂಚನೆಗೆ ಒಳಗಾದ ಮತ್ತು ಅವರ ನಿಜಜೀವನ ತಿಳಿಯದ ಹಳೇ ಮೈಸೂರು ಪ್ರದೇಶದ ಕೆಲವು ಜನರು ಪಾರ್ಶ್ವಕೀರ್ತಿಗಳ ಪರವಾಗಿ ವಾದಿಸಿದರು. ಇವರ ಪ್ರಮುಖರಾಗಿ ಸ್ವತಃ ದೇವೇಂದ್ರಕೀರ್ತಿಗಳೇ ವಾದ ಮಾಡುತ್ತಾ "ಮೂರು ನಾಲ್ಕು ಭಾಷೆಗಳನ್ನು ಚೆನ್ನಾಗಿ ಬಲ್ಲ ಪಾರ್ಶ್ವಕೀರ್ತಿಗಳೇ ಮುಂದಿನ ಪೀಠಾಧಿಕಾರಿಯಾಗುವುದು ಸೂಕ್ತ" ಎಂದು ಮುಂತಾಗಿ ಮಾತನಾಡಿ ಪಾರ್ಶ್ವಕೀರ್ತಿಗಳನು ಸಮರ್ಥಿಸಿದರು. ಈ ವಾದ ವಿವಾದಗಳು ನಡೆಯುತ್ತಿರುವಾಗ ವಿವಾದಕ್ಕೆ ಕಾರಣರಾದ ಪಾರ್ಶ್ವಕೀರ್ತಿಗಳು ಕ್ಷೇತ್ರದಲ್ಲಿಯೇ ಹಾಜರಿರಲಿಲ್ಲ !

ಸಭೆಯಲ್ಲಿ ಈ ಪ್ರಶ್ನೆ ಇತ್ಯರ್ಥವಾಗದೇ ಹೋದಾಗ ಕಡೆಗೆ ಕ್ಷೇತ್ರಾಧಿದೇವತೆ ಶ್ರೀ ಪದ್ಮಾವತಿ ದೇವಿಯ ಪ್ರಸಾದವನ್ನು ಕೇಳಿ ಉತ್ತರಾಧಿಕಾರಿತ್ವದ ಪ್ರಶ್ನೆಯನ್ನು ಬಗೆಹರಿಸುವ ಸಲಹೆಯನ್ನು ಸಭೆಯಲ್ಲಿ ಸೂಚಿಸಲಾಯಿತು. ಈ ಸಲಹೆಯನ್ನು ಸ್ವತಃ ದೇವೇಂದ್ರಕೀರ್ತಿಗಳೇ ಸಭೆಯ ಮುಂದೆ ಮಂಡಿಸಿದರು.

ಈ ಸಲಹೆಯಂತೆ "ಶ್ರೀ ಪದ್ಮಾವತಿ ದೇವಿ ಪಾರ್ಶ್ವಕೀರ್ತಿಗಳಿಗೆ ಪಟ್ಟವಾಗಲಿ ಎಂದು ಬಯಸಿದರೆ ಅದಕ್ಕೆ ಆಕೆ ಪ್ರಸಾದ ನೀಡಲಿ. ಆಗ ನಾವೆಲ್ಲಾ ವಿರೋಧವಿಲ್ಲದೆ ಸರ್ವಾನುಮತದಿಂದ ಪಟ್ಟ ಕಟ್ಟೋಣ. ದೇವಿಗೆ ಪಾರ್ಶ್ವಕೀರ್ತಿಗಳು ಇಷ್ಟವಿಲ್ಲದಿದ್ದರೆ ಆಕೆ ಪ್ರಸಾದವನ್ನು ಕರುಣಿಸದಿರಲಿ. ಆಗ ಅವರಿಗೆ ಪಟ್ಟ ಕಟ್ಟುವುದು ಬೇಡ" ಎಂಬ ಅಭಿಪ್ರಾಯವನ್ನು ಮುಂದಿಟ್ಟುಕೊಂಡು ದೇವಿಯಲ್ಲಿ ಪ್ರಸಾದ ಕೇಳಲು ಸಮಸ್ತ ಭಕ್ತರ ಬಹಿರಂಗ ಸಭೆ ಸರ್ವಾನುಮತದಿಂದ ನಿರ್ಧರಿಸಿತು. ಪಿ. ಹೆಚ್. ಗುಂಜಾಳರೂ ಸಹ ಇದಕ್ಕೆ ಒಪ್ಪಿಕೊಂಡರು. ಹೀಗೆ ಕ್ಷೇತ್ರದ ಉತ್ತರಾಧಿಕಾರತ್ವದ ಪ್ರಶ್ನೆ ಜನತೆಯ ನ್ಯಾಯಾಲಯದಿಂದ ದೇವರ ನ್ಯಾಯಾಲಯಕ್ಕೆ ವರ್ಗಾವಣೆಯಾಯಿತು.

## ಶ್ರೀ ಪದ್ಮಾವತಿದೇವಿ ನೀಡಿದ ತೀರ್ಪು

ಆ ಕ್ಷಣವೇ ಮಧ್ಯಾಹ್ನ ಹನ್ನೆರಡು ಗಂಟೆಯ ಸಮಯದಲ್ಲಿ ಬಹಿರಂಗ ಸಭೆಯಲ್ಲಿದ್ದ ಸಮಸ್ತ ಭಕ್ತರೂ ಪದ್ಮಾವತಿದೇವಿಯ ದೇವಾಲಯದೊಳಕ್ಕೆ ಸಡಗರದಿಂದ ಬಂದು ಸೇರಿದರು. ಜನಸಮೂಹದಲ್ಲಿ ಕುತೂಹಲ ತವಕ ತುಂಬಿ ತುಳುಕಾಡುತ್ತಿತ್ತು. ಎಲ್ಲರ ಸಮ್ಮುಖದಲ್ಲಿ ದೇವಿಯಲ್ಲಿ ಪ್ರಸಾದವನ್ನು ಕೇಳಲಾಯಿತು. ಎಲ್ಲರೂ ಅತ್ಯಂತ ತವಕ ಪಡುತ್ತಾ ದೇವರ ತೀರ್ಪಿಗಾಗಿ ಕಾಯುತ್ತಾ ನಿಂತರು. ಭಕ್ತರ ನಂಬಿಕೆಯಂತೆ ದೇವಿಗೆ ಇಚ್ಛೆಯಿದ್ದರೆ ಹೂವಿನ ಪ್ರಸಾದ ತಕ್ಷಣದಲ್ಲಿ ಅಥವಾ ಒಂದು ಸ್ತೋತ್ರವನ್ನು ಹೇಳುವುದರೊಳಗಾಗಿ ಆಗುತ್ತದೆ. ದೇವಿಗೆ ಇಚ್ಛೆಯಿಲ್ಲದಿದ್ದರೆ ಎಷ್ಟು ಹೊತ್ತು ಕಾದರೂ ಪ್ರಸಾದವಾಗುವುದಿಲ್ಲ. ಈ ಸಂದರ್ಭದಲ್ಲಿ ಜನರು ಸಾಕಷ್ಟು ಹೊತ್ತು ಕಾದ್ದರೂ ದೇವಿಯಿಂದ ಪಾರ್ಶ್ವಕೀರ್ತಿಗಳ ಪರವಾಗಿ ಪ್ರಸಾದವಾಗಲೇ ಇಲ್ಲ !

ಅಂತೂ ಕ್ಷೇತ್ರದೇವತೆ ಪ್ರಸಾದವನ್ನು ಕರುಣಿಸದೆ ಪಾರ್ಶ್ವಕೀರ್ತಿಗಳ ವಿರುದ್ಧ ತೀರ್ಪು ನೀಡಿದಳು. ದೇವಿಯ ಮಹಿಮೆ ಕಾರುಣ್ಯಗಳಲ್ಲಿ ನಂಬಿಕೆಯಿರುವ ಜನರಿಗೆಲ್ಲಾ ಈ ದಿನ ಚರಿತ್ರಾರ್ಹವಾದ ದಿನವಾಗಿ ಪರಿಣಮಿಸಿತು. ಪಾರ್ಶ್ವಕೀರ್ತಿಗಳ ಧರ್ಮಭ್ರಷ್ಟ ಆಚರಣೆಯಿಂದಾಗಿ ಕ್ಷೇತ್ರದ ಸತ್ಯದ ಬಗೆಗೆ ಸಂದೇಹ ವ್ಯಕ್ತಪಡಿಸುತ್ತಿದ್ದವರು ಪದ್ಮಾವತಿ ಮಾತೆ ನೀಡಿದ ತೀರ್ಪಿನಿಂದಾಗಿ ಆಕೆಯ ಅತಿಶಯವಾದ ಸತ್ಯಪಕ್ಷಪಾತವನ್ನು ಮನಸಾರೆ ಕೊಂಡಾಡಿದರು. ಬೆಳಗಾವಿ ಮತ್ತು ಶೇಡಬಾಳದ ಕಡೆಯ ಜನರಂತೂ ಕಪಟಸನ್ಯಾಸಿಸಾರ್ವಭೌಮರಿಗೆ ಹೊಂಬುಜದ ಮುಂದಿನ ಪಟ್ಟ ಸಿಗದೇ ಹೋದುದಕ್ಕಾಗಿ ಹರ್ಷಾನಂದಭರಿತರಾದರು. ರಥೋತ್ಸವಕ್ಕಾಗಿ ಸೇರಿದ್ದ ಜನರಲ್ಲಿ ಪದ್ಮಾವತಿಯ ಮೇಲೆ ಶ್ರದ್ಧೆ, ಭಕ್ತಿ ನಂಬಿಕೆಗಳು ನೂರ್ಮಡಿಯಾಗಿ ಉಕ್ಕಿ ಹರಿದುವು. ಪಿ. ಹೆಚ್. ಗುಂಜಾಳರಿಗಂತೂ ಆ ದಿನ ತಮ್ಮ ಜೀವಮಾನದಲ್ಲಿಯ ಅತ್ಯಂತ ಸಂತೋಷದ ದಿನವಾಗಿ ಪರಿಣಮಿಸಿತು. ಧರ್ಮವನ್ನು ಬಲಿಗೊಟ್ಟು ಧರ್ಮಪೀಠವನ್ನು ಆಕ್ರಮಿಸಲು ಪಿತೂರಿ ನಡೆಸಿದ್ದ ಪಾರ್ಶ್ವಕೀರ್ತಿಗಳಿಗಂತೂ ಈ ದಿನ ಶೇಡಬಾಳದ ತಮ್ಮ ಅಪಮಾನದ ದಿನವನ್ನು ನೆನಪಿಗೆ ತಂದಿತು.

ದೇವಿಯ ತೀರ್ಪಿನಿಂದಾಗಿ ಇಷ್ಟೆಲ್ಲಾ ಪರಿಣಾಮಗಳಾಗಿರುವಾಗ ಕ್ಷೇತ್ರದ ಪೀಠಾಧಿಕಾರಿಗಳಾದ ದೇವೇಂದ್ರಕೀರ್ತಿ ಸ್ವಾಮಿಗಳು ಇನ್ನೂ ದೊಡ್ಡದಾದ ಉಭಯ ಸಂಕಟದಲ್ಲಿ ಸಿಕ್ಕಿಬಿದ್ದಿದ್ದರು. ಕ್ಷೇತ್ರದೇವತೆ ನಿಮ್ಮನ್ನು ಇಷ್ಟಪಟ್ಟಿಲ್ಲ. ನೀವು ಹೊಂಬುಜ ಕ್ಷೇತ್ರವನ್ನು ತೆರವು ಮಾಡಿ ಎಂದು ಪಾರ್ಶ್ವಕೀರ್ತಿಗಳಿಗೆ ಹೇಳುವ ಧೈರ್ಯ ದೇವೇಂದ್ರಕೀರ್ತಿಗಳಿಗೆ ಆ ಸಮಯದಲ್ಲಿ ಬರಲಿಲ್ಲ! ಬದಲಾಗಿ ಅವರು ಪ್ರಸಾದ ಕೇಳಿದ ದಿನ ರಾತ್ರಿಯೇ ಸು. ಹನ್ನೊಂದು ಗಂಟೆಯ ಸಮಯದಲ್ಲಿ ಪಿ. ಹೆಚ್. ಗುಂಜಾಳರನ್ನು ಕಂಡು ಮತ್ತೆ ಪಾರ್ಶ್ವಕೀರ್ತಿಗಳ ಪರವಾಗಿ ಧ್ವನಿಯೆತ್ತಲು ತೊಡಗಿದರು. ಆದರೆ ಗುಂಜಾಳರು ಇದಾವುದಕ್ಕೂ ಗಮನಕೊಡಲಿಲ್ಲ.

## ದೈವಾಜ್ಞೆಯ ಉಪೇಕ್ಷೆ

ಪದ್ಮಾವತಿ ದೇವಿಯ ಪ್ರಸಾದ ತಮ್ಮ ಪರವಾಗಿ ಆಗದಿದ್ದರೂ, ಇದರಿಂದ ಪಾರ್ಶ್ವಕೀರ್ತಿಗಳೇನೂ ಎದೆಗುಂದಲಿಲ್ಲ. ಅಥವಾ ಹೊಂಬುಜವನ್ನು ಬಿಟ್ಟು ಹೊರಡಲೂ ಇಲ್ಲ. ಕ್ಷೇತ್ರಾಡಳಿತ ನಡೆಸುವ ತಮ್ಮ ಜವಾಬ್ದಾರಿಗೆ ರಾಜೀನಾಮೆ ನೀಡುವ ನೈತಿಕ ಸದ್ವರ್ತನೆಯೇನನ್ನೂ ಅವರು ತೋರಲಿಲ್ಲ. ಬದಲಾಗಿ ತಮ್ಮ ವಿರುದ್ಧ ಯಾವ ಪ್ರತಿಭಟನೆಯೂ ಆಗಿಲ್ಲದವರ ಹಾಗೆ ಸೋಗುಹಾಕಿಕೊಂಡು ತಾವಿನ್ನೂ ಹೊಂಬುಜ ಗುರುಪೀಠದ ಉತ್ತರಾಧಿಕಾರಿಯೇ ಎಂಬಂತೆ ದೈವಾಜ್ಞೆಯನ್ನೂ ಉಪೇಕ್ಷೆಮಾಡಿ ವರ್ತಿಸತೊಡಗಿದರು. ಕಾಲ ಕಳೆದಂತೆ ಹೊಂಬುಜದಲ್ಲಿ "ದೇವಿಯ ಪ್ರಸಾದ ಆಗದೇ ಹೋದರೂ ಚಿಂತೆಯೇನಿಲ್ಲ ಪಾರ್ಶ್ವಕೀರ್ತಿಗಳಿಗೇ ಮುಂದಿನ ಪಟ್ಟ

ಕಟ್ಟುತ್ತಾರಂತೆ" ಎಂಬ ಸುದ್ದಿ ಹಬ್ಬ ತೊಡಗಿತು. ದೇವೇಂದ್ರಕೀರ್ತಿಗಳೂ ಸಹ ಈ ಸುದ್ದಿಯನ್ನು ನಿರಾಕರಿಸಲು ಹೋಗಲಿಲ್ಲ. ಈ ಕರಾಳಸುದ್ದಿ ಪದ್ಮಾವತಿ ದೇವಿಯಲ್ಲಿ ಅಚಲವಾದ ನಂಬಿಕೆಯಿಟ್ಟವರನ್ನು ಚಿಂತೆಯ ಕಡಲಲ್ಲಿ ಮುಳುಗಿಸಿತು.

ಅಧ್ಯಾಯ : ಹನ್ನೊಂದು

# ಗುಳಕೊಪ್ಪದ ಪದ್ಮರಾಜಯ್ಯನವರ ಪ್ರತಿಭಟನೆ

ಹೊಂಬುಜದಲ್ಲಿ ರಥೋತ್ಸವದ ದಿನ ಉತ್ಸವ ಮುಗಿದ ಮೇಲೆ ಸಂಜೆ ಪದ್ಮಾವತಿದೇವಿಯ ಮೂರ್ತಿಯನ್ನು ಧ್ವಜಸ್ತಂಭದ ಪ್ರದಕ್ಷಿಣೆಯ ಮೂಲಕ ಗರ್ಭ ಗುಡಿಗೆ ಸಂಪ್ರದಾಯದ ವಿಧಿಗಳಿಗೆ ಅನುಗುಣವಾಗಿ ಕೊಂಡೊಯ್ಯುತ್ತಾರೆ. ಆ ಸಂದರ್ಭ ದಲ್ಲಿ ನಡೆಯುವ ಧ್ವಜಸ್ತಂಭದ ಪ್ರದಕ್ಷಿಣೆಯ ಕಾರ್ಯಕ್ರಮಗಳನ್ನು ನೋಡಲು ಭಕ್ತರು ಕಿಕ್ಕಿರಿದು ಸೇರುತ್ತಾರೆ. ವಂಶಪಾರಂಪರ್ಯದಿಂದ ಬಂದ ಸೇವೆಯ ಹಕ್ಕಿಗೆ ಅನುಗುಣವಾಗಿ ಪುರೋಹಿತರೊಬ್ಬರು ದೇವಿಯ ಮೂರ್ತಿಯನ್ನು ದೀರ್ಘಕಾಲದ ವರೆಗೂ ಕೈಯಲ್ಲಿ ಹಿಡಿದು ಧ್ವಜಸ್ತಂಭಕ್ಕೆ ಪ್ರದಕ್ಷಿಣೆ ಹಾಕುತ್ತಾರೆ. ಈ ಸಂದರ್ಭದಲ್ಲಿ ಪಂಚವಾದ್ಯಗಳ ಮತ್ತು ಸ್ತುತಿಗೀತೆಗಳ ಸೇವೆ ದೇವಿಗೆ ನಡೆಯುತ್ತದೆ. ದೇವಿಯನ್ನು ಗರ್ಭಗುಡಿಗೆ ಸ್ವಾಗತಿಸುವ ಸ್ತುತಿಗೀತೆಗಳ ನಡುವೆ ಸೂಕ್ತಸುತ್ತುಗಳ ಪ್ರದಕ್ಷಿಣೆ ಬಂದಂತೆ ಧ್ವಜಸ್ತಂಭದ ಹತ್ತಿರವೇ ನಿಂತಿರುವ ದೇವಿಯ ಮುಖ್ಯಭಕ್ತರೊಬ್ಬರು ಸ್ತುತಿಪದ್ಯ ಗಳನ್ನು ಹಾಡಿ ಮಂತ್ರಗಳನ್ನು ಹೇಳಿ ದೇವಿಯನ್ನು ಗರ್ಭಗುಡಿಗೆ ಬಿಜಯ ಮಾಡು ವಂತೆ ಪ್ರಾರ್ಥಿಸುತ್ತಾರೆ.

ಪಂಚವಾದ್ಯಗಳ ಸೇವೆ ಮುಗಿದ ನಂತರ ದೇವಿಯ ಮೂರ್ತಿಯನ್ನು ಹಿಡಿದಿ ರುವ ಪುರೋಹಿತರು ಪ್ರದಕ್ಷಿಣೆಯನ್ನು ನಿಲ್ಲಿಸಿ ಪದ್ಮಾವತಿ ದೇವಿಯ ದೇವಾಲಯಕ್ಕೆ ಅಭಿಮುಖವಾಗಿ ನಿಲ್ಲುತ್ತಾರೆ. ಈ ಸಮಯಕ್ಕೆ ಮೂರ್ತಿಯಲ್ಲಿ ಪದ್ಮಾವತಿದೇವಿಯ ಆವಾಹನೆಯಾಗಿ[1] ಪುರೋಹಿತರು ದೇವಿಯ ಪ್ರಭಾವಲಯಕ್ಕೆ ಸಿಕ್ಕವರಂತೆ ಆವೇಶಭರಿತ ರಾಗಿ ಕಂಪಿಸತೊಡಗುತ್ತಾರೆ. ಈ ಹೊತ್ತಿಗೆ ಅಲ್ಲಿ ಕಿಕ್ಕಿರಿದಿರುವ ಭಕ್ತ ಸಮೂಹದಲ್ಲಿ ದೇವಿಯ ಮೇಲಿನ ಭಕ್ತಿ ಉತ್ಸಾಹಗಳು ತಾರಕಕ್ಕೇರಿ ಜೈಘೋಷ ಮುಗಿಲು ಮುಟ್ಟು

---

1. ಈ ನಂಬಿಕೆ ಪರಂಪರೆಯಿಂದಲೂ ಜನರಲ್ಲಿ ಇದೆ.

ತ್ತದೆ. ಮೂರ್ತಿಯನ್ನು ಹಿಡಿದಿರುವ ಪುರೋಹಿತರು ಆವೇಶದಿಂದ ಕಂಪಿಸುತ್ತಲೇ ದೇವಾಲಯಗಳ ಮೆಟ್ಟಿಲುಗಳ ಕಡೆ ಹೆಜ್ಜೆಯಿಡುತ್ತಿರುವಾಗ ಆ ಕೂಡಲೇ ಸ್ತುತಿಪದ್ಯ ಮತ್ತು ಮಂತ್ರಗಳನ್ನು ಹೇಳುತ್ತಾ ದೇವಿಯನ್ನು ಸ್ವಾಗತಿಸುತ್ತಿದ್ದ ಮುಖ್ಯ ಭಕ್ತರು ಪುರೋಹಿತರಿಗೆ ಅಡ್ಡಲಾಗಿ ನಿಂತು ಮಂತ್ರೋಚ್ಚಾರಣೆ ಮಾಡುತ್ತಾರೆ. ಈ ಮಂತ್ರೋಚ್ಚಾರದಿಂದ ಪುರೋಹಿತರು ಆವೇಶದ ಸ್ಥಿತಿಯಲ್ಲಿಯೇ ರಭಸದಿಂದ ಹಿಂತಿರುಗಿ ಧ್ವಜಸ್ತಂಭಕ್ಕೆ ವೇಗವಾಗಿ ಮೂರು ಸುತ್ತು ಪ್ರದಕ್ಷಿಣೆ ಹಾಕಿ ಬಂದು ಆ ರಭಸದಲ್ಲಿಯೇ ದೇವಸ್ಥಾನದ ಮೆಟ್ಟಿಲುಗಳನ್ನೇರಿ ಒಳಕ್ಕೆ ಧಾವಿಸುತ್ತಾರೆ. ದೇವಿಯ ಮೂರ್ತಿ ಪುನಃ ಗರ್ಭಗುಡಿಯನ್ನು ಸೇರುತ್ತದೆ. ಮೂರ್ತಿಯನ್ನು ದೀರ್ಘಕಾಲದವರೆಗೆ ಹಿಡಿದುಕೊಂಡಿದ್ದ ಪುರೋಹಿತರು ಎಚ್ಚರತಪ್ಪಿ ಮಲಗಿಬಿಡುತ್ತಾರೆ. ಸ್ವಲ್ಪ ಹೊತ್ತಿನ ನಂತರ ಚೇತರಿಸಿಕೊಳ್ಳುತ್ತಾರೆ. ಧ್ವಜಸ್ತಂಭದ ಈ ಸುತ್ತು ಸೇವೆಯ ಕಾರ್ಯಕ್ರಮಗಳನ್ನು ವೀಕ್ಷಿಸುವುದು ಒಂದು ರೋಮಾಂಚಕಾರಿಯಾದ ಅವಿಸ್ಮರಣೀಯ ಅನುಭವ.

ಪುರೋಹಿತರು ಮೂರ್ತಿಯನ್ನು ಹಿಡಿದು ಆವೇಶಕ್ಕೆ ಸಿಕ್ಕಿ ದೇವಸ್ಥಾನದ ಕಡೆ ಹೊರಟುನಿಂತಾಗ, ಸ್ತುತಿಪದ್ಯ ಮಂತ್ರಗಳನ್ನು ಹೇಳುವ ಮುಖ್ಯಭಕ್ತರು ಅವರ ಮುಂದೆ ನಿಂತು ಮಂತ್ರಪಠಣೆ ಮಾಡಿದಾಗ ಪುರೋಹಿತರು ಮೂರ್ತಿಯ ಸಮೇತ ಧ್ವಜಸ್ತಂಭವನ್ನು ಮೂರು ಸಾರಿ ಬಳಸಿ ಬರಬೇಕಾದುದು ಬಹಳ ಮುಖ್ಯ. ಹೀಗೆ ಬಂದಾಗಲೇ ಕ್ಷೇತ್ರಕ್ಕೆ ಕ್ಷೇಮವೆಂದು ಪ್ರತೀತಿ. ಪುರೋಹಿತರು ಮೂರು ಪ್ರದಕ್ಷಿಣೆ ಹಾಕದೆ ಮೂರ್ತಿಯ ಸಮೇತ ಹಾಗೆಯೇ ದೇವಾಲಯದೊಳಕ್ಕೆ ಹೊರಟುಹೋದರೆ ಅದರಿಂದ ಕ್ಷೇತ್ರಕ್ಕೆ ಕೇಡು ಸಂಭವಿಸುತ್ತದೆಂದು ಪ್ರತೀತಿ[1].

ರಥೋತ್ಸವದ ಸಂಜೆಯ ಈ ಸುತ್ತುಸೇವೆಯ ಕಾರ್ಯಕ್ರಮದುದ್ದಕ್ಕೂ ಕ್ಷೇತ್ರದ ಸ್ವಾಮೀಜಿಯವರು ಹಾಜರಿರುತ್ತಾರೆ. ಪಾರ್ಶ್ವಕೀರ್ತಿವರ್ಣಿಗಳು ಹೊಂಬುಜದಲ್ಲಿ ನೆಲೆಸಿರುವ ಈ ಸಮಯದಲ್ಲೆಲ್ಲಾ ಸುತ್ತುಸೇವೆಯ ಸ್ತುತಿಪದ್ಯಗಳನ್ನು ಹಾಡಿ ಮಂತ್ರೋಚ್ಚಾರ ಮಾಡಿ ದೇವಿಯನ್ನು ಕ್ರಮವಾಗಿ ಗರ್ಭಗುಡಿಗೆ ಸ್ವಾಗತಿಸುವ ಮುಖ್ಯಭಕ್ತರಾಗಿ ವಂಶಪರಂಪರೆಯಿಂದ ದೇವಿಗೆ ಸೇವೆಸಲ್ಲಿಸುತ್ತಾ ಬಂದಿದ್ದವರು ಗುಳಕೊಪ್ಪ (ಗುರುಗಳ ಕೊಪ್ಪ)ದ ಶ್ರೀ ಪದ್ಮರಾಜಯ್ಯ ಎಂಬುವರು. ಇವರ ಜನ್ಮದಿನ

---

1. 1971ರ ರಥೋತ್ಸವ ಕಾಲದಲ್ಲಿ ಸುತ್ತುಸೇವೆಗಾಗಿ, ಮಂತ್ರೋಚ್ಚಾರಣೆ ಮಾಡುವ ಮುಖ್ಯ ಭಕ್ತರು ಕಾರಣಾಂತರದಿಂದ ಬರಲಿಲ್ಲ. ಬೇರೊಬ್ಬರು ಆ ಕಾರ್ಯ ಮಾಡಿದರು. ಮೂರು ಮುಖ್ಯ ಪ್ರದಕ್ಷಿಣೆಗಳಾಗದೆ ದೇವಿ ಗರ್ಭಗುಡಿ ಸೇರಿದಳು. ಇದಾದ ನಾಲ್ಕು ತಿಂಗಳಲ್ಲಿ ಪೀಠಾಧಿಕಾರಿಗಳಾದ ದೇವೇಂದ್ರಕೀರ್ತಿಗಳು ದುರ್ಮರಣಕ್ಕೀಡಾದರು (ತಾ. 30-7-71ರಲ್ಲಿ)

ತಾ. 22-11-1922 ದೇವಿಯ ವಿಗ್ರಹ ಹಿಡಿಯುತ್ತಿದ್ದವರು ಶ್ರೀ ಆದಿರಾಜ ಇಂದ್ರ ಎಂಬುವರು.

## ಬೆಕ್ಕಿಗೆ ಗಂಟೆ ಕಟ್ಟಿದ್ದು

ಅವಲಕ್ಕಿ ಮನೆತನದವರೆಂದು ಹೆಸರಾದ ಗುರುಗಳ ಕೊಪ್ಪದ ಅಣ್ಣಪ್ಪಯ್ಯನವರ ಮಕ್ಕಳಾದ ಪದ್ಮರಾಜಯ್ಯನವರು ಪದ್ಮಾವತಿಯ ನಿಷ್ಠಾವಂತ ಭಕ್ತರು. ಕ್ಷೇತ್ರದೇವಿಯ ಮೇಲೆ ಎಲ್ಲಿಲ್ಲದ ನಂಬಿಕೆ ಇವರ ಮನೆತನದ ನಿಜವಾದ ಸ್ವತ್ತಾಗಿತ್ತು. ದೈವದ ಬಗ್ಗೆ ಇವರಿಗಿದ್ದ ಅಚಲವಾದ ಶ್ರದ್ಧೆ ಇವರನ್ನು ಬೆರಳು ಮಡಿಸದಂತಹ ಚಾರಿತ್ರವಂತರನ್ನಾಗಿ ಸಿತ್ತು. ವೃತ್ತಿಯಲ್ಲಿ ರೈತರಾದ ಇವರು ನಿಜವಾಗಿ ಬೆಳೆಸುತ್ತಿದ್ದುದು ಧರ್ಮದ ಬೆಳಸನ್ನು, ಇಂತಹ ಪದ್ಮರಾಜಯ್ಯನವರು ಪಾರ್ಶ್ವಕೀರ್ತಿಗಳು ಕ್ಷೇತ್ರದಲ್ಲಿ ಮಾಡು ತ್ತಿದ್ದ ಅನಾಚಾರಗಳನ್ನು ತಿಳಿದು ತೀವ್ರವಾಗಿ ಅಸಮಾಧಾನಗೊಂಡರು.

ಪಾರ್ಶ್ವಕೀರ್ತಿಗಳು ಮುದ್ದಮ್ಮನೊಂದಿಗೆ ಅನೈತಿಕ ಸಂಪರ್ಕವಿಟ್ಟುಕೊಂಡಿರುವ ಸುದ್ದಿ ಮೊದಮೊದಲು ಎಲ್ಲರಿಗೂ ತಿಳಿದಂತೆ ಇವರಿಗೂ ತಿಳಿಯಿತು. ಪದ್ಮರಾಜಯ್ಯ ನವರು ಮೊದಲು ಇದನ್ನು ನಂಬಲಿಲ್ಲ. ಏಕೆಂದರೆ ಆ ಸಮಯದಲ್ಲಿ ಹೊಂಬುಜದ ಒಂದು ವರ್ಗದ ಜನರು ಮಠದ ಆಡಳಿತದಲ್ಲಿ ತಮಗೆ ಪಾಲಿಲ್ಲವೆಂಬ ಕಾರಣಕ್ಕಾಗಿ ಮಠವನ್ನೂ, ಮಠದವರನ್ನೂ ದೂರುತ್ತಿದ್ದರು. ಅವರು ಬಹುಶಃ ಇಂತಹ ಸುದ್ದಿಯನ್ನು ಸೃಷ್ಟಿಸಿ ಹರಡಿರಬಹುದು ಎಂದು ಪದ್ಮರಾಜಯ್ಯನವರು ಭಾವಿಸಿದರು. ಆದರೆ ಪದ್ಮರಾಜಯ್ಯನವರಲ್ಲಿ ಈ ಭಾವನೆ ಹೆಚ್ಚು ದಿನ ಉಳಿಯಲಿಲ್ಲ. ಇವರಿಗೆ ಚೆನ್ನಾಗಿ ಪರಿಚಯವಿರುವ ನಂಬಿಕಾರ್ಹರಾದ ಊರಿನ ಕೆಲವರು ಇವರ ಹತ್ತಿರ ಬಂದು ಪಾರ್ಶ್ವಕೀರ್ತಿಗಳ ಅನೈತಿಕ ಸಂಬಂಧ ಪೂರ್ಣವಾಗಿ ನಿಜವೆಂದೂ, ಅವರಿಬ್ಬರೂ ಏಕಾಂತ ಸ್ಥಳದಲ್ಲಿ ಸೇರಿದ್ದನ್ನು ತಾವು ಕಣ್ಣಾರೆ ಕಂಡಿರುವುದಾಗಿಯೂ ಪ್ರಮಾಣ ಮಾಡಿ ಹೇಳಿದರು. ಹೀಗೆ ಹೇಳಿದವರು ಮುದ್ದಮ್ಮನ ಪಂಗಡಕ್ಕೆ ಸೇರಿದವರೇ ಆಗಿದ್ದರು.

ಪದ್ಮರಾಜಯ್ಯನವರಿಗೆ ಈ ಸುದ್ದಿ ಹೇಳಿದ ಪ್ರತ್ಯಕ್ಷದರ್ಶಿಗಳು ಕಡೆಯಲ್ಲಿ "ಅಯ್ಯಾ ಅವರೆ ನೀವಾದರೂ ಈ ಅನ್ಯಾಯವನ್ನು ನಿಲ್ಲಿಸಬಾರದೆ ? ನಾಳೆ ನಿಮ್ಮ ಮಠದ ಗತಿ ಏನು ? ಮಹಾತಾಯಿ ಇದನ್ನೆಲ್ಲಾ ನೋಡಿಕೊಂಡು ಹೇಗೆ ಸುಮ್ಮ ನಿದ್ದಾಳೆ ! ಏನು ಇದೆಲ್ಲಾ ?" ಎಂದು ತಮ್ಮ ಕಳವಳವನ್ನು ವ್ಯಕ್ತಪಡಿಸಿದರು. ಈ ಪ್ರತ್ಯಕ್ಷದರ್ಶಿಗಳು ತಮ್ಮ ಸುರಕ್ಷತೆಯ ಕಡೆ ಗಮನ ಹರಿಸುವುದನ್ನು ಮರೆಯಲಿಲ್ಲ. ಪದ್ಮರಾಜಯ್ಯನವರಲ್ಲಿ ಈ ಬಗ್ಗೆ ಪ್ರಾರ್ಥಿಸಿಕೊಂಡರು : "ಅಯ್ಯಾವ್ರೆ ದೊಡ್ಡಸ್ವಾಮಿ ಗಳ ಹತ್ತಿರ, ನಾವು ಈ ವಿಚಾರವನ್ನು ಹೇಳಿದೆವು ಎಂದು ದಯವಿಟ್ಟು ನಮ್ಮನ್ನು

ಮುಂದೆ ತರಬೇಡಿ. ನಮ್ಮ ಹೆಸರನ್ನೇನಾದರೂ ನೀವು ಹೇಳಿದರೆ ಅವರು ನಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಕಂಬಕ್ಕೆ ಕಟ್ಟಿ ಹೊಡೆಸುತ್ತಾರೆ. ನೀವೇನಾದರೂ ನಮ್ಮ ಹೆಸರನ್ನು ಹೇಳಿಬಿಟ್ಟರೆ ನಾವು ಕೆರೆಬಾವಿ ನೋಡಿಕೊಳ್ಳುತ್ತೇವೆ.'' ಪದ್ಮರಾಜಯ್ಯನವರು ಈ ಮನವಿಗೆ ಒಪ್ಪಿ ಅವರನ್ನು ಕಳುಹಿಸಿಕೊಟ್ಟರು.

ಪದ್ಮರಾಜಯ್ಯನವರು ಈ ವಿಷಯದ ಬಗ್ಗೆ ತಮ್ಮ ಆಪ್ತಮಿತ್ರರಾಗಿದ್ದ ಡಾಕಪ್ಪ ಎಂಬುವರೊಂದಿಗೆ ಚರ್ಚಿಸಿದರು. ಯಾರು ಏನೇ ಹೇಳಲಿ ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಿಸಿ ನೋಡು ಎಂಬಂತೆ ಪಾರ್ಶ್ವಕೀರ್ತಿಗಳ ಚಲನವಲನಗಳ ಕಡೆ ಕಣ್ಣಿಡಬೇಕೆಂದು ಇಬ್ಬರೂ ತೀರ್ಮಾನಕ್ಕೆ ಬಂದರು. ಪದ್ಮರಾಜಯ್ಯನವರು ಮುತ್ತಿನ ಕೆರೆಯ ಆಚೆಯ ಭಾಗದಲ್ಲಿರುವ ತಮ್ಮ ಜಮೀನಿನಲ್ಲಿಯೇ ವಸತಿ ಮಾಡಿಕೊಂಡು ಇದ್ದುದರಿಂದ ಪತ್ತೇದಾರಿ ಕೆಲಸ ಮಾಡಲು ಡಾಕಪ್ಪನವರೇ ಸಿದ್ಧರಾದರು. ಡಾಕಪ್ಪನವರ ಮನೆ ಮಠಕ್ಕೆ ಸಮೀಪದಲ್ಲಿಯೇ ಇದ್ದಿತು.

ಪಾರ್ಶ್ವಕೀರ್ತಿಗಳು ಬೆಳಿಗ್ಗೆ ತಮ್ಮ ಭೋಜನ ಮುಗಿಸಿ ಕ್ಷೇತ್ರದ ಎಡಪಕ್ಕದಲ್ಲಿರುವ ಛತ್ರವನ್ನು ಬಳಸಿ ಗುಡ್ಡದ ಕಡೆಯ ಕಾಡಿಗೆ ಹೋಗುತ್ತಿದ್ದರು. ಮಠಕ್ಕೆ ಸಮೀಪದಲ್ಲಿರುವ ಮನೆಯೊಂದರಲ್ಲಿ ಕೊಟ್ಟಿಗೆ ಕೆಲಸ ಮಾಡುತ್ತಿದ್ದ ಮುದ್ದಮ್ಮ ಪಾರ್ಶ್ವಕೀರ್ತಿಗಳು ಹೋದುದನ್ನು ಗಮನಿಸಿ ಸ್ವಲ್ಪಹೊತ್ತು ಬಿಟ್ಟು ಅವರನ್ನು ಹಿಂಬಾಲಿಸುತ್ತಿದ್ದಳು. ಡಾಕಪ್ಪನವರು ಇವರಿಬ್ಬರ ಚಲನವಲನಗಳ ಮೇಲೆ ಅನೇಕ ದಿನಗಳ ಕಾಲ ನಿಗಾಇಟ್ಟು ಕೆಲವು ಸಂದರ್ಭಗಳಲ್ಲಿ ಹಿಂಬಾಲಿಸಿ ಇವರಿಬ್ಬರ ಅನೈತಿಕ ಸಂಪರ್ಕದ ಸುದ್ದಿ ಸುಳ್ಳಲ್ಲ, ಖಂಡಿತವಾಗಿಯೂ ಸತ್ಯ ಎಂಬುದನ್ನು ಪ್ರತ್ಯಕ್ಷವಾಗಿ ಕಂಡು ಖಚಿತಪಡಿಸಿಕೊಂಡರು. ಕ್ಷೇತ್ರದ ಹಿಂದಿನ ಗುಡ್ಡದಮೇಲೆ ಜೀರ್ಣಾವಸ್ಥೆಯಲ್ಲಿದ್ದ ಬಸದಿ ಪಾರ್ಶ್ವಕೀರ್ತಿಗಳು ಮತ್ತು ಮುದ್ದಮ್ಮ ಪದೇ ಪದೇ ಸಂಧಿಸುವ ಸ್ಥಳವಾಗಿತ್ತು. ಗುಡ್ಡದಿಂದ ತುಸುದೂರದ ಜನವಸತಿಯಿಲ್ಲದ ಕಾಡಿನ ಪ್ರದೇಶಗಳೂ ಇವರ ವಿಹಾರ ಸ್ಥಳಗಳಾಗಿದ್ದವು.

ಡಾಕಪ್ಪನವರು ಪದ್ಮರಾಜಯ್ಯನವರಿಗೆ ತಮ್ಮ ಪತ್ತೇದಾರಿ ಕೆಲಸದ ಫಲಿತಾಂಶಗಳನ್ನೆಲ್ಲಾ ತಿಳಿಸಿದರು. ಪದ್ಮರಾಜಯ್ಯನವರು ಇನ್ನು ಸುಮ್ಮನೆ ಕೂರುವ ಹಾಗಿರಲಿಲ್ಲ. ಈ ಹಿಂದೆ ಪಿ. ಹೆಚ್. ಗುಂಜಾಳರ ವಿರೋಧದಿಂದಾಗಿ ದೇವಿಯಲ್ಲಿ ಪ್ರಸಾದ ಕೇಳಿ ಅದು ಆಗದೇ ಇದ್ದರೂ ಸಹ ಪಾರ್ಶ್ವಕೀರ್ತಿಗಳು ಮೊಂಡುಬಿದ್ದು ಕ್ಷೇತ್ರದಲ್ಲಿಯೇ ಉಳಿದುಕೊಂಡು ಗುರುಪೀಠಕ್ಕಾಗಿ ಒಂದೇ ಸಮನೆ ಪಿತೂರಿ ಮಾಡುತ್ತಿರುವುದು ಪದ್ಮರಾಜಯ್ಯನವರಿಗೆ ಮೊದಲೇ ಬೇಸರ ತರಿಸಿತ್ತು. ಇನ್ನು ಈ ಮುದ್ದು-ಕೀರ್ತಿಗಳ ರಾಸಲೀಲೆಯನ್ನು ಸಹಿಸಿಕೊಂಡು ತೆಪ್ಪಗಿರುವುದು ಹೇಗೆ ? ಹೀಗಾದರೆ ನಮ್ಮ ಪೂಜೆ-ಸೇವೆ ಇತ್ಯಾದಿಗಳೆಲ್ಲಾ ಜನರ ದೃಷ್ಟಿಯಲ್ಲಿ ಕೇವಲ ನಾಟಕವಾಗಿ ಬಿಡು

ತ್ತದಲ್ಲ ! ಎಂದು ಚಿಂತಿಸಿ ಪಾರ್ಶ್ವಕೀರ್ತಿಗಳ ಪ್ರಣಯಲೀಲೆಯನ್ನು ದೇವೇಂದ್ರ ಕೀರ್ತಿಗಳಲ್ಲಿ ಅರಿಕೆ ಮಾಡುವ ನಿರ್ಧಾರ ಮಾಡಿದರು. ಈ ಧೈರ್ಯವನ್ನು ಇದು ವರೆಗೂ ಯಾರೂ ತೋರಿಸಿರಲಿಲ್ಲ. ಪದ್ಮರಾಜಯ್ಯನವರು ಈ ಸಾಹಸವನ್ನು ಮಾಡಲು ಡಾಕಪ್ಪನವರು ಅವರಿಗೆ ಬೆಂಗಾವಲಾಗಿ ನಿಂತರು. ಈ ವಿಷಯವನ್ನು ದೇವೇಂದ್ರಕೀರ್ತಿ ಗಳ ಗಮನಕ್ಕೆ ತರುವುದಕ್ಕೆ ಮುಂಚೆ ಪದ್ಮಾವತಿ ದೇವಿಯಲ್ಲಿ ಈ ಬಗ್ಗೆ ಪ್ರಸಾದ ಕೇಳಿ ಮುಂದುವರಿಯಬೇಕೆಂದು ಇಬ್ಬರೂ 1962ನೇ ವರ್ಷದ ನವರಾತ್ರಿ ಸಮಯದಲ್ಲಿ ಒಂದು ದಿನ ದೇವಿಯಲ್ಲಿ ಪ್ರಸಾದ ಕೇಳಲು ಹೋದರು.

ಪಾರ್ಶ್ವಕೀರ್ತಿಗಳು ಕ್ಷೇತ್ರದಲ್ಲಿ ಮುದ್ದಮ್ಮನೊಂದಿಗೆ ಕೂಡಿಕೊಂಡು ವ್ಯಭಿಚಾರ ಮಾಡುತ್ತಿರುವುದು ಸತ್ಯವೆ ? ಅಸತ್ಯವೆ ? ಎಂಬ ಪ್ರಶ್ನೆಯನ್ನು ಮುಂದಿಟ್ಟು ಪ್ರಸಾದ ಕೇಳಿದರು. ವ್ಯಭಿಚಾರ ಮಾಡುತ್ತಿರುವುದು ಸತ್ಯ ಎಂದು ದೇವಿಯ ಪ್ರಸಾದ ವಾಯಿತು. ಪ್ರಸಾದವಾಗುತ್ತಿದ್ದಂತೆಯೇ ಪದ್ಮರಾಜಯ್ಯ ಮತ್ತು ಡಾಕಪ್ಪನವರ ಕಣ್ಣುಗಳಲ್ಲಿ ಧಾರಾಕಾರವಾಗಿ ಕಣ್ಣೀರು ಸುರಿಯಿತು. ಕ್ಷೇತ್ರಕ್ಕೆ ಪಾರ್ಶ್ವಕೀರ್ತಿಗಳಿಂದ ಒದಗಿರುವ ದುರವಸ್ಥೆಗಾಗಿ ಇಬ್ಬರೂ ಪರಿತಾಪ ಪಟ್ಟರು. ಇನ್ನು ಈ ವಿಷಯವನ್ನು ದೇವೇಂದ್ರಕೀರ್ತಿಗಳಿಗೆ ತಿಳಿಸಲು ತಡಮಾಡಬಾರದೆಂದು ಪದ್ಮರಾಜಯ್ಯನವರು ಭಾವಿಸಿ ದರು. ಆದರ ತಿಳಿಸುವ ಮಾರ್ಗ ಹೇಗೆ ? ಇಬ್ಬರೂ ಒಟ್ಟಿಗೇ ಹೋಗುವುದೇ ಬೇಡವೆ ? ಪದ್ಮರಾಜಯ್ಯನವರು ಇದಕ್ಕೆ ಒಂದು ಹಾದಿ ಹುಡುಕಿದರು—ಮೊದಲು ಡಾಕಪ್ಪನವರನ್ನು ಕಳುಹಿಸಿ ಸುದ್ದಿಯನ್ನು ತಿಳಿಸುವುದು. ಆಗ ಸ್ವಾಮೀಜಿ ಇದಕ್ಕೆ ಸಾಕ್ಷ್ಯ ಕೇಳುತ್ತಾರೆ. ಆಗ ಡಾಕಪ್ಪನವರು 'ಸ್ವಾಮಿಗಳೆ ಈ ಸಂಗತಿಯ ಬಗ್ಗೆ ನನಗಿಂತಲೂ ಪದ್ಮರಾಜಯ್ಯನವರಿಗೆ ಹೆಚ್ಚು ವಿಷಯ ಗೊತ್ತು ಅವರನ್ನು ಕೇಳಿದರೆ ಎಲ್ಲಾ ತಿಳಿಯುತ್ತದೆ' ಎಂದು ಹೇಳಬೇಕು. ಆಗ ಸ್ವಾಮಿಗಳು ಪದ್ಮರಾಜಯ್ಯ ನವರನ್ನು ಕರೆಸುತ್ತಾರೆ. ಈ ಅವಕಾಶ ಉಪಯೋಗಿಸಿಕೊಂಡು ಪದ್ಮರಾಜಯ್ಯನವರು ಎಲ್ಲವನ್ನು ಹೇಳಿ ಪಾರ್ಶ್ವಕೀರ್ತಿಗಳಂಥವರಿಗೆ ಏನೇ ಆದರೂ ಪಟ್ಟವಾಗಕೂಡದು ಎಂದು ಪ್ರತಿಭಟಿಸಬೇಕು– ಈ ಉಪಾಯದೊಂದಿಗೆ ಪದ್ಮರಾಜಯ್ಯನವರು ಬೆಕ್ಕಿಗೆ ಗಂಟೆ ಕಟ್ಟಲು ಮುಂದಾದರು.

ಪದ್ಮರಾಜಯ್ಯನವರ ಉಪಾಯ ಸುಲಭವಾಗಿ ಸಿದ್ಧಿಸಿತು. ಜೊತೆಗೆ ಸುದ್ದಿ ಯನ್ನು ಮೊದಲು ತಿಳಿಸಿದ ಡಾಕಪ್ಪನವರಿಗೆ ದೇವೇಂದ್ರಕೀರ್ತಿಗಳಿಂದ ಬೈಗಳದ ಸುರಿ ಮಳೆಯೂ ಆಯಿತು. ನಿರೀಕ್ಷೆಯಂತೆ ಪದ್ಮರಾಜಯ್ಯನವರಿಗೆ ದೇವೇಂದ್ರಕೀರ್ತಿಗಳಿಂದ ಕರೆಯೂ ಬಂತು. ಪದ್ಮರಾಜಯ್ಯನವರು ಸ್ವಾಮಿಗಳನ್ನು ಕಂಡು ತಮಗೆ ಸುದ್ದಿ ಮೊದಲು ಬಂದದ್ದನ್ನೂ, ನೋಡಿದವರು ಹೇಳಿದ್ದನ್ನೂ, ಊರಿನ ಜನರು ಮಾತ ನಾಡಿಕೊಳ್ಳುತ್ತಿರುವುದನ್ನೂ, ಮಠದ ಬಗ್ಗೆ ಇತರ ಜನಗಳು ಪರಿಹಾಸ್ಯ ಮಾಡು

ತ್ತಿರುವುದನ್ನೂ, ಇದನ್ನೇ ನೆಪಮಾಡಿಕೊಂಡು ಕೆಲವರು ಪಾರ್ಶ್ವಕೀರ್ತಿಗಳಿಂದ ಹಣ ಕಸಿಯುತ್ತಿರುವುದನ್ನು ಮುಂತಾಗಿ ಎಲ್ಲವನ್ನು ಸಾದ್ಯಂತವಾಗಿ ವಿವರಿಸಿ ಹೇಳಿದರು. ಕಡೆಯಲ್ಲಿ ಇಂತಹ ಪಾರ್ಶ್ವಕೀರ್ತಿಗಳಿಗೆ ಗುರುಪೀಠದ ಮುಂದಿನ ಪಟ್ಟ ಆಗಬಾರದು ಎಂದು ತಮ್ಮ ಪ್ರತಿಭಟನೆಯನ್ನು ಸ್ಪಷ್ಟವಾಗಿ ತಿಳಿಸಿದರು. ಪದ್ಮರಾಜಯ್ಯನವರು ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದು 1962ನೇ ವರ್ಷದ ಅಕ್ಟೋಬರ್ ತಿಂಗಳ ಕಾಲದಲ್ಲಿ. ಈ ಸಮಯದಲ್ಲಿ ಪಾರ್ಶ್ವಕೀರ್ತಿಗಳು ಹೊಂಬುಜ ಕ್ಷೇತ್ರ ಬಿಟ್ಟು ಸಂಚಾರದಲ್ಲಿದ್ದರು.

ಪದ್ಮರಾಜಯ್ಯನವರಿಂದ ಎಲ್ಲವನ್ನು ಕೇಳಿಕೊಂಡ ದೇವೇಂದ್ರಕೀರ್ತಿಗಳು ಡಾಕಪ್ಪನವರ ಮೇಲೆ ರೇಗಿದಂತೆ ಇವರ ಮೇಲೆ ರೇಗಲು ಹೋಗಲಿಲ್ಲ. ಚಿಂತೆಯ ಕಡಲಿನಲ್ಲಿ ಮುಳುಗಿ ಹೋದರು. ಕಡೆಗೆ ಪದ್ಮರಾಜಯ್ಯನವರ ಕಡೆ ಗಮನಹರಿಸಿ ಈ ವಿಚಾರವನ್ನು ತಿಳಿಸಿದ ವ್ಯಕ್ತಿಗಳ ಹೆಸರನ್ನು ತಮಗೆ ಹೇಳುವಂತೆ ಒತ್ತಾಯಪಡಿಸಿದರು ಪದ್ಮರಾಜಯ್ಯನವರು ಆ ವ್ಯಕ್ತಿಗಳ ಹಿತದೃಷ್ಟಿಯಿಂದ ಇದಕ್ಕೆ ಒಪ್ಪಲಿಲ್ಲ. ಕಡೆಗೆ ದೇವೇಂದ್ರಕೀರ್ತಿಗಳು ಇವರ ಕಡೆ ಗಮನ ಹರಿಸುವುದಾಗಿ ಹೇಳಿ ಪದ್ಮರಾಜಯ್ಯನವರನ್ನು ಕಳುಹಿಸಿ ಕೊಟ್ಟರು.

ನಾಲ್ಕಾರು ದಿನಗಳು ಕಳೆದ ಮೇಲೆ ದೇವೇಂದ್ರಕೀರ್ತಿಗಳು ಪಾರ್ಶ್ವಕೀರ್ತಿಗಳ ಪ್ರಕರಣದ ವಿಚಾರವಾಗಿ ಕ್ಷೇತ್ರದೇವತೆ ಪದ್ಮಾವತಿಯಲ್ಲಿ ಪ್ರಸಾದ ಬೇಡಿದರು. ಸ್ವಾಮಿಗಳು ಹೀಗೆ ಪ್ರಸಾದ ಬೇಡುವ ಸಮಯದಲ್ಲಿ ಪದ್ಮರಾಜಯ್ಯನವರು ಆಕಸ್ಮಿಕವಾಗಿ ಅಲ್ಲಿಗೆ ಬಂದು ಸ್ವಾಮಿಗಳನ್ನು ಕೂಡಿಕೊಂಡರು. ಪಾರ್ಶ್ವಕೀರ್ತಿಗಳ ಅನೈತಿಕ ವ್ಯವಹಾರ ಸತ್ಯ ಎಂದು ದೇವೇಂದ್ರಕೀರ್ತಿಗಳಿಗೂ ಸಹ ದೇವಿ ಪ್ರಸಾದದ ಮೂಲಕ ತಿಳಿಸಿದಳು, ಆ ದಿವಸ ಪ್ರಕೃತಿಯಲ್ಲಿ ಗುಡುಗು ಸಿಡಿಲು ಮಳೆಗಳ ಆರ್ಭಟ ಬಹಳ ಹೆಚ್ಚಿತ್ತು. ಪ್ರಸಾದ ಕೇಳಿ ದೇವೇಂದ್ರಕೀರ್ತಿಗಳು ಮಠಕ್ಕೆ ಹಿಂತಿರುಗುತ್ತಿದ್ದಾಗ ವಿದ್ಯುಚ್ಛಕ್ತಿ ಸಂಪರ್ಕ ಕಡಿದು ಹೋಯಿತು. ಟಾರ್ಚ್ ಹಿಡಿದಿದ್ದ ಪದ್ಮರಾಜಯ್ಯನವರು ಬೆಳಕು ಬಿಟ್ಟು ದಾರಿ ತೋರಿಸುತ್ತಾ ಸ್ವಾಮಿಗಳನ್ನು ಮಠಕ್ಕೆ ಸೇರಿಸಿದರು. ಮನೆಗೆ ಹೊರಟ ಪದ್ಮರಾಜಯ್ಯನವರನ್ನು ಸ್ವಾಮಿಗಳು ಸ್ವಲ್ಪ ಹೊತ್ತು ಕುಳಿತುಕೊಳ್ಳುವಂತೆ ಹೇಳಿ ಅವರ ಮುಂದೆ ಪಾರ್ಶ್ವಕೀರ್ತಿಗಳ ಸ್ತ್ರೀವ್ಯಾಮೋಹದ ಖಂಡನೆ ಮಾಡತೊಡಗಿದರು. ಇದರ ಅಂಗವಾಗಿ ಸ್ವಾಮಿಗಳು ಪದ್ಮರಾಜಯ್ಯನವರಿಗೆ, ಸ್ತ್ರೀವ್ಯಾಮೋಹದಿಂದ ಬುದ್ಧಿ ಕಳೆದುಕೊಂಡು ಹೊಳೆಯಲ್ಲಿ ತುಂಬುಪ್ರವಾಹದಲ್ಲಿ ಕೊಚ್ಚಿಹೋಗುತ್ತಿರುವ ಹೆಣವನ್ನು ಮರದದಿಮ್ಮಿ ಎಂದು ಭಾವಿಸಿ ಅದರ ಸಹಾಯದಿಂದ ಹೊಳೆದಾಟಿ, ಸೌದೆಗಾದರೂ ಉಪಯೋಗವಾಗಲಿ ಎಂದು ಅದನ್ನು ಹೊತ್ತು ತಂದು ತನ್ನ ಸೂಳೆಯ ಮನೆಮುಂದೆ ಹಾಕಿದ ಕಾಮಭ್ರಾಂತಿಗೊಳಗಾದ ಒಬ್ಬ ಮನುಷ್ಯನ ಕಥೆಯನ್ನು

ಹೇಳಿದರು. ಪಾರ್ಶ್ವಕೀರ್ತಿಯನ್ನು ಯೋಗ್ಯನೆಂದು ನಂಬಿ ಒಳಗೆ ಸೇರಿಸಿದ್ದಕ್ಕೆ ತಮಗೂ ಕಳಂಕ ತಂದುಬಿಟ್ಟನಲ್ಲಾ ಎಂದು ಪ್ರಲಾಪಿಸಿದರು. ಕಡೆಗೆ ಪದ್ಮರಾಜಯ್ಯ ನವರು ಸ್ವಾಮಿಗಳ ಮಾತಿನಿಂದ ಹರ್ಷತಾಳಿ, ಅವರು ಪಾರ್ಶ್ವಕೀರ್ತಿಗಳಿಗೆ ವಿರುದ್ಧ ವಾಗಿ ನಿಲ್ಲಬಹುದು ಎಂಬ ನಿರೀಕ್ಷೆಯಿಂದ ಕೂಡಿ ಸ್ವಾಮಿಗಳನ್ನು ಬೀಳ್ಕೊಂಡು ತಮ್ಮ ಮನೆ ಸೇರಿದರು.

**ಕಿರುಕುಳ**

ಪದ್ಮರಾಜಯ್ಯನವರು ಪಾರ್ಶ್ವಕೀರ್ತಿಗಳ ವಿಚಾರವಾಗಿ ಪ್ರತಿಭಟನೆಯನ್ನು ದಾಖಲು ಮಾಡುವ ಮುನ್ನ ಸಾಕಷ್ಟು ಜನರು ಇವರಿಗೆ ತಾವಾಗಿಯೇ ಬೆಂಬಲ ನೀಡಿದ್ದರು. ಆದರೆ ವಿರೋಧವನ್ನು ಸ್ವಾಮಿಗಳ ಮುಂದೆ ಬಹಿರಂಗಪಡಿಸಿದ ಮೇಲೆ ಬೆಂಬಲ ಸೂಚಿಸಿದ್ದವರೆಲ್ಲಾ ಹಿಂದಕ್ಕೆ ಸರಿದು ಬಿಟ್ಟರು. ಡಾಕಪ್ಪನವರೊಬ್ಬರು ಮಾತ್ರ ಕಡೆಯವರೆಗೂ ನಿಂತರು. ಪಾರ್ಶ್ವಕೀರ್ತಿಗಳ ಅಂಕೆಯಲ್ಲಿದ್ದ ಕೆಲವರು ಪದ್ಮರಾಜಯ್ಯನವರನ್ನು ಹೆದರಿಸಲಾರಂಭಿಸಿದರು. ''ಇದೆಲ್ಲಾ ನಿಮಗೆ ಏಕೆ ಬೇಕಿತ್ತು? ನಿಮ್ಮ ಪಾಡಿಗೆ ನೀವು ಸುಮ್ಮನಿರಬಾರದಿತ್ತೆ? ಮಾಡುವವರ ಪಾಪ ಆಡುವವರ ಬಾಯಲ್ಲಿ ಎಂಬಂತೆ ಇದರಿಂದ ನಿಮಗೇ ತೊಂದರೆಯಾಗುತ್ತದೆ ! ಅವರು ಮಾಡಿದ ಪಾಪವನ್ನು ಅವರು ಅನುಭವಿಸುತ್ತಾರೆ. ಇದನ್ನು ಕೇಳಲು ನೀವ್ಯಾರು? ನಿಮ್ಮನ್ನು ಪಾರ್ಶ್ವಕೀರ್ತಿಗಳು ಸುಮ್ಮನೆ ಬಿಡುವುದಿಲ್ಲ. ಅವರಿಗೆ ಬೇಕಾದಷ್ಟು ಪ್ರಭಾವವಿದೆ. ನಿಮ್ಮನ್ನು ಜೈಲಿಗೆ ಹಾಕಿಸುತ್ತಾರೆ. ಬೀದೀಲಿ ಹೋಗುವ ಮಾರಿಯನ್ನು ಏಕೆ ಒಳ ಕ್ಕೆ ಸೇರಿಸಿಕೊಳ್ಳುತ್ತೀರಿ ? ನಿಮಗೆ ಗ್ರಹಚಾರ ನೆಟ್ಟಗಿಲ್ಲ ! ಸುಮ್ಮನೆ ನಿಮ್ಮ ಹೇಳಿಕೆ ಯನ್ನು ಹಿಂದಕ್ಕೆ ಪಡೆಯಿರಿ'' ಎಂದು ಮುಂತಾದ ಮಾತುಗಳು ಕೇಳಬರತೊಡಗಿದವು. ಆ ಕಾಲದಲ್ಲಿ ಮಠದ ಏಜಂಟರಾಗಿದ್ದ ಹಾಸನದ ಹೆಚ್. ಡಿ. ಪುಟ್ಟಯ್ಯನವರಂತೂ ಪದ್ಮರಾಜಯ್ಯನವರನ್ನು ಸಾಕಷ್ಟು ಹೆದರಿಸಿ ಮಾನಸಿಕ ಯಾತನೆಯನ್ನುಂಟು ಮಾಡಿ ದರು. ಈ ಹಿಂದೆ ಪಾರ್ಶ್ವಕೀರ್ತಿಗಳ ಸ್ತ್ರೀವ್ಯಾಮೋಹವನ್ನು ಕಥೆ ಹೇಳಿ ಖಂಡಿಸಿ ಪದ್ಮರಾಜಯ್ಯನವರ ಪರವೆಂಬಂತೆ ಮಾತನಾಡಿದ್ದ ದೇವೇಂದ್ರಕೀರ್ತಿಗಳು ಈ ಸಂದರ್ಭದಲ್ಲಿ ಏಕೋ ಪದ್ಮರಾಜಯ್ಯನವರ ನೆರವಿಗೆ ಬರಲಿಲ್ಲ.

ಪದ್ಮರಾಜಯ್ಯನವರು ಈ ಸಮಯದಲ್ಲೆಲ್ಲಾ ಸಾಕಷ್ಟು ನೋವನ್ನು ಅನುಭವಿಸಿ ದರು. ಎಷ್ಟೋ ರಾತ್ರಿಗಳು ನಿದ್ರೆಯಿಲ್ಲದೆ ಕಳೆದವು. ಇಷ್ಟಾದರೂ ತಾವು ಮಾಡಿದ್ದು ತಪ್ಪೆಂದು ಇವರಿಗೆ ಯಾವ ಕ್ಷಣದಲ್ಲೂ ಅನ್ನಿಸಲಿಲ್ಲ. ಪದ್ಮಾವತಿ ದೇವಿಯ ಮೇಲೆ ಭಾರಹಾಕಿ ತಮ್ಮ ಪ್ರಾಣವನ್ನೆ ಪಣವಾಗಿಟ್ಟು ಎಲ್ಲಾ ಬಗೆಯ ಕಿರುಕುಳವನ್ನು ಸಹಿಸಿಕೊಂಡರು. ಕ್ಷೇತ್ರದ ಹಿರಿಮೆಯನ್ನು ರಕ್ಷಿಸುವುದಕ್ಕಾಗಿ ಪದ್ಮಾವತಿ ದೇವಿಯೇ ಪದ್ಮರಾಜಯ್ಯನವರನ್ನು ತನ್ನ ಸಾಧನವನ್ನಾಗಿ ಮಾಡಿಕೊಂಡಂತೆ ಈ ಸಂದರ್ಭದಲ್ಲಿ ಅವರು ಸ್ಥಿರಮನಸ್ಕರಾಗಿ ನಿಂತರು.

ಪದ್ಮರಾಜಯ್ಯನವರು "ಈ ಜನ್ಮವಿರುವವರೆಗೆ ಎಂದಿಗೂ ಅನ್ಯಾಯಕ್ಕೆ ಖಂಡಿತಾ ತಲೆಬಾಗುವುದಿಲ್ಲ" ಎಂದು ಧೀರೋದಾತ್ತವಾಗಿ ಸೆಟೆದು ನಿಂತ ಸಂದರ್ಭದಲ್ಲಿ ಪಿ. ಹೆಚ್. ಗುಂಜಾಳರು ಪದ್ಮರಾಜಯ್ಯನವರ ಧರ್ಮಪಕ್ಷಪಾತ, ಅದಕ್ಕಾಗಿ ಇರುವ ಅವರ ವಜ್ರಹೃದಯದ ಹಠ ಇವುಗಳನ್ನು ಕಂಡು ಹೆಮ್ಮೆಪಟ್ಟರು. ಕೇವಲ ಮೂರನೇ ತರಗತಿಯನ್ನು ಮಾತ್ರ ಕಲಿತ ಸರಳ ಸ್ವಭಾವದ ಈ ಮನುಷ್ಯನಲ್ಲಿ ಬ್ರಹ್ಮಾಂಡವನ್ನೇ ಅಲುಗಿಸುವ ನೈತಿಕಬಲ ಮನೋಬಲ ಅಡಗಿದೆಯಲ್ಲಾ ಎಂದು ಆಶ್ಚರ್ಯಪಟ್ಟರು. ಇಂತಹ ಧರ್ಮಿಷ್ಟರ ಸದಿಚ್ಛೆಗೆ ಬೆಂಬಲ ಸೂಚಿಸದೆ ಕುಪಾರ್ಶ್ವಕೀರ್ತಿಗಳ ಜಾರತನದ ಮಾಯಾಜಾಲಗಳಿಗೆ ಬೆಂಬಲ ಸೂಚಿಸಬೇಕೆ ? ಎಂದುಕೊಂಡ ಗುಂಜಾಳರು ಪದ್ಮರಾಜಯ್ಯನವರಿಗೆ ಆಪದ್ಬಾಂಧವರಂತೆ ಕಷ್ಟ ಕಾಲದಲ್ಲಿ ಸಂಪೂರ್ಣ ನೆರವು ನೀಡುವ ಭರವಸೆ ನೀಡಿದರು. "ಪದ್ಮರಾಜಯ್ಯನವರೆ ನೀವು ಹೆದರಬೇಡಿ. ನಿಮ್ಮ ಬೆಂಬಲಕ್ಕೆ ನಾನಿದ್ದೇನೆ. ಪಾರ್ಶ್ವಕೀರ್ತಿಗಳ ಕಡೆಯವರು ನಿಮ್ಮನ್ನು ಜೈಲಿಗೆ ಹಾಕಿಸುತ್ತೇವೆಂದು ಬೆದರಿಸುತ್ತಿರುವುದು ಅವರು ಮಾಡಿರುವ ನೀಚಕಾರ್ಯಗಳನ್ನು ಸಮರ್ಥಿಸುತ್ತದೆ. ನಿಮ್ಮನ್ನು ಜೈಲಿಗೆ ಕಳುಹಿಸುವುದು ಯಾರಿಗೂ ಸಾಧ್ಯವಿಲ್ಲದ ಕೆಲಸ. ಜೈಲಿಗೆ ಹೋಗಲು ನೀವೇನು ಪಾರ್ಶ್ವಕೀರ್ತಿಗಳ ಹಾಗೆ ಕೊಲೆ ವ್ಯಭಿಚಾರಗಳನ್ನು ಮಾಡಿದವರೇ ! ಒಂದು ಪಕ್ಷ ಅವರೇನಾದರೂ ಕುತಂತ್ರಗಳನ್ನು ಮಾಡಿ ನಿಮ್ಮನ್ನು ಜೈಲಿಗೆ ದೂಡಿಸಿದರೂ ನೀವು ಹೆದರಬೇಕಾಗಿಲ್ಲ. ನಿಮ್ಮನ್ನು ಯಾವ ಜೈಲಿಗೆ ಹಾಕಿಸಿದರೂ ಅಲ್ಲಿಂದ ಬಿಡಿಸಿ ತಂದು ಮನೆ ಸೇರಿಸುವ ಜವಾಬ್ದಾರಿ ಪದ್ಮಾವತಿದೇವಿಯ ಸಾಕ್ಷಿಯಾಗಿಯೂ ನನ್ನದು. ನೀವು ಗೊಡ್ಡುಬೆದರಿಕೆಗಳಿಗೆಲ್ಲಾ ಅಂಜಿ ಹೆಜ್ಜೆಯನ್ನು ಹಿಂದಕ್ಕೆ ತೆಗೆಯಬೇಡಿ. ಆದರೆ ಒಂದು ವಿಷಯವನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊಳ್ಳಿ. ಯಾವ ಸಂದರ್ಭದಲ್ಲಿಯೂ ನೀವು ಖಾಲಿ ಕಾಗದಗಳ ಮೇಲೆ ದಸ್ಕತ್ತು ಹಾಕಬೇಡಿ" ಎಂಬ ಸಂಪೂರ್ಣ ಬೆಂಬಲದ ಮಾತುಗಳು ಗುಂಜಾಳರಿಂದ ಹೊರಟವು. ನ್ಯಾಯಮೂರ್ತಿಯೊಬ್ಬರಿಂದ ಬಂದ ನೆರವಿನ ಆಶ್ವಾಸನೆಯ ಮಾತುಗಳು ಪದ್ಮರಾಜಯ್ಯನವರಿಗೆ ಮರಳುಗಾಡಿನಲ್ಲಿ ನೀರಿಗಾಗಿ ಅಲೆದು ಬೆಂಡಾದವನಿಗೆ ಅಮೃತದ ರಸಪಾನವನ್ನು ಮಾಡಿಸಿದಂತೆ ಸಂತೃಪ್ತಿ ತಂದುವು.

## ರಥೋತ್ಸವ ಕಾಲದ ಪಿತೂರಿ

ಪಾರ್ಶ್ವಕೀರ್ತಿಗಳ ವಿರುದ್ಧ ಪಿ. ಹೆಚ್. ಗುಂಜಾಳ್ ಮತ್ತು ಪದ್ಮರಾಜಯ್ಯನವರ ವಿರೋಧ ಏನೇ ಇರಲಿ ಪಾರ್ಶ್ವಕೀರ್ತಿಗಳಂತೂ ಹೊಂಬುಜದ ಮಠಾಧಿಪತಿಯಾಗುವ ತಮ್ಮ ಆಸೆಯನ್ನು ಬಿಟ್ಟುಕೊಡಲಿಲ್ಲ. ವಿರೋಧ ಗರಿಗೂಡಿದಂತೆ ಆದಷ್ಟು ಬೇಗನೆ ಉತ್ತರಾಧಿಕಾರಿತ್ವವನ್ನು ಅಧಿಕೃತವಾಗಿ ದಕ್ಕಿಸಿಕೊಳ್ಳುವ ಪ್ರಯತ್ನ ನೂರ್ಮಡಿಯಾಯಿತು. ದೇವೇಂದ್ರಕೀರ್ತಿಗಳಂತೂ ಈ ವಿಚಾರದಲ್ಲಿ ನಿರ್ಣಾಯಕವಾದ ತೀರ್ಮಾನವನ್ನು ತೆಗೆದುಕೊಳ್ಳುವಲ್ಲಿ ವಿಫಲರಾಗಿದ್ದರು. ಉಭಯ ಸಂಕಟ

ಇದಕ್ಕೆ ಕಾರಣವಾಗಿತ್ತು. ಪಾರ್ಶ್ವಕೀರ್ತಿಗಳು ಇನ್ನು ಮುಂದೆಯೂ ತ್ರಿಶಂಕು ಸ್ಥಿತಿಯಲ್ಲಿ ಉಳಿದುಕೊಳ್ಳಲು ಇಷ್ಟಪಡದೆ ತಮ್ಮ ಉತ್ತರಾಧಿಕಾರತ್ವವನ್ನು ಅಧಿಕೃತವಾಗಿ ಘೋಷಿಸಲು ದೇವೇಂದ್ರಕೀರ್ತಿಗಳ ಮೇಲೆ ಒಂದೇ ಸಮನೆ ಒತ್ತಡ ಹೇರಿದರು. ಕಡೆಗೆ ದೇವೇಂದ್ರಕೀರ್ತಿಗಳು ಈ ವಿಚಾರದಲ್ಲಿ ಪದ್ಮರಾಜಯ್ಯನವರು ವ್ಯಕ್ತಪಡಿಸಿರುವ ಪ್ರತಿಭಟನೆಯನ್ನು ಮೊದಲು ನಿವಾರಿಸಿಕೊಳ್ಳುವಂತೆ ಪಾರ್ಶ್ವಕೀರ್ತಿಗಳಿಗೆ ಸೂಚಿಸಿದರು.

ಪಾರ್ಶ್ವಕೀರ್ತಿಗಳಿಗೆ ತಮ್ಮ ಬಗ್ಗೆ ಪದ್ಮರಾಜಯ್ಯನವರು ಮಾಡಿರುವ ಆಪಾದನೆಗಳ ವಿಚಾರ ಚೆನ್ನಾಗಿ ತಿಳಿದಿದ್ದರೂ ಪದ್ಮರಾಜಯ್ಯನವರನ್ನು ನೇರವಾಗಿ ಎದುರಿಸುವ ಧೈರ್ಯವನ್ನು ಇದುವರೆಗೂ ತೋರಿರಲಿಲ್ಲ. ಈಗ ಅವರನ್ನು ವಿಚಾರಿಸಿಕೊಳ್ಳಲು ಸಿದ್ಧರಾದರು. ಪಾರ್ಶ್ವಕೀರ್ತಿಗಳು ಪದ್ಮರಾಜಯ್ಯನವರನ್ನು ತಮ್ಮ ಇಷ್ಟಕ್ಕೆ ಮಣಿಸಲು 1963ನೇ ವರ್ಷದ ರಥೋತ್ಸವ ಕಾಲದಲ್ಲಿ ಪಿತೂರಿಯೊಂದನ್ನು ನಿಯೋಜಿಸಿದರು. ಇದಕ್ಕೆ ಅನುಗುಣವಾಗಿ ರಥೋತ್ಸವವಾದ ಮೂರನೆಯ ದಿವಸ ಪದ್ಮರಾಜಯ್ಯನವರನ್ನು ಕೆಣಕಬೇಕೆಂದು ತೀರ್ಮಾನಿಸಿದರು.

ರಥೋತ್ಸವದ ಮೂರನೆಯ ದಿನವೇ ಪದ್ಮರಾಜಯ್ಯನವರನ್ನು ಕೆಣಕಬೇಕೆಂಬುದಕ್ಕೆ ನಿರ್ದಿಷ್ಟವಾದ ಕಾರಣಗಳಿದ್ದವು. ರಥೋತ್ಸವಕ್ಕೆ ಮುಂಚೆ ಕೆಣಕಿದರೆ ಪದ್ಮರಾಜಯ್ಯನವರು ತಮ್ಮ ರಥ ಕಟ್ಟಿಸುವ ಮತ್ತು ರಥೋತ್ಸವದ ದಿನದ ಸಂಜೆಯ ಸುತ್ತುಸೇವೆಯ ಕಾರ್ಯಕ್ರಮಗಳಿಗೆ ಬರದೆ ತಪ್ಪಿಸಿಕೊಳ್ಳುವ ಸಾಧ್ಯತೆಯಿತ್ತು. ವಂಶಪರಂಪರೆಯಿಂದ ಬಂದ ಸೇವೆಯ ಹಕ್ಕುದಾರರನ್ನು ತಪ್ಪಿಸಿ ಸುತ್ತುಸೇವೆಯ ಕಾರ್ಯಕ್ರಮಗಳನ್ನು ನಡೆಸಿದರೆ ಅದು ಕ್ರಮದಂತೆ ನಡೆಯದೇ ಇರಬಹುದಾಗಿತ್ತು. ಅಥವಾ ಸುತ್ತುಸೇವೆಯ ಜವಾಬ್ದಾರಿಯನ್ನು ಬೇರೆಯವರು ನಿರ್ವಹಿಸಲು ಒಪ್ಪದೆ ಇರಬಹುದಿತ್ತು. ಹೀಗಾದ ಪಕ್ಷದಲ್ಲಿ ರಥೋತ್ಸವಕ್ಕೆ ಮತ್ತು ಸಂಜೆಯ ಸುತ್ತುಸೇವೆಗೆ ಏನಾದರೂ ತೊಡಕುಗಳುಂಟಾಗಿ ಇದೆಲ್ಲಾ ಭಕ್ತಸಮೂಹದ ಗಮನಕ್ಕೆ ಬಂದು ಭಕ್ತರ ಆಕ್ರೋಶ ಇವುಗಳಿಗೆಲ್ಲಾ ಮೂಲಕಾರಣರಾದ ಪಾರ್ಶ್ವಕೀರ್ತಿಗಳ ಮೇಲೆ ತಿರುಗಬಹುದಾಗಿತ್ತು! ಈ ಎಲ್ಲಾ ನಿರೀಕ್ಷೆಗಳಿಂದಾಗಿ ರಥೋತ್ಸವವಾದ ಮೂರನೆಯ ದಿನವಂದೇ ಪದ್ಮರಾಜಯ್ಯನವರನ್ನು ಕೆಣಕಲು ಪಾರ್ಶ್ವಕೀರ್ತಿಗಳು ಸಂಚು ಮಾಡಿದರು. ಅದಕ್ಕಾಗಿ ಸಕಲ ಏರ್ಪಾಟುಗಳನ್ನೂ ಸಹ ಮಾಡಿಕೊಂಡರು.

## ಅಧ್ಯಾಯ : ಹನ್ನೆರಡು

# ಹೊಂಬುಜದಿಂದ ಪಲಾಯನ

ಹೊಂಬುಜದ ರಥೋತ್ಸವದ ಸಮಯದಲ್ಲೆಲ್ಲಾ ಪಾರ್ಶ್ವಕೀರ್ತಿಗಳು ಹೊಂಬುಜ ದಲ್ಲಿ ಉಳಿದುಕೊಳ್ಳುತ್ತಿರಲಿಲ್ಲ. ಬೆಳಗಾಂ ಕಡೆಯ ಜನರು ತಮ್ಮ ಬಗ್ಗೆ ಗಲಾಟೆ ಯೆಬ್ಬಿಸಬಹುದೆಂಬ ನಿರೀಕ್ಷೆಯಿಂದ ಅವರು ಹೊಂಬುಜದ ವಸತಿಯನ್ನು ತಾತ್ಕಾಲಿಕ ವಾಗಿ ತೆರವು ಮಾಡುತ್ತಿದ್ದರು ಆದರೆ 1963ರ ರಥೋತ್ಸವ ಕಾಲದಲ್ಲಿ ಪದ್ಮ ರಾಜಯ್ಯನವರ ವಿರುದ್ಧ ಪಿತೂರಿ ಮಾಡುವ ಉದ್ದೇಶದಿಂದಾಗಿಯೇ ಅವರು ಹೊಂಬುಜದಲ್ಲಿ ಆ ಸಮಯದಲ್ಲಿ ಹಾಜರಿರಲು ನಿರ್ಧಾರ ಮಾಡಿದರು.

ರಥೋತ್ಸವಕ್ಕೆ ಮುಂಚಿನ ದಿನಗಳಲ್ಲಿ ಬೆಳಗಾಂನಲ್ಲಿ ಬಿಡಾರ ಹೂಡಿದ್ದ ಪಾರ್ಶ್ವ ಕೀರ್ತಿಗಳು ರಥೋತ್ಸವದ ಹೊತ್ತಿಗೆ ಹೊಂಬುಜಕ್ಕೆ ಬರುವ ವ್ಯವಸ್ಥೆಯಾಗಿತ್ತು. ರಥೋತ್ಸವ ಇನ್ನೊಂದು ವಾರವಿದೆಯೆಂಬ ಸಮಯದಲ್ಲಿ ಪದ್ಮರಾಜಯ್ಯನವರನ್ನು ಬೆದರಿಸುವ ತಂತ್ರ ಪಾರ್ಶ್ವಕೀರ್ತಿಗಳ ಕಡೆಯವರಿಂದ ಪ್ರಾರಂಭವಾಯಿತು. ಮಠದ ಏಜಂಟರಾಗಿದ್ದ ಹೆಚ್. ಡಿ. ಪುಟ್ಟಯ್ಯನವರು ಪದ್ಮರಾಜಯ್ಯನವರನ್ನು ಕಂಡು ಕಂಡಾಗ "ಇದೆಲ್ಲಾ ನಿಮಗೆ ಯಾಕೆ ಬೇಕಾಗಿತ್ತು. ಪಾರ್ಶ್ವಕೀರ್ತಿಗಳು ರಥೋತ್ಸವಕ್ಕೆ ಬರು ತ್ತಾರೆ. ಬಂದಾಗ ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಪ್ರೂಫ್ ಕೊಡು ಎಂದು ಕೇಳುತ್ತಾರೆ. ಆಗ ಏನ್ಮಾಡ್ತೀರಿ? ಏನು ಬಂದರೂ ನೀವೊಬ್ಬರೇ ಅನುಭವಿಸ ಬೇಕಾಗುತ್ತದೆ." ಎಂದು ಮುಂತಾಗಿ ಅವರನ್ನು ಹಣ್ಣು ಮಾಡಲು ಪ್ರಯತ್ನಿಸು ತ್ತಿದ್ದರು. ಪುಟ್ಟಯ್ಯನವರು ಹೀಗೆ ಹೇಳುತ್ತಿದ್ದುದು ದೇವೇಂದ್ರಕೀರ್ತಿಗಳ ಗಮನಕ್ಕೂ ಬರುತ್ತಿತ್ತು. ಆದರೆ ಅವರು ಪದ್ಮರಾಜಯ್ಯನವರ ಬೆಂಬಲಕ್ಕೇನೂ ಬರುತ್ತಿರಲಿಲ್ಲ. ರಥೋತ್ಸವ ಇನ್ನು ಮೂರು ನಾಲ್ಕು ದಿನಗಳಿವೆ ಎನ್ನುವಾಗ ಪುಟ್ಟಯ್ಯನವರ ಚುಚ್ಚು ಮಾತುಗಳ ಪುರಾಣ ಹೆಚ್ಚಾಯಿತು.

### ಹೊಂಚಾಟ

ರಥೋತ್ಸವ ಮೂರುದಿನಗಳ ನಂತರ ಇದೆ ಎನ್ನುವಾಗ ಪಾರ್ಶ್ವಕೀರ್ತಿಗಳು ಒಂದು ವ್ಯಾನಿನಲ್ಲಿ ಬೆಳಗಾಂ ಕಡೆಯಿಂದ ಬಂದಿಳಿದರು. ಬರುವಾಗ ಜೊತೆಯಲ್ಲಿ ಆ ಕಡೆಯ ಆರೆಂಟು ಮಂದಿಯನ್ನು ಕರೆದುಕೊಂಡು ಬಂದಿದ್ದರು. ಇವರೆಲ್ಲಾ ಪಾರ್ಶ್ವ ಕೀರ್ತಿಗಳ ಬೆಂಗಾವಲಿನ ಪಡೆಯವರೆಂದು ನೋಡಿದವರಿಗೆ ತಿಳಿಯುತ್ತಿತ್ತು. ಪದ್ಮ ರಾಜಯ್ಯನವರು ಪಾರ್ಶ್ವಕೀರ್ತಿಗಳಿಂದಾಗಿ ಉಂಟಾಗಬಹುದಾದ ಪ್ರಸಂಗವನ್ನು ಎದು

ರಿಸಲು ಸಿದ್ಧರಾಗಿಯೇ ಇದ್ದರು. ಸಹಾಯಕ್ಕಿರಲಿ ಎಂದು ಮಿತ್ರರಾದ ಡಾಕಪ್ಪನವರನ್ನು ಸದಾ ಜೊತೆಯಲ್ಲಿಯೇ ಇಟ್ಟುಕೊಂಡು ಓಡಾಡತೊಡಗಿದರು.

ದೇವಸ್ಥಾನದ ಆವರಣದಲ್ಲಿ ಪದ್ಮರಾಜಯ್ಯನವರು ಕಂಡುಬಂದಾಗ ಪಾರ್ಶ್ವಕೀರ್ತಿಗಳು ಅವರನ್ನು ದೃಷ್ಟಿಸಿ ನೋಡುತ್ತಿದ್ದರು. ಈ ಸಂದರ್ಭಗಳಲ್ಲೆಲ್ಲಾ ಪದ್ಮರಾಜಯ್ಯನವರು ಡಾಕಪ್ಪನವರೊಂದಿಗೆ ಕೂಡಿಯೇ ಇರುತ್ತಿದ್ದರು. ಈ ದಿನಗಳಲ್ಲೆಲ್ಲಾ ಪಾರ್ಶ್ವಕೀರ್ತಿಗಳು ಹೊಂಚುಹಾಕಿ ದೃಷ್ಟಿಸಿ ನೋಡುವುದೊಂದನ್ನು ಬಿಟ್ಟು ಪದ್ಮರಾಜಯ್ಯನವರನ್ನು ನೇರವಾಗಿ ಮಾತುಕತೆಗೆ ಎಳೆಯಲು ಪ್ರಯತ್ನಿಸಲಿಲ್ಲ. ಈ ಹೊಂಚಾಟಕ್ಕೆ ರಥೋತ್ಸವ ಮುಗಿದ ಮಾರನೆಯ ದಿನ ತೆರೆಬೀಳುವಂತಾಯಿತು.

### ಪಾರ್ಶ್ವಕೀರ್ತಿಗಳ ಗೂಂಡಾಗಿರಿ

ಪಾರ್ಶ್ವಕೀರ್ತಿಗಳು ರಥೋತ್ಸವ ದಿನದ ಕಾರ್ಯಕ್ರಮಗಳು ಮುಗಿಯುವುದನ್ನೇ ಕಾಯುತ್ತಿದ್ದರು. ಅಲ್ಲಿಗೆ ಪದ್ಮರಾಜಯ್ಯನವರ ಸುತ್ತುಸೇವೆಯ ಜವಾಬ್ದಾರಿಯೂ ಮುಗಿದಂತಾಗುತ್ತಿತ್ತು. ಈ ಕಾರ್ಯಕ್ರಮವೂ ಮುಗಿಯಿತು. ಯಾವ ತೊಡಕೂ ಇಲ್ಲದೆ ಪದ್ಮಾವತಿದೇವಿ ಕಡೆಯ ಮೂರು ಪ್ರದಕ್ಷಿಣೆಗಳನ್ನು ಹಾಕಿ ಗರ್ಭಗುಡಿಗೆ ಬಿಜಯ ಮಾಡಿದಳು.

ರಥೋತ್ಸವ ಮುಗಿದ ಮಾರನೆಯ ದಿನ ಬಂದಿತು. ಪಾರ್ಶ್ವಕೀರ್ತಿಗಳು ಪದ್ಮರಾಜಯ್ಯನವರನ್ನು ಕೆಣಕಲು ಸಿದ್ಧರಾದರು. ಆ ದಿನ ಬೆಳಗ್ಗೆ ಸುಮಾರು ಹನ್ನೆರಡು ಗಂಟೆಯ ಸಮಯದಲ್ಲಿ ಪದ್ಮಾವತಿ ದೇವಿಯ ದೇವಸ್ಥಾನದ ಮುಂಭಾಗದಲ್ಲಿ ಪಾರ್ಶ್ವನಾಥ ತೀರ್ಥಂಕರರ ಅಭಿಷೇಕಕ್ಕಾಗಿ ಕಲಶಗಳ ಹರಾಜು ನಡೆಯುತ್ತಿತ್ತು. ಸೊಲ್ಲಾಪುರದ ವರ್ಧಮಾನ ಶಾಸ್ತ್ರಿಗಳು ದೇವೇಂದ್ರಕೀರ್ತಿಗಳ ಸಮ್ಮುಖದಲ್ಲಿ ಹರಾಜು ನಡೆಸುತ್ತಿದ್ದರು ಆ ಹೊತ್ತಿಗೆ ಪದ್ಮರಾಜಯ್ಯನವರು ಅಲ್ಲಿಗೆ ಬಂದು ಸ್ವಲ್ಪ ದೂರದಲ್ಲಿ ಪಾರ್ಶ್ವನಾಥ ಸ್ವಾಮಿ ದೇವಾಲಯದ ಎಡಪಕ್ಕದ ಗೋಡೆಯಲ್ಲಿರುವ ಬಾಗಿಲಬಳಿ ನಿಂತುಕೊಂಡರು. ದೇವೇಂದ್ರಕೀರ್ತಿಗಳು ಪದ್ಮರಾಜಯ್ಯ ಬಂದಿದ್ದನ್ನು ನೋಡಿ ಎದ್ದು ಮಠದ ಒಳಕ್ಕೆ ಹೋದರು.

ದೇವೇಂದ್ರಕೀರ್ತಿಗಳು ಸ್ಥಳಬಿಟ್ಟು ಹೊರಟುದನ್ನು ನೋಡಿ ಪದ್ಮರಾಜಯ್ಯನವರಿಗೆ ಮುಂದೇನೋ ಘಟನೆ ನಡೆಯಲಿದೆ ಅನ್ನಿಸಿತು. ಆ ದಿನ ಡಾಕಪ್ಪನವರು ಜೊತೆಯಲ್ಲಿರಲಿಲ್ಲ. ಪಿ. ಹೆಚ್. ಗುಂಜಾಳರು ಹಿಂದಿನ ದಿನವೇ ರಥೋತ್ಸವ ಮುಗಿಸಿಕೊಂಡು ಹೊರಟುಹೋಗಿದ್ದರು. ಪದ್ಮರಾಜಯ್ಯ ಏನಾಗುತ್ತೋ ಆಗಲಿ ಎಂದು ದೇವಿಯ ಮೇಲೆ ಭಾರಹಾಕಿ ಅಲ್ಲಿಯೇ ನಿಂತರು. ಸ್ವಲ್ಪ ಹೊತ್ತಿನಲ್ಲಿಯೇ ಅದುವರೆಗೂ ಹರಾಜಿನ ಸ್ಥಳದಲ್ಲಿ ಇರದಿದ್ದ ಪಾರ್ಶ್ವಕೀರ್ತಿಗಳು ಮಠದೊಳಗಿನಿಂದ

ಬಂದರು. ದೇವೇಂದ್ರಕೀರ್ತಿಗಳು ಮಠದೊಳಗಡೆಯೇ ನಿಂತರು. ಹರಾಜಿನ ಸ್ಥಳಕ್ಕೆ ಬಂದ ಪಾರ್ಶ್ವಕೀರ್ತಿಗಳು ಆ ಮೊದಲು ದೇವೇಂದ್ರಕೀರ್ತಿಗಳು ಮಂಡಿಸಿದ್ದ ಕುರ್ಚಿಯಲ್ಲಿ ಕುಳಿತು ಸುತ್ತಲೂ ದೃಷ್ಟಿ ಹಾಯಿಸಿ ಪದ್ಮರಾಜಯ್ಯನವರನ್ನು ಪತ್ತೆ ಮಾಡಿದರು. ತಕ್ಷಣ ಅಲ್ಲಿದ್ದ ಹುಡುಗನೊಬ್ಬನನ್ನು[1] ಕರೆದು ಪದ್ಮರಾಜಯ್ಯನವರನ್ನು ತೋರಿಸಿ, ಕರೆದು ಬರುವಂತೆ ಹೇಳಿದರು.

ಹುಡುಗ ಬಂದು ಕರೆದಾಗ ಈ ಸಂದರ್ಭದಲ್ಲಿ ನಾನು ಹೋಗದೆ ಇದ್ದರೆ ಹೇಡಿಯಾಗುತ್ತೇನೆ, ಹೋಗುವುದೇ ಸೂಕ್ತ ಎಂದು ಭಾವಿಸಿದ ಪದ್ಮರಾಜಯ್ಯನವರು ಪಾರ್ಶ್ವಕೀರ್ತಿಗಳಿದ್ದೆಡೆಗೆ ಬಂದರು. ಅವರು ಬರುತ್ತಿದ್ದಂತೆಯೇ ಪಾರ್ಶ್ವಕೀರ್ತಿಗಳು ಮಿಂಚಿನೋಪಾದಿಯಲ್ಲಿ ಎದ್ದು ಗಪ್ಪನೆ ತಮ್ಮ ಬಲಗೈಯಿಂದ ಪದ್ಮರಾಜಯ್ಯನವರ ಎಡಗೈಯನ್ನು ಬಿಗಿಯಾಗಿ ಹಿಡಿದುಕೊಂಡರು. ಪಾರ್ಶ್ವಕೀರ್ತಿಗಳ ಎಡಗೈನಲ್ಲಿ ಕಾಗದವೊಂದಿತ್ತು. ಅವರು ಹೀಗೆ ಇದ್ದಕ್ಕಿದ್ದಂತೆಯೇ ಪದ್ಮರಾಜಯ್ಯನವರ ಕೈ ಹಿಡಿದುದನ್ನು ಹರಾಜಿನಲ್ಲಿ ಭಾಗವಹಿಸಿದ್ದ ನೂರಾರುಜನ ಭಕ್ತರೆಲ್ಲಾ ಕಂಡು ಆಶ್ಚರ್ಯಪಟ್ಟರು. ವೈನಾಡಿನ ಶ್ರೀ ಎಂ. ಕೆ. ಜಿನಚಂದ್ರನ್ ಮುಂತಾದ ಗಣ್ಯರು ಅಲ್ಲಿದ್ದರು. ಇವರೆಲ್ಲಾ ನೋಡುತ್ತಿರುವಂತೆಯೇ ಪಾರ್ಶ್ವಕೀರ್ತಿಗಳು ಪದ್ಮರಾಜಯ್ಯನವರನ್ನು ಬಲವಂತವಾಗಿ ಮಠದ ಕಡೆಗೆಎಳೆದೊಯ್ಯಲಾರಂಭಿಸಿದರು. ಪಾರ್ಶ್ವಕೀರ್ತಿಗಳ ಈ ಗೂಂಡಾಗಿರಿಯನ್ನು ಅಲ್ಲಿದ್ದ ಯಾರೂ ವಿಚಾರಿಸಲು ಹೋಗಲಿಲ್ಲ! ಹೆಚ್. ಡಿ. ಪುಟ್ಟಯ್ಯನವರು ಈ ದೃಶ್ಯವನ್ನು ಕಂಡೂ ಕಾಣದಂತೆ ಅಲ್ಲಿ ಓಡಾಡಿಕೊಂಡಿದ್ದರು.

## ಊರೆಲ್ಲಾ ಹೇಳುವ ಚರಿತ್ರೆ

ಇಬ್ಬರೂ ಪಾರ್ಶ್ವನಾಥ ದೇವಾಲಯದ ಮುಂಭಾಗಕ್ಕೆ ಬಂದಾಗ ಪದ್ಮರಾಜಯ್ಯನವರು ಮುಂದೆ ಹೆಜ್ಜೆ ಹಾಕದೆ ಪ್ರತಿಭಟಿಸಿ ನಿಂತರು. ಪಾರ್ಶ್ವಕೀರ್ತಿಗಳು ಹಿಡಿದ ಕೈಯನ್ನು ಬಿಡಲಿಲ್ಲ. ಅವರ ಅಂಗೈನಲ್ಲಿದ್ದ ಕಾಗದದಂತಹ ವಸ್ತುವೊಂದು ಪದ್ಮರಾಜಯ್ಯನವರ ಕೈಯನ್ನು ಒತ್ತುತ್ತಿತ್ತು, ಆ ಕಂತೆಯ ಸಮೇತ ಇವರ ಕೈಯನ್ನು ಭದ್ರವಾಗಿ ಹಿಡಿದಿದ್ದರು. ಹೆಜ್ಜೆ ಹಾಕದೆ ಭೂಮಿಗೆ ಅಂಟಿದಂತೆ ನಿಂತ ಪದ್ಮರಾಜಯ್ಯನವರನ್ನು ಪಾರ್ಶ್ವಕೀರ್ತಿಗಳು "ನೀನೇನೋ ಹೇಳ್ತೀಯಂತೆ?" ಎಂದು ಆಕ್ರೋಶಭರಿತರಾಗಿ ಕೇಳಿದರು. ಇದಕ್ಕೆ ಪದ್ಮರಾಜಯ್ಯ "ನಾನೇನೂ ಹೇಳಿಲ್ಲ! ನಾನೇನೂ ಹೇಳಿಲ್ಲ! ಎಂದು ಉತ್ತರಕೊಟ್ಟರು. ಪಾರ್ಶ್ವಕೀರ್ತಿಗಳು ಬಿಡದೆ ಮತ್ತೆ "ಏನೋ ನನ್ನ ಮೇಲೆ ಹೇಳ್ತೀಯಂತಲ್ಲ?" ಎಂದು ಗಡುಸಾಗಿ ಪ್ರಶ್ನಿಸಿದರು.

---

1. ಈ ಹುಡುಗ ಹೊನ್ನಾಳಿಯ ಹತ್ತಿರದ ಬಳ್ಳೇಶ್ವರದವನು.

ಇಲ್ಲಿಯವರೆಗೆ ಸಾಕಷ್ಟು ತಾಳ್ಮೆ ವಹಿಸಿದ್ದ ಪದ್ಮರಾಜಯ್ಯನವರ ಸಾತ್ವಿಕಕ್ರೋಧ ಈಗ ಕೆರಳಿತು. ಇನ್ನು ಸುಮ್ಮನಿರದಾದರು. ಪಾರ್ಶ್ವಕೀರ್ತಿಗಳ ಗಡಸುತನವನ್ನು ಕುಟ್ಟಿ ಪುಡಿ ಮಾಡುವಂತೆ ಪದ್ಮರಾಜಯ್ಯನವರ ಮಾತುಗಳು ರಭಸದಿಂದ ಸಿಡಿದು ಬಂದುವು.

"ನಾನೇನ್ರಿ ಹೇಳೋದು ! ನಿಮ್ಮ ಚರಿತ್ರೆಯನ್ನು ಊರೆಲ್ಲಾ ಹೇಳ್ತಿದೆಯಲ್ಲಾ"

ಈ ಮಾತುಗಳು ಹೊರಬಿದ್ದ ಕೂಡಲೇ ಪಾರ್ಶ್ವಕೀರ್ತಿಗಳ ಸೊಕ್ಕು ಉದ್ಧಟತನಗಳು ಎಲ್ಲಿಯೋ ಅಡಗಿಕೊಂಡು ಬಿಟ್ಟುವು.

ಇನ್ನು ಮುಂದಕ್ಕೆ ಈ ಪ್ರಸಂಗವನ್ನು ಅಲ್ಲಿಯೇ ಬೆಳೆಸಲು ಬಿಟ್ಟರೆ ಹತ್ತಿರದಲ್ಲಿಯೇ ಇರುವ ಭಕ್ತ ಜನರೆಲ್ಲರ ಮುಂದೆ ತಮ್ಮ ಈ ಚರಿತ್ರೆಯ ಪ್ರಸ್ತಾಪ ಬಂದು ರಂಪಕ್ಕಿಟ್ಟುಕೊಳ್ಳುತ್ತದೆ ಎಂದು ಪಾರ್ಶ್ವಕೀರ್ತಿಗಳಿಗೆ ಮನವರಿಕೆಯಾಯಿತು. ಇದನ್ನು ಅವರು ಇಷ್ಟಪಡಲಿಲ್ಲ ! ಕೂಡಲೇ ಧ್ವನಿ ತಗ್ಗಿಸಿ "ಹಾಗಾದರೆ ಮಠಕ್ಕೆ ಹೋಗೋಣ ಬಾ" ಎಂದು ಕರೆದರು. "ಈಗ ನಾನೇಕೆ ಮಠಕ್ಕೆ ಬರಲಿ, ಬರುವುದಿಲ್ಲ" ಎಂದು ಪದ್ಮರಾಜಯ್ಯ ಮಠಕ್ಕೆ ಹೋಗಲು ನಿರಾಕರಿಸಿದರು. ಪಾರ್ಶ್ವಕೀರ್ತಿಗಳು ಹಿಡಿದ ಕೈಯನ್ನು ಮಾತ್ರ ಇನ್ನೂ ಬಿಡಲಿಲ್ಲ.

ಪದ್ಮರಾಜಯ್ಯ ಮಠದೊಳಕ್ಕೆ ಬರುವುದಿಲ್ಲ ಎಂಬುದನ್ನು ಖಚಿತಪಡಿಸಿಕೊಂಡ ಪಾರ್ಶ್ವಕೀರ್ತಿಗಳು "ಹಾಗಾದರೆ ನಿನ್ನ ಹತ್ತಿರ ಮಾತನಾಡಬೇಕಾಗಿದೆ, ಈ ಕಡೆ ಬಾ' ಎಂದು ಅವರನ್ನು ಪಾರ್ಶ್ವನಾಥ ದೇವಾಲಯದ ಮಹಡಿ ಹತ್ತುವ ಮೆಟ್ಟಿಲುಗಳ ಕಡೆಗೆ ಕೈಹಿಡಿದೇ ಕರೆದೊಯ್ಯಲಾರಂಭಿಸಿದರು. ಅಲ್ಲಿಗೆ ಹೋಗುವಾಗ ಎಡಪಕ್ಕದಲ್ಲಿ ಮಠದ ಭೋಜನಶಾಲೆಗೆ ಹೋಗುವ ಬಾಗಿಲು ಕಾಣಿಸಿತು. "ಇಲ್ಲೀದ ಮಠದೊಳಕ್ಕೆ ಹೋಗೋಣ ಬಾ" ಎಂದು ಇನ್ನೊಮ್ಮೆ ಕರೆದರು. ಪದ್ಮರಾಜಯ್ಯ ಸ್ಪಷ್ಟವಾಗಿ ನಿರಾಕರಿಸಿದರು. ಕಡೆಗೆ ಪಾರ್ಶ್ವಕೀರ್ತಿಗಳು ಅವರನ್ನು ದೇವಾಲಯದ ಮಹಡಿಯ ಮೆಟ್ಟಿಲು ಇರುವ ಸ್ಥಳದ ಜಗಲಿಯ ಮೇಲಕ್ಕೆ ಕರೆದು ತಂದರು. ಮೆಟ್ಟಿಲುಗಳ ಎಡಪಕ್ಕದಲ್ಲಿರುವ ಈ ಜಗಲಿಯ ಏಕಾಂತ ಸ್ಥಳದಲ್ಲಿ ಮಾತುಕತೆಗಾಗಿ ಕೂರಿಸಿದರು. ಆಗಲೂ ಸಹ ಪದ್ಮರಾಜಯ್ಯನವರ ಹಿಡಿದ ಕೈಯನ್ನು ಬಿಟ್ಟಿರಲಿಲ್ಲ. ಪಾರ್ಶ್ವಕೀರ್ತಿಗಳ ಅಂಗೈನಲ್ಲಿ ಆಶ್ರಯ ಪಡೆದು ತಮ್ಮ ಕೈಯನ್ನು ಒತ್ತುತ್ತಿರುವುದು ಕಾಗದವಲ್ಲ, ನಾಲ್ಕಾರು ನೋಟುಗಳ ಸಣ್ಣ ಕಂತೆಯಿರಬಹುದು ಎನ್ನಿಸಿ, ಲಂಚಕೊಟ್ಟು ತಮ್ಮ ಬಾಯನ್ನು ಮುಚ್ಚಿಸಲು ಪಾರ್ಶ್ವಕೀರ್ತಿಗಳು ತಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದಾರೆ ಎಂದು ಪದ್ಮರಾಜಯ್ಯನವರು ಅರಿತುಕೊಂಡರು.

**ಗುರು ನೀವಲ್ಲ ನಾನು !**

ಪದ್ಮರಾಜಯ್ಯನವರನ್ನು ಏಕಾಂತ ಸ್ಥಳಕ್ಕೆ ಕರೆತರುವುದರೊಳಗಾಗಿ ಪಾರ್ಶ್ವಕೀರ್ತಿಗಳ ಧ್ವನಿ ಉಡುಗಿ ಹೋಗಿತ್ತು. ಆ ಸ್ಥಳದಲ್ಲಿ ಕೂರುತ್ತಿದ್ದಂತೆಯೇ ಪದ್ಮ

ರಾಜಯ್ಯನವರು "ಗುರು ನೀವಲ್ಲ ನಾನು" ಎಂದರು. ಪಾರ್ಶ್ವಕೀರ್ತಿಗಳು "ಹೇಗೆ ?" ಎಂದು ಕೇಳಿದರು.

"ನೋಡ್ರಿ ವೃಷಭ ತೀರ್ಥಂಕರರು ಕ್ಷಣದಲ್ಲಿ ಸಂಸಾರ ಬಿಟ್ಟು ತಪಸ್ಸಿಗೆ ಹೋದಂತೆ ನಾನೂ ಬೇಕಾದರೆ ಬಿಟ್ಟು ಹೋಗಬಲ್ಲೆ ! ಎಲ್ಲಾ ಆಸೆಯನ್ನು ಬಿಟ್ಟು ವಿರಕ್ತನಾಗಬಲ್ಲೆ ! ಗುರು ಪದವಿಯ ಬಗೆಗೆ ನನಗೆ ನಿಜವಾದ ಗೌರವವಿದೆ. ನೀವಾದರೋ ಸ್ವತಃ ಗುರುಗಳಾಗಿದ್ದುಕೊಂಡು ಅನಾಚಾರ ಮಾಡಿದ್ದೀರಿ. ಹೆಂಗಸರನ್ನು ಇಟ್ಟುಕೊಂಡಿದ್ದೀರಿ. ಈ ಊರಿನ ಮುದ್ದಮ್ಮನನ್ನು ನೀವು ಇಟ್ಟುಕೊಂಡಿಲ್ಲವೇನ್ರಿ ? ಇಂತಹ ವ್ಯಭಿಚಾರ ಮಾಡಿರುವ ನೀವು ಪೀಠಕ್ಕೆ ಬಂದು ಪದ್ಮಾವತಿ ದೇವಿಯನ್ನು ಪೈಲಿಗೆ ಮಾಡುವುದು ಖಂಡಿತಾ ಸರಿಯಲ್ಲ ! ದೇವಿಗೆ ನೀವು ಇಷ್ಟವಿಲ್ಲ ಎಂಬುದು ಈ ಮೊದಲೇ ನಿರ್ಧಾರವಾಗಿ ಬಿಟ್ಟಿದೆ. ನೀವು ಈ ಕ್ಷೇತ್ರದಲ್ಲಿರುವುದೇ ಸರಿಯಲ್ಲ" ಎಂದು ಪದ್ಮರಾಜಯ್ಯನವರು ಹೇಳುತ್ತಿರುವಂತೆಯೇ ಪಾರ್ಶ್ವಕೀರ್ತಿಗಳ ಕಣ್ಣಲ್ಲಿ ನೀರೂರಲು ಪ್ರಾರಂಭವಾಯಿತು ! ಭಾರವಾದ ದನಿಯಲ್ಲಿ ಪಾರ್ಶ್ವಕೀರ್ತಿಗಳು ಪ್ರಶ್ನಿಸಿದರು.

"ಹಾಗಾದರೆ ಈಗ ನಾನೇನು ಮಾಡಲಿ ?"

ಇದಕ್ಕೆ ಪದ್ಮರಾಜಯ್ಯ "ಇಲ್ಲಿಯ ಪಟ್ಟಾಭಿಷೇಕ ನಿಮಗೆ ಖಂಡಿತವಾಗಿಯೂ ಬೇಡ ! ನೀವು ಇನ್ನೆಲ್ಲಿಗಾದರೂ ಹೋಗಿ, ಇನ್ನು ಮುಂದಾದರೂ ಒಳ್ಳೆಯ ನಡತೆಯಲ್ಲಿ ಇರಿ" ಎಂದು ಸಲಹೆ ನೀಡಿದರು.

ಇಬ್ಬರಲ್ಲೂ ಇಷ್ಟು ಮಾತುಗಳಾದರೂ ಪಾರ್ಶ್ವಕೀರ್ತಿಗಳು ಹಿಡಿದ ಕೈಯನ್ನು ಇನ್ನೂ ಬಿಟ್ಟಿರಲಿಲ್ಲ. ಹಣದ ಆಮಿಷವೊಡ್ಡಿ ತಮ್ಮನ್ನು ವಶಪಡಿಸಿಕೊಳ್ಳುವ ಉದ್ದೇಶದಿಂದ ನೋಟುಗಳನ್ನು ತಮ್ಮನ್ನು ಹಿಡಿದಿರುವ ಕೈನಲ್ಲಿ ಇಟ್ಟುಕೊಂಡಿದ್ದಾರೆ ಎಂಬುದನ್ನು ಗ್ರಹಿಸಿದ್ದ ಪದ್ಮರಾಜಯ್ಯನವರು ತಮ್ಮ ಕೈ ಬಿಡಿಸಿಕೊಳ್ಳುವ ಉದ್ದೇಶದಿಂದ,

"ನೋಡ್ರಿ, ನಾನು ಭಿಕ್ಷೆ ಮಾಡುವ ಮನುಷ್ಯ. ಭಿಕ್ಷೆ ಎಂದರೆ ಹಣವನ್ನು ಸಾಲ ತರುವ ಭಿಕ್ಷೆ ! ಆ ಸಾಲದ ಭಿಕ್ಷೆಯನ್ನು ಬಡ್ಡಿ ಸೇರಿಸಿ ಹಿಂತಿರುಗಿಸಿ ಬದುಕುವ ಮನುಷ್ಯ ನಾನು ! ನಿಮ್ಮ ಕೈಯಲ್ಲಿರುವ ಧರ್ಮದ ದುಡ್ಡನ್ನು ನಾನು ಮುಟ್ಟುವವನಲ್ಲ !" ಎಂದು ಸ್ಪಷ್ಟವಾಗಿ ಹೇಳಿ ಕೈ ಬಿಡುವಂತೆ ಸೂಚಿಸಿದರು. ಆದರೂ ಪಾರ್ಶ್ವಕೀರ್ತಿಗಳು ಕೈ ಬಿಡದೆ

"ನನಗೆ ಮತ್ತೆ ಈ ಕ್ಷೇತ್ರಕ್ಕೆ ಬರುವ ಇಚ್ಛೆಯಿರಲಿಲ್ಲ. ಅರ್ಹದ್ದಾಸರು ಕರೆದಿದ್ದರಿಂದ ನಾನು ಬಂದೆ" ಎಂದು ಮಾತು ತೆಗೆದರು.

"ನನಗೆ ಆ ವಿಚಾರ ಸಂಬಂಧಪಟ್ಟಿಲ್ಲ. ನಿಮಗೆ ಇಚ್ಛೆಯಿಲ್ಲದಿದ್ದ ಮೇಲೆ ಬಲವಂತವಾಗಿ ಏಕೆ ಬಂದಿರಿ ?" ಎಂದು ಪದ್ಮರಾಜಯ್ಯ ಪ್ರಶ್ನಿಸಿದರು.

"ನನಗೆ ಅಧಿಕಾರ ಪತ್ರ ಬರೆದು ಕೊಟ್ಟಿದ್ದಾರೆ ಅದಕ್ಕಾಗಿ ಬಂದೆ" ಎಂದರು ಪಾರ್ಶ್ವಕೀರ್ತಿಗಳು.

"ಅಧಿಕಾರ ಪತ್ರ ಬರೆದು ಕೊಟ್ಟಿದ್ದರೆ ಅದು ಅವರಿಗೂ ನಿಮಗೂ ಸೇರಿದ ಸಂಗತಿ. ನನಗೂ ಅದಕ್ಕೂ ಯಾವ ಸಂಬಂಧವೂ ಇಲ್ಲ"

"ನೀನು ಇದನ್ನು ಓದಿನೋಡು" ಎಂದು ಹೇಳಿದ ಪಾರ್ಶ್ವಕೀರ್ತಿಯವರು ತಮ್ಮ ಎಡಗೈಯಲ್ಲಿ ಹಿಡಿದಿದ್ದ ಪತ್ರವೊಂದನ್ನು ಪದ್ಮರಾಜಯ್ಯನವರಿಗೆ ಕೊಡಲು ಹೋದರು. ಇದಕ್ಕೆ ಪದ್ಮರಾಜಯ್ಯ,

"ನನಗೆ ಓದುವಷ್ಟು ಬರಹವಿಲ್ಲ" ಎಂದು ಓದಲು ನಿರಾಕರಿಸಿದರು. ಕೂಡಲೇ ಪಾರ್ಶ್ವಕೀರ್ತಿಗಳು,

"ಹಾಗಾದರೆ ಈ ಪತ್ರಕ್ಕೆ ನೀನೊಂದು ದಸ್ಕತ್ತು ಹಾಕು" ಎಂದು ಕೇಳಿದರು. ಅವರು ದಸ್ಕತ್ತು ಎಂದು ಹೇಳುತ್ತಿದ್ದಂತೆಯೇ ಹಿಂದೆ ಪಿ. ಹೆಚ್. ಗುಂಜಾಳರು ತಮಗೆ ನೀಡಿದ್ದ ಖಾಲಿ ಹಾಳೆಗೆ ದಸ್ಕತ್ತು ಹಾಕಬೇಡ ಎಂಬ ಎಚ್ಚರಿಕೆಯ ಮಾತುಗಳು ಪದ್ಮರಾಜಯ್ಯನವರಿಗೆ ನೆನಪಾದವು. ಕೂಡಲೇ ಅವರು "ನನಗೆ ದಸ್ಕತ್ತು ಹಾಕಲೂ ಸಹ ಬರುವುದಿಲ್ಲ" ಎಂದು ನಿರಾಕರಿಸಿದರು. ಇಲ್ಲಿಗೆ ಪಾರ್ಶ್ವಕೀರ್ತಿಗಳ ಬಾಯಿ ಕಟ್ಟಿ ಹೋಯಿತು.

ಇಷ್ಟು ಮಾತುಕತೆಗಳಾದ ಮೇಲೆ ಪದ್ಮರಾಜಯ್ಯನವರನ್ನು ತಮ್ಮ ದಾರಿಗೆ ತಿರುಗಿಸಿಕೊಳ್ಳುವ ಪಾರ್ಶ್ವಕೀರ್ತಿಗಳ ಶ್ರಮಭರಿತ ಪಿತೂರಿ ಮಣ್ಣುಗೂಡಿತು. ಕ್ಷೇತ್ರವನ್ನು ಕಬಳಿಸುವ ಆಸೆ ಕೈಗೂಡಲಿಲ್ಲ. ಕಡೆಗೆ ಪಾರ್ಶ್ವಕೀರ್ತಿಗಳು ಸುಮಾರು ಅರ್ಧಗಂಟೆಯಿಂದ ಹಿಡಿದಿದ್ದ ಪದ್ಮರಾಜಯ್ಯನವರ ಕೈಯನ್ನು ಬಿಟ್ಟರು ನೋಟಿನ ಕಂತೆ ಪಾರ್ಶ್ವಕೀರ್ತಿಗಳ ಕೈಯಲ್ಲೇ ಉಳಿಯಿತು. ಹಾಗೆಯೇ ನೇರವಾಗಿ ಮಠದೊಳಕ್ಕೆ ಹೋದರು. ಮಠಕ್ಕೆ ಹೋದ ಐದು ನಿಮಿಷಗಳೊಳಗೆ ತಾವು ಕರೆತಂದಿದ್ದ ಬೆಂಗಾವಲ ಪಡೆಯೊಂದಿಗೆ, ಮೊದಲು ಬಂದ ವ್ಯಾನಿನಲ್ಲಿಯೇ ಕುಳಿತು ಹೊಂಬುಜವನ್ನು ಬಿಟ್ಟು ಹೊರಟುಹೋದರು. ಹೋಗುವಾಗ ಹೊಂಬುಜ ತ್ಯಜಿಸುವ ತಮ್ಮ ನಿರ್ಧಾರವನ್ನು ಯಾರಿಗೂ ತಿಳಿಸಲಿಲ್ಲ ಮಠದೊಳಗಡೆಯಿದ್ದ ದೇವೇಂದ್ರಕೀರ್ತಿಸ್ವಾಮಿಗಳಿಗೆ ಇದನ್ನು ತಿಳಿಸಿದರೋ ಇಲ್ಲವೋ ಎಂಬುದು ಗೊತ್ತಾಗಲಿಲ್ಲ ಪಾರ್ಶ್ವಕೀರ್ತಿಗಳಂತಹ ಮೊಂಡರು ಹೀಗೆ ಇದ್ದಕ್ಕಿದ್ದಂತೆಯೇ ಕ್ಷೇತ್ರ ಬಿಟ್ಟು ಪಲಾಯನ ಮಾಡುತ್ತಾರೆಂದು ಊರಿನ ಜನರು ನಿರೀಕ್ಷಿಸಿರಲಿಲ್ಲ. ಎಲ್ಲಾ ದೇವಿಯ ಇಚ್ಛೆ ಎಂದು ಕೆಲವರು ಉದ್ಗಾರ ತೆಗೆ

ದರು. ಪಾರ್ಶ್ವಕೀರ್ತಿಗಳು ಹೀಗೆ ಹೊಂಬುಜದಿಂದ ಪಲಾಯನ ಮಾಡಿದಾಗ ಅವರಿಗೆ ತೊಂಬತ್ತೆಂಟು ವರ್ಷಗಳು.

ಪಾರ್ಶ್ವಕೀರ್ತಿಗಳು ಹೊಂಬುಜ ತೊರೆದು ಹೊರಟ ಮೇಲೆ ಹೆಚ್. ಡಿ. ಪುಟ್ಟಯ್ಯನವರು ಊಟಕ್ಕಾಗಿ ಮಠದೊಳಕ್ಕೆ ಹೊರಟಿದ್ದರು. ಪದ್ಮರಾಜಯ್ಯನವರು ಅವರನ್ನು ತಡೆದು

"ಏನ್ರೀ ಪುಟ್ಟಯ್ಯನವರೆ ಬಂದನ್ನೆಲ್ಲಾ ಅನುಭವಿಸುತ್ತೀರಿ ಎಂದು ನನಗೆ ಹೇಳ್ತಿದ್ರಲ್ಲ! ಈಗ ಏನು ಹೇಳ್ತೀರಿ ?" ಎಂದು ಕಟಕಿಯಾಡಿದರು. ಅದಕ್ಕೆ ಪುಟ್ಟಯ್ಯನವರು,

"ಅವರು ಊರು ಬಿಟ್ಟು ಹೋಗಿದ್ದಾಯ್ತಲ್ಲಪ್ಪ ಇನ್ಯಾಕೆ ಆ ವಿಷಯ" ಎಂದು ಆಡಿ ನುಣುಚಿ ಕೊಂಡರು.

ಪಾರ್ಶ್ವಕೀರ್ತಿಗಳನ್ನು ಹಿಂದೆ ಶೇಡಬಾಳ ಆಶ್ರಮದಿಂದ ಉಚ್ಚಾಟನೆ ಮಾಡುವ ಸಂದರ್ಭದಲ್ಲಿ ಪೋಲೀಸರನ್ನು ಕರೆಸಬೇಕೆಂದು ಟ್ರಸ್ಟಿಗಳು ನಿರ್ಣಯಮಾಡಿ ಶ್ರಮಪಡ ಬೇಕಾಯಿತು. ಆದರೆ ಹೊಂಬುಜದಲ್ಲಿ ಕಡೆಯ ಘಟನೆಯವರೆಗೂ ದೇವೇಂದ್ರಕೀರ್ತಿ ಗಳ ಪ್ರತ್ಯಕ್ಷವಾದ ಮತ್ತು ಪರೋಕ್ಷವಾದ ಅಖಂಡ ಬೆಂಬಲವಿದ್ದುದರಿಂದ ಪೋಲೀಸ ರನ್ನು ಕರೆಸಬೇಕಾದ ಅಗತ್ಯ ಇಲ್ಲಿ ಒದಗಿ ಬರಲಿಲ್ಲ.

ಹೊಂಬುಜದಲ್ಲಿ ಹೊಸಬರೊಬ್ಬರನ್ನು ಪೀಠಾಧಿಕಾರಿಗಳನ್ನಾಗಿ ಮಾಡುವುದಕ್ಕೆ ಮುಂಚೆ ಇವರಿಗೆ ಪಟ್ಟವಾಗಬಹುದೇ ಎಂದು ಪದ್ಮಾವತಿ ದೇವಿಯಲ್ಲಿ ತಪ್ಪದೆ ಪ್ರಸಾದ ಕೇಳುವ ಸಂಪ್ರದಾಯವುಂಟು. ಪಾರ್ಶ್ವಕೀರ್ತಿಗಳಿಗೆ ಇಲ್ಲಿ ಪ್ರಸಾದವಾಗದೆ ಇದ್ದರೂ ಸಹ ದೇವಿಯ ಆದೇಶವನ್ನೂ ಉಪೇಕ್ಷೆ ಮಾಡಿ ಅವರಿಗೆ ಪಟ್ಟ ಕಟ್ಟುವ ಸನ್ನಾಹವನ್ನು ದೇವೇಂದ್ರಕೀರ್ತಿಗಳು ಮಾಡಿದರು. ಬೇಲಿಯೇ ಎದ್ದು ಹೊಲ ಮೇಯುವ ಇಂತಹ ವಿಷಮಯ ಸನ್ನಿವೇಶದಲ್ಲಿ ಪದ್ಮರಾಜಯ್ಯನವರು ಕ್ಷೇತ್ರದಲ್ಲಿ ಇಲ್ಲದೇ ಹೋಗಿದ್ದರೆ, ಹೊಂಬುಜ ಕ್ಷೇತ್ರ ಮಹಾನ್ ವ್ಯಭಿಚಾರಿಗಳ ವಶವಾಗುತ್ತಿತ್ತು. ಆ ಸಂದರ್ಭದಲ್ಲಿ ಸತ್ಯನಿಷ್ಠರಾಗಿ ಯಾವ ಪ್ರಲೋಭನೆಗಳಿಗೂ ಒಳಗಾಗದೆ ದೇವಿಯ ಆದೇಶ ಮೂಲೆ ಗುಂಪಾಗದಂತೆ ನೋಡಿಕೊಂಡವರು ಪದ್ಮರಾಜಯ್ಯನವರೊಬ್ಬರೇ! ನ್ಯಾಯವನ್ನು ಎತ್ತಿಹಿಡಿಯುವುದಕ್ಕಾಗಿ ಇವರು ತಮ್ಮ ಸಂಸಾರವನ್ನೂ ಉಪೇಕ್ಷೆಮಾಡಿ ಪ್ರಾಣವನ್ನೇ ಪಣವಾಗಿ ಒಡ್ಡಿ ನಿಂತರು. ಇಂಥವರ ಮುಂದೆ ಪಾರ್ಶ್ವಕೀರ್ತಿಗಳ ಕಪಟಬುದ್ಧಿಗಳು ಬೇರುಕಿತ್ತು ಓಡುವಂತಾಯಿತು. ಇದಕ್ಕಿಂತ ದೊಡ್ಡ ಸಮಾಜ ಸೇವೆ ಇನ್ನೊಂದಿದೆಯೇ ? ಇಂತಹ ಧರ್ಮಿಷ್ಠರು ಊರಿನಲ್ಲಿ ನಾಲ್ಕು ಜನರಾದರೂ ಇದ್ದರೆ ಧರ್ಮಕ್ಕೆ ಕೇಡೆಂಬುದಾದರೂ ಉಂಟೆ ? ಎಂದು ಇವರ ಬಗ್ಗೆ ಜನರು ಮಾತನಾಡಿಕೊಳ್ಳುವಂತಾಯಿತು.

**ಶೋಷಣೆ-ಆಸರೆ**

ಪಾರ್ಶ್ವಕೀರ್ತಿಗಳು ಹೊಂಬುಜದಿಂದ ಪಲಾಯನ ಮಾಡುವಾಗ ತಮ್ಮ ಪ್ರಿಯತಮೆ ಮುದ್ದಮ್ಮನನ್ನಾದರೂ ಕಂಡು ಅವಳ ಮುಂದಿನ ಜೀವನಕ್ಕೆ ಒಂದು ವ್ಯವಸ್ಥೆಯನ್ನಾದರೂ ಮಾಡಿ ಹೋಗುವ ಮಾನವೀಯತೆಯನ್ನು ತೋರಿಸಲಿಲ್ಲ. ತಮ್ಮ ಪ್ರಣಯಫಲ ಮುದ್ದನನ್ನು ಒಂದು ಸಾರಿ ಮುದ್ದಿಸಿ ಅದಕ್ಕೆ ಭವಿಷ್ಯದಲ್ಲಿ ಸುಖ ಸಂತೋಷಗಳನ್ನು ಹಾರೈಸುವ ವಾತ್ಸಲ್ಯಪೂರಿತ ಪಿತೃಹೃದಯದ ಒಂದು ಕರುಣಾ ದೃಷ್ಟಿಯನ್ನಾದರೂ ಬೀರಲಿಲ್ಲ. ಹೊಂಬುಜದಲ್ಲಿ ಅದುವರೆಗೂ ಅವಳ ಅಂಗಸುಖವನ್ನು ಪಡೆದು, ಪುತ್ರನನ್ನೂ ಅನುಗ್ರಹಿಸಿ ಅದನ್ನು ಸಾಕುವ ಜವಾಬ್ದಾರಿಯನ್ನು ಅವಳಿಗೇ ಬಿಟ್ಟು ಹೀಗೆ ಲೈಂಗಿಕವಾಗಿಮುದ್ದಮ್ಮನನ್ನು ಶೋಷಿಸಿ ಊರಿನಿಂದ ಪಲಾಯನ ಮಾಡಿದರು. ಮನೆ ಬಿಟ್ಟು ಓಡಿ ಹೋಗುವವಳು ಹಾಲಿಗೆ ಹೆಪ್ಪು ಹಾಕುತ್ತಾಳೆಯೇ ?

ಇತ್ತ ತನ್ನ ಪ್ರಿಯತಮನಾದ ಪಾರ್ಶ್ವಕೀರ್ತಿಗಳ ಪಲಾಯನದಿಂದ ಮುದ್ದಮ್ಮನಿಗೆ ತನ್ನ ಮಡಿಲಿನಲ್ಲಿಯೇ ಹುಟ್ಟಿದ್ದ ದುಡ್ಡುಬಿಡುವ ಗಿಡವೇ ಮಾಯವಾದಂತಾಯಿತು. ಕೆಲದಿನಗಳಲ್ಲಿಯೇ ಈಕೆ ತೊರೆದಿದ್ದ ತಾಳಿಕಟ್ಟಿದ ಮೊದಲನೆಯ ಗಂಡನೂ ತೀರಿಕೊಂಡ. ತನ್ನ ಮತ್ತು ಮಗುವಿನ ಹೊಟ್ಟೆ ಹೊರೆಯಲು ಈಕೆ ಏಕಾಂಗಿಯಾಗಿ ದುಡಿಯಬೇಕಾಯಿತು. ಈ ಹೊತ್ತಿಗೆ ಮುದ್ದಮ್ಮನ ಅಕ್ಕ ಸಹ ತೀರಿಕೊಂಡಳು. ವಿಧುರನಾದ ಭಾವ ನಾದಿನಿಯಾದ ಮುದ್ದಮ್ಮನನ್ನು ಕೂಡಿಕೆ ಮಾಡಿಕೊಂಡು ಅವಳ ಯಜಮಾನನಾದ. ಈ ಮೂರನೆಯ ಯಜಮಾನನಿಂದಾಗಿ ಮುದ್ದಮ್ಮನಿಗೂ ಮತ್ತು ಆಕೆಯ ಮಗುವಿಗೂ ಸ್ಥಿರವಾದ ಆಸರೆಯೊಂದು ದೊರೆಯಿತು.

**ಅಧ್ಯಾಯ : ಹದಿಮೂರು**

# ದಿಗಂಬರ ವೇಷಧಾರಿ

ಪಾರ್ಶ್ವಕೀರ್ತಿಗಳು ಹೊಂಬುಜದಲ್ಲಿ ಪದ್ಮರಾಜಯ್ಯನವರ ಪ್ರತಿಭಟನೆಯನ್ನು ಯಾವ ವಿಧದಲ್ಲೂ ಎದುರಿಸಲು ಸಾಧ್ಯವಾಗದೆ ಅವರ ಮುಂದೆ ತಲೆತಗ್ಗಿಸಿ ಅಲ್ಲಿಂದ ಪಲಾಯನ ಮಾಡಿದ ಮೇಲೆ ಬೆಳಗಾವಿ ಸೇರಿದರು. ಶೇಡಬಾಳ ಆಶ್ರಮ ಅನಂತರ ಹೊಂಬುಜದಲ್ಲಿ ತಮಗುಂಟಾದ ತೀವ್ರವಾದ ಮುಖಭಂಗ ಅಪಮಾನದಿಂದಾಗಿ ಇನ್ನು ಹೆಚ್ಚು ಕಾಲ ಕರ್ನಾಟಕದಲ್ಲಿ ಜನವಂಚನೆ ಮಾಡುತ್ತಾ ಕಾಲಕಳೆಯುವುದು ದುಸ್ಸಾಧ್ಯವಾಯಿತು. ಎಲ್ಲಿ ಹೋದರೂ ಇವರ ಅವತಾರಗಳ ವಿಚಾರವಾಗಿ ಜನಗಳ ಗುಸುಗುಸು

ಹೆಚ್ಚಾಯಿತು. ಇದರಿಂದಾಗಿ ಪಾರ್ಶ್ವಕೀರ್ತಿಗಳು ಕರ್ನಾಟಕವನ್ನು ತೊರೆಯುವ ಮನಸ್ಸು ಮಾಡಿದರು.

ಉತ್ತರ ಭಾರತದಲ್ಲಿ ಜೈನಧರ್ಮದ ಅನುಯಾಯಿಗಳು ದಿಗಂಬರ ಮುನಿಗಳೆಂದರೆ ಹೆಚ್ಚು ಭಕ್ತಿ ಅಭಿಮಾನಗಳನ್ನು ತೋರಿಸುತ್ತಾರೆ. ಅವರನ್ನು ದೇವರಂತೆಯೇ ಆರಾಧಿಸುತ್ತಾರೆ. ಈ ಸಮಯದಲ್ಲಿ ಉತ್ತರ ಭಾರತದಲ್ಲಿ ಕರ್ನಾಟಕದ ಚಿಕ್ಕೋಡಿ ತಾಲ್ಲೋಕು ಕೋಥಳಿಯವರಾದ ಆಚಾರ್ಯರತ್ನ ಶ್ರೀ ದೇಶಭೂಷಣ ಮುನಿಗಳ ಪ್ರಭಾವ ವಿಶೇಷವಾಗಿತ್ತು. ಪಾರ್ಶ್ವಕೀರ್ತಿಗಳು ದೆಹಲಿಯಲ್ಲಿ ವಾಸ್ತವ್ಯಮಾಡಿದ್ದ ದೇಶಭೂಷಣರ ಬಳಿಗೆ ಹೋಗಿ ದಿಗಂಬರ ದೀಕ್ಷೆ ತೆಗೆದುಕೊಳ್ಳುವ ನಿರ್ಧಾರ ಮಾಡಿದರು. ಅದರಂತೆ ಕೊಲ್ಲಾಪುರ ಬೊಂಬಾಯಿಗಳ ಮೂಲಕ ದೆಹಲಿ ಸೇರಿದ ಪಾರ್ಶ್ವಕೀರ್ತಿಗಳು ದೇಶಭೂಷಣಮುನಿಗಳನ್ನು ನಂಬಿಸಿ ತಾ. 25–7–63ರಂದು ದಿಗಂಬರ ಮುನಿಯಾಗಿ ದೀಕ್ಷೆ ತೆಗೆದುಕೊಂಡರು. ಈ ದಿನಾಂಕದಿಂದ ಅವರ ಹೆಸರು ಪಾರ್ಶ್ವಕೀರ್ತಿಗಳೆಂಬುದರ ಬದಲಾಗಿ ವಿದ್ಯಾನಂದ ಎಂದಾಯಿತು.

ಆಚಾರ್ಯರಾದವರು ಶಿಷ್ಯರ ಯೋಗ್ಯತೆಯನ್ನು ಚೆನ್ನಾಗಿ ತಿಳಿದುಕೊಂಡು ಅವರಿಗೆ ದೀಕ್ಷೆ ನೀಡಬೇಕೆಂದು ಜೈನಶಾಸ್ತ್ರ ಗ್ರಂಥಗಳು ಹೇಳುತ್ತವೆ. ಪಾರ್ಶ್ವಕೀರ್ತಿಗಳು ತಾವು ಮಾಡಿದ ಕೊಲೆ, ವ್ಯಭಿಚಾರ ಮತ್ತಿತರ ದುರ್ವ್ಯವಹಾರಗಳ ಸುಳಿವು ದೇಶಭೂಷಣರ ಗಮನಕ್ಕೆ ಬರದಂತೆ ನಾಟಕವಾಡಿದ್ದರು. ದೇಶಭೂಷಣರೂ ಸಹ ಇವರ ಪೂರ್ವ ಜೀವನದ ಬಗ್ಗೆ ವಿವರವಾಗಿ ತಿಳಿದುಕೊಳ್ಳದೆ ಇವರನ್ನು ನಂಬಿ ದೀಕ್ಷೆ ಕೊಟ್ಟರು.

## ದೇಶಭೂಷಣರನ್ನು ತೊರೆದದ್ದು

ದೀಕ್ಷೆ ಪಡೆದ ಮೇಲೆ ವಿದ್ಯಾನಂದರು ದೇಶಭೂಷಣರ ಮುನಿಸಂಘದಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ. ಸತ್ಪುರುಷರ ಬಳಿಯಲ್ಲಿ ನಿರಂತರವಾಗಿ ನಿಲ್ಲುವ ಜಾಯಮಾನ ಇವರದಾಗಿರಲಿಲ್ಲ ! ದೇಶಭೂಷಣರಂತಹ ನಿಷ್ಕಳಂಕ ಹೃದಯದ ಮುನಿಗಳ ಬಳಿ ಅಂತರಂಗದಲ್ಲಿ ತಿಮಿಂಗಿಲಗಳಂತಹ ಕಾಮನೆಗಳನ್ನು ಅಡಗಿಸಿಕೊಂಡಿರುವ ಈ ವಿದ್ಯಾನಂದರು ಇರುವುದಾದರೂ ಹೇಗೆ ? ಅವರೊಂದಿಗಿದ್ದುಕೊಂಡು ದುಷ್ಕೃತ್ಯಗಳನ್ನು ಮಾಡುವುದಾದರೂ ಹೇಗೆ ಸಾಧ್ಯ ? ಹೀಗಾಗಿ ದೀಕ್ಷೆ ವಹಿಸಿದ ಆರು ತಿಂಗಳೊಳಗಾಗಿಯೇ ಏನೋ ಒಂದು ಕಾರಣ ತೆಗೆದುಕೊಂಡು ವಿದ್ಯಾನಂದರು ದೇಶಭೂಷಣರ ಸಂಘವನ್ನು ತೊರೆದು ತಾವು ಪ್ರತ್ಯೇಕವಾದರು. ಈ ಹೊತ್ತಿಗೆ ಶೇಡಬಾಳ ಮತ್ತು ಹೊಂಬುಜಗಳಲ್ಲಿ ಇವರ ದುಷ್ಕೃತ್ಯಗಳಿಗೆ ನೆರವಾದ ಅಂಗವಿಕಲ ಮನುಷ್ಯನೂ ಮತ್ತು ನರಿಗೌಡನೂ ಇವರನ್ನು ಕೂಡಿಕೊಂಡರು.. ಈ ದಳ್ಳಾಳಿಗಳು ಮತ್ತಿತರರ ಮೂಲಕ ತಮ್ಮದೇ ಆದ ಒಂದು

ಪ್ರತ್ಯೇಕ ವ್ಯವಸ್ಥೆಯನ್ನು ವಿದ್ಯಾನಂದರು ಮಾಡಿಕೊಂಡರು. ದೇಶಭೂಷಣರಿಗೆ ತಮ್ಮ ಶಿಷ್ಯ ಮಾಡಿದ ನಂಬಿಕೆ ದ್ರೋಹ ಅರ್ಥವಾದರೂ ಅವರ ದುಷ್ಟತನದ ಬಗ್ಗೆ ಬಹಿರಂಗ ವಾಗಿ ಹೇಳಿಕೆ ನೀಡಲು ಹೋಗಲಿಲ್ಲ.

## ಆಧ್ಯಾತ್ಮಿಕ ನಾಟಕ ಮಂಡಳಿ

ಶೇಡಬಾಳದಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಲೈಂಗಿಕ ಅನಾಚಾರಗಳನ್ನು ಮಾಡಿ ಅದನ್ನು ದಕ್ಕಿಸಿಕೊಂಡ ಸುರೇಂದ್ರ ಉಪಾಧ್ಯೆ ಮುಂದೆ ಬ್ರಹ್ಮಚಾರಿ ವೇಶದಲ್ಲಿ ಏಕ ಪಾತ್ರಾಭಿನಯದ ನಾಟಕಗಳನ್ನಾಡಿದ. ಅನಂತರ ಕ್ಷುಲ್ಲಕಸಾಧು ವೇಷಧಾರಿಯಾಗಿ ಪಾರ್ಶ್ವಕೀರ್ತಿಗಳೆಂಬ ಅಭಿದಾನದೊಂದಿಗೆ ತನ ಗುಂಪಿನ ಸಮೇತ ಈತನಾಡಿದ ಆಧ್ಯಾತ್ಮಿಕ ನಾಟಕಗಳು ಶೇಡಬಾಳದಲ್ಲೂ ಹೊಂಬುಜದಲ್ಲೂ ವಿಫಲವಾದುವು. ದ್ವಾದಶ ವರ್ಷಗಳಷ್ಟು ದೀರ್ಘಾವಧಿಯಲ್ಲಿ ಅನುಭವಿಸಿದ ಈ ವೈಫಲ್ಯದ ಕಹಿಯಿಂದ ವ್ಯಗ್ರನಾದ ಸುರೇಂದ್ರಉಪಾಧ್ಯೆ ಇನ್ನೂ ದೊಡ್ಡ ನಾಟಕ ಮಂಡಳಿಯನ್ನು ಕಟ್ಟಲು ನಿರ್ಧರಿಸಿ ಇದಕ್ಕಾಗಿ ದೂರದ ದೆಹಲಿಗೆ ಹೋಗಿ ತನ್ನ ದಿಗಂಬರ ವೇಷದ ಹೊಸಾ ನಾಟಕ ಮಂಡಳಿಯನ್ನು ಕಡೆಗೂ ಸ್ಥಾಪನೆ ಮಾಡಿದ. ಹಳೆಯ ನಾಟಕ ಮಂಡಳಿಯ ಸದಸ್ಯರು ಸುರೇಂದ್ರ ಉಪಾಧ್ಯೆಯ ದಿಗಂಬರ ವೇಷದ ನಾಯಕತ್ವದ ಆಧ್ಯಾತ್ಮಿಕ ನಾಟಕ ಮಂಡಳಿಯಲ್ಲೂ ಸೇರ್ಪಡೆಯಾದರು. ಕಾಲಾನುಕ್ರಮದಲ್ಲಿ ನಾನಾವರ್ಗದ ಮತ್ತಷ್ಟು ಜನ ಚತುರ ನಟರು ಈ ಕಂಪನಿಯಲ್ಲಿ ನುಸುಳಿಕೊಂಡರು. ಹೀಗೆ ಇವ ರೆಲ್ಲರೂ ಸೇರಿ ಜನರ ದುಡಿಮೆಯನ್ನು ವೇದಿಕೆಯನ್ನಾಗಿ ಮಾಡಿಕೊಂಡು ಅಖಿಲಭಾರತ ಮಟ್ಟದಲ್ಲಿ ಜನರನ್ನು ಸೆಳೆಯಲು ವಂಚಿಸಲು ಶೋಷಿಸಲು ಪ್ರಾರಂಭಮಾಡಿದರು. ದಿಗಂಬರ ವೇಷಧಾರಿಯ ಚಾತುರ್ಯ, ಮಾತಿನ ಮೋಡಿ, ಬೃಹದಾಕಾರದ ಪೆಂಡಾಲು, ನಟರ ಮೆರವಣಿಗೆ ಕಣ್ಣು ಕುಕ್ಕಿಸುವ ಪ್ರಚಾರ—ಇವುಗಳನ್ನೆಲ್ಲಾ ಕಂಡ ಜನರು ಮಾರು ಹೋದರು. ಸಮ್ಮೋಹನಾಸ್ತ್ರಕ್ಕೆ ಒಳಗಾದರು.

ಮುಂದಿನ ಅಧ್ಯಾಯಗಳು ಸುರೇಂದ್ರ ಉಪಾಧ್ಯೆ ಉರುಫ್ ಪಾರ್ಶ್ವಕೀರ್ತಿಗಳು ಉರುಫ್ ವಿದ್ಯಾನಂದ ಮುನಿಗಳ ವರ್ಣರಂಜಿತ ಜೀವನ ಚರಿತ್ರೆಯನ್ನು ವಿಷಯಾನು ಗುಣವಾಗಿ ವಿವರವಾಗಿ ಬಯಲು ಮಾಡುತ್ತವೆ.

ಅಧ್ಯಾಯ : ಹದಿನಾಲ್ಕು

# ಸೋಗಿನ ಮುನಿಧರ್ಮ

ಜೈನ ಸಿದ್ಧಾಂತದ ಪ್ರಕಾರ ಸಾಧುವೆನಿಸಬೇಕಾದರೆ ಆರನೆ ಗುಣಸ್ಥಾನ (ಪ್ರಮತ್ತವಿರತ)ಕ್ಕಾದರೂ ಸಾಧಕನಾದವನು ಏರಿರಬೇಕು. ಈತ ಏಳನೇ ಗುಣ ಸ್ಥಾನದ ಅಪ್ರಮತ್ತವಿರತ (ಆತ್ಮನಲ್ಲಿ ಸಾವಧಾನವಾಗಿರುವಿಕೆ) ಅವಸ್ಥೆಯನ್ನು ತಲುಪಿದ ಸಂದರ್ಭದಲ್ಲಿ ಇಪ್ಪತೆಂಟು ಮೂಲ ಗುಣಗಳನ್ನು ಪರಿಪಾಲನೆ ಮಾಡ ಬೇಕು.

(1) ಅಹಿಂಸೆ (2) ಸತ್ಯ (3) ಅಚೌರ್ಯ (4) ಬ್ರಹ್ಮಚರ್ಯ (5) ಅಪರಿಗ್ರಹ–ಇವು ಐದು ಮಹಾವ್ರತಗಳು. (6) ಈರ್ಯಾ ಸಮಿತಿ (ಹಗಲು ಮುಂದಿನ ನಾಲ್ಕು ಮೊಳ ದಾರಿಯನ್ನು ಚೆನ್ನಾಗಿ ನೋಡುತ್ತಾ ನಡೆಯುವುದು) (7) ಭಾಷಾಸಮಿತಿ (ಸದಾ ಹಿತಕರವಾದ ಪ್ರಾಮಾಣಿಕವಾದ ಮಾತುಗಳನ್ನಾಡುವುದು) (8) ಏಷಣಾ ಸಮಿತಿ (ದಿನಕ್ಕೊಂದಾವರ್ತಿ ಶುದ್ಧ ಆಹಾರ ಸ್ವೀಕರಿಸುವುದು) (9) ಆದಾನ ನಿಕ್ಷೇಪಣ (ಶಾಸ್ತ್ರ, ಪಿಂಛ, ಇವುಗಳನ್ನು ನೋಡಿ ಇಡುವುದು ತೆಗೆದುಕೊಳ್ಳುವುದು.) (10) ಪ್ರತಿಷ್ಠಾಪನಾ ಸಮಿತಿ (ಜೀವರಹಿತ ಶುದ್ಧ ಭೂಮಿಯಲ್ಲಿ ಮಲ ಮೂತ್ರ ವಿಸರ್ಜಿಸುವುದು)—ಈ ಐದು ಸಮಿತಿಗಳು. (11) ಕಣ್ಣು (12) ಕಿವಿ (13) ಮೂಗು (14) ನಾಲಿಗೆ (15) ಚರ್ಮ –ಈ ಪಂಚೇಂದ್ರಿಯಗಳನ್ನು ನಿಗ್ರಹಿಸಿ ಸಂಯಮಿ ಗಳಾಗಿರುವುದು. (16) ಸಾಮಾಯಿಕ (17) ಸ್ತವನ (18) ವಂದನ (19) ಪ್ರತಿಕ್ರಮಣ(ಆತ್ಮಶೋಧನೆ ಮಾಡಿಕೊಳ್ಳುವುದು) (20) ಪ್ರತ್ಯಾಖ್ಯಾನ (ಅಯೋಗ್ಯ ವಾದುದನ್ನು ತ್ಯಾಗಮಾಡುವುದು) (21) ಕಾಯೋತ್ಸರ್ಗ (22) ಅಸ್ನಾನ (ಸ್ನಾನ ಮಾಡದಿರುವುದು) (23)ಕ್ಷಿತಿಶಯನ (ಸ್ವಚ್ಛ ನೆಲದ ಮೇಲೆ ಮಲಗುವುದು) (24) ವಸ್ತ್ರತ್ಯಾಗ ಮಾಡುವುದು (25) ಒಪ್ಪತ್ತು ಸ್ವಲ್ಪ ಆಹಾರ ತೆಗೆದುಕೊಳ್ಳುವುದು (26) ನಿಂತು ಊಟಮಾಡುವುದು (27) ಲೋಚು (28) ಹಲ್ಲು ತಿಕ್ಕದೆ ಇರುವುದು.

ಇವು ಇಪ್ಪತ್ತೆಂಟು ಮೂಲ ಗುಣಗಳು. ಇವುಗಳನ್ನು ತಪ್ಪದೆ ಅನುಸರಿಸಿದ ರೇನೇ ದಿಗಂಬರ ಮುನಿಯ ಅರ್ಹತೆ ಪ್ರಾಪ್ತವಾಗುತ್ತದೆ. ದಿಗಂಬರ ಮುನಿಯ ಮುಂದಿನ ಹಂತದವರಾದ ಉಪಾಧ್ಯಾಯ ಮುನಿಗಳು ನಾಲ್ಕು ಜ್ಞಾನಗಳು, ಶಾಸ್ತ್ರದ ಹನ್ನೊಂದು ಅಂಗಗಳು, ಹದಿನಾಲ್ಕು ಪೂರ್ವಗಳು—ಇವುಗಳನ್ನೆಲ್ಲಾ ತಿಳಿದು ಆಚರಿಸಿ ಬೋಧಿಸುವವರಾಗಿರುತ್ತಾರೆ. ಇದಕ್ಕೂ ಮೇಲಿನ ಪದವಿ ಆಚಾರ್ಯರಾದ

ದಿಗಂಬರ ಮುನಿಗಳದು ಇವರು ಹನ್ನೆರಡು ಪ್ರಕಾರದ ತಪಗಳನ್ನೂ, ದಶ ಧರ್ಮ ಗಳನ್ನೂ, ಆರು ಆವಶ್ಯಕ ಕ್ರಿಯೆಗಳನ್ನೂ ಐದು ಆಚಾರಗಳನ್ನೂ ತ್ರಿಗುಪ್ತಿಗಳನ್ನೂ —ಹೀಗೆ ಒಟ್ಟು ಮೂವತ್ತಾರು ಗುಣಗಳನ್ನು ಅವಶ್ಯಕವಾಗಿ ಪರಿಪಾಲಿಸಬೇಕು.

ದಿಗಂಬರ ಮುನಿಯು ಆಚಾರ್ಯನಾಗುವುದು ಸುಲಭವೇನಲ್ಲ. "ಗೃಹಸ್ಥಾಶ್ರಮ ದಲ್ಲಿ ನಿಂದ್ಯ ಆಚರಣೆ ಮತ್ತು ನಿಂದ್ಯ ವ್ಯವಹಾರಗಳನ್ನು ಮಾಡಿರಕೂಡದು ಸದ್ಯಕ್ಕಿನ ಭೋಗ, ಸಂಪತ್ತುಗಳನ್ನು ಬಿಟ್ಟು ವಿರಕ್ತನಾಗಿರಲೇ ಬೇಕು. ಎರಡನೆಯವರ ಪ್ರಶ್ನೆ ಗಳಿಗೆ ಗಾಬರಿಯಾಗದೆ ಕೂಡಲೇ ಉತ್ತರವನ್ನು ಕೊಡುವಂಥವನಿರಬೇಕು. ಗುರುವಿನ ಹತ್ತಿರ ಪ್ರಾಯಶ್ಚಿತ್ತವೇ ಮೊದಲಾದ ಸೂತ್ರಗಳನ್ನು ಕಲಿತಂಥವನೂ, ಮೂವತ್ತಾರು ಗುಣಗಳ ಧಾರಕನೂ, ಆಗಿರಬೇಕು. ಸಮಸ್ತ ಸಂಘದ ಸಾಕ್ಷಿಯಾಗಿ ಗುರುವು ಇಂಥ ಪುರುಷನಿಗೇನೇ ಆಚಾರ್ಯ ಪದವನ್ನು ಕೊಡುತ್ತಾನೆ ಈ ಗುಣಗಳಿಲ್ಲದವನಿಗೆ ಆಚಾರ್ಯ ಪದವನ್ನು ಕೊಟ್ಟರೆ ಧರ್ಮ ತೀರ್ಥದ ಲೋಪವಾಗುತ್ತದೆ. ಮಿಥ್ಯಾ ಮಾರ್ಗದ ಪ್ರವೃತ್ತಿಯು ಉಂಟಾಗುತ್ತದೆ, ಹೆಚ್ಚುತ್ತದೆ. ಸಮಸ್ತ ಸಂಘವುಸ್ವೇಚ್ಛಾ ಚಾರಿಯಾಗುತ್ತದೆ. ಅಲ್ಲದೆ ಸೂತ್ರ ಮತ್ತು ಆಚಾರಗಳ ಪರಂಪರೆಯು ಇಲ್ಲದಂತಾಗು ತ್ತದೆ."[1]

ಭಗವಾನ್ ಕುಂದಕುಂದಾಚಾರ್ಯರು ಜೈನ ಮುನಿಗಳ ದಿಗಂಬರ ರೂಪಿನ ವಿಚಾರವನ್ನು ಪ್ರಸ್ತಾಪಮಾಡುತ್ತಾ ಕೇವಲ ಬಟ್ಟೆ ಕಳಚಿ ಪಿಂಛ, ಕಮಂಡಲ ಹಿಡಿದಾಕ್ಷಣ ಅವರು ಮುನಿಯಲ್ಲ ಎಂಬಂಶವನ್ನು ನಿದರ್ಶನವೊಂದರ ಮೂಲಕ ಸ್ಪಷ್ಟ ಪಡಿಸುತ್ತಾರೆ: "ಸಾಧಕನು ಕೇವಲ ದೇಹದಿಂದ ನಗ್ನನಾದರೆ ತೀರಲಿಲ್ಲ. ಅವನ ಮನಸ್ಸು ಎಲ್ಲಕ್ಕೂ ಮೊದಲು ನಗ್ನವಾಗಲೇ ಬೇಕು. ಬರೇ ನಗ್ನವಾಗುವುದರಿಂದ ಮುಕ್ತಿ ದೊರೆಯುವಹಾಗಿದ್ದರೆ ಪಶುಪಕ್ಷಿಗಳಿಗೂ ಅದು ದೊರೆತೀತು"[2] ಇದರಿಂದ ಮುನಿಯಾಗುವವನು ಮನಃ ಪೂರ್ವಕವಾಗಿ ಎಲ್ಲವನ್ನೂ ತ್ಯಾಗಮಾಡಬೇಕಾಗುತ್ತದೆ. ಎಂದರೆ ಅವನು ಹದಿನಾಲ್ಕು ಅಂತರಂಗ ಪರಿಗ್ರಹಗಳು ಮತ್ತು ಹತ್ತು ಬಹಿರಂಗ ಪರಿ ಗ್ರಹಗಳನ್ನು ಬಿಡಲೇ ಬೇಕು. ಇಂತಹ ಸಮಸ್ತ ಪರಿಗ್ರಹಗಳಿಂದ ಬಿಡುಗಡೆ ಹೊಂದಿದ ಮುನಿಯು ಶುಭಚಂದ್ರಾಚಾರ್ಯರು ತಮ್ಮ "ಜ್ಞಾನಾರ್ಣವ"ದಲ್ಲಿ ಹೇಳುವಂತೆ "ಬೆಟ್ಟವೆಂಬ ಊರಿನಲ್ಲಿ ವಾಸಮಾಡಬೇಕಾಗುತ್ತದೆ. ಅದರಲ್ಲಿನ ಗುಹೆಯೇ ಅವನ ಮನೆ ಯಾಗುತ್ತದೆ. ಬಂಡೆಗಲ್ಲೇ ಹಾಸಿಗೆಯಾಗುತ್ತದೆ. ಚಂದ್ರಕಿರಣಗಳೇ ದೀಪವಾಗು ತ್ತದೆ. ಮೃಗಗಳೇ ಸಹಚರರಾಗುತ್ತಾರೆ." ಶರೀರದ ಮೇಲಿನ ಮಲವೇ ಆಭರಣ ವಾಗುತ್ತದೆ. ದಿಕ್ಕುಗಳೇ ವಸ್ತ್ರಗಳಾಗುತ್ತವೆ.

---

1. 'ರತ್ನ ಕರಂಡಕ ಶ್ರಾವಕಾಚಾರ'ದ ಟೀಕೆ, ಪುಟ 346. ಪ್ರಕಾಶಕರು : ಗುಲಾಬ ಚಂದ ಹೀರಾ ಚಂದದೋಶೀ. ಜೈನ ಸಂಸ್ಕೃತಿ ಸಂರಕ್ಷಕ ಸಂಘ, ಸೊಲ್ಲಾಪುರ.

2. ಜೈನಧರ್ಮ–ಮಿರ್ಜಿ ಅಣ್ಣಾರಾಯ ಪುಟ 474

ಈ ರೀತಿಯಲ್ಲಿರುವ ಮುನಿಯು ಪವಿತ್ರಾತ್ಮನನ್ನು ಉಳ್ಳವನಾಗಿ ಭವ ಬಂಧನದಿಂದ ಬಿಡುಗಡೆ ಹೊಂದಿ ಮೋಕ್ಷಗಾಮಿಯಾಗುವನು.

ಹೀಗೆ ಜೈನ ಸಿದ್ಧಾಂತದಲ್ಲಿ ಪ್ರತಿಪಾದಿಸಿರುವಂತೆ ಆ ಆ ಹಂತದ ಗುಣಗಳನ್ನು ನಿಜವಾಗಿಯೂ ಹೊಂದಿದ್ದು ಅದರಂತೆ ಪ್ರಾಮಾಣಿಕವಾಗಿ ಆಚರಿಸುವವರ ಮುನಿ ಧರ್ಮ ಸಾರ್ಥಕವಾಗುತ್ತದೆ. ಹಾಗಲ್ಲದೆ ಜೈನಸಿದ್ಧಾಂತಕ್ಕೆ ಅಪಚಾರವೆಸಗಿ ತಮ್ಮ ತಮ್ಮ ಸ್ವಾರ್ಥ, ದೌರ್ಬಲ್ಯ ಐಲುತನಕ್ಕೆ ತಕ್ಕಂತೆ ಮುನಿ ಧರ್ಮವನ್ನು ಅರ್ಥಹೀನ ಗೊಳಿಸಿ ಆಚರಿಸುವವರ ಮುನಿಧರ್ಮ ನಿರರ್ಥಕವಾಗಿ ಸೋಗಿನ ಮುನಿಧರ್ಮವಾಗು ತ್ತದೆ. ಶೇಡಬಾಳದ ಸುರೇಂದ್ರ ಉಪಾಧ್ಯೆ ಅರ್ಥಾತ್ ವಿದ್ಯಾನಂದರು ಆಯ್ಕೆ ಮಾಡಿಕೊಂಡಿರುವುದು ಸೋಗಿನ ಮುನಿಧರ್ಮವೆಂಬುದರಲ್ಲಿ ಇನ್ನು ಯಾವ ಸಂಶಯವೂ ಉಳಿದಿಲ್ಲ. ಜೈನ ಸಿದ್ಧಾಂತದ ನಿಜವಾದ ಪರಿಚಯವುಳ್ಳವರು ವಿದ್ಯಾನಂದರ ಬೂಟಾಟಿಕೆಯ ನಡವಳಿಕೆಗಳನ್ನು ಬಹಳ ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲರು.

ಅಧ್ಯಾಯ : ಹದಿನೈದು

# ವಸತಿ ವ್ಯವಸ್ಥೆಯ ರಹಸ್ಯ

ಪೂರ್ವ ಕಾಲದಲ್ಲಿ ದಿಗಂಬರ ಮುನಿಗಳು ಕಾಡಿನ ಗುಹೆಗಳಲ್ಲಿ ವಾಸಿಸುತ್ತಿದ್ದರು ಕ್ರಿ.ಶ. 8–9ನೇ ಶತಮಾನದ ಹೊತ್ತಿಗೆ ಊರುಗಳಲ್ಲಿ ವಾಸಮಾಡಲಾರಂಭಿಸಿದರು. ಒಂಭತ್ತನೇ ಶತಮಾನದಲ್ಲಿದ್ದ ಪ್ರಸಿದ್ಧ ಆಚಾರ್ಯ ಗುಣಭದ್ರನು ತನ್ನ ಆತ್ಮಾನು ಶಾಸನ ಗ್ರಂಥದಲ್ಲಿ ಮುನಿಗಳು ಊರಿನಲ್ಲಿ ವಾಸಿಸುವುದನ್ನು ವಿಡಂಬನೆ ಮಾಡುತ್ತಾನೆ : "ರಾತ್ರಿಯಲ್ಲಿ ಎಲ್ಲ ಕಡೆಯ ಮೃಗಗಳೂ ಹೆದರಿ ಊರ ನೆರೆಯಲ್ಲಿ ಬಂದು ವಾಸಿಸುತ್ತವೆ. ಅವುಗಳಂತೆ ಈ ಕಾಲದ ತಪಸ್ವಿಗಳೂ ಕೂಡ ಕಾಡನ್ನು ಬಿಟ್ಟು ಊರಲ್ಲಿ ಬಂದು ವಾಸಿಸು ತ್ತಾರೆ. ಇದು ಬಹಳ ದುಃಖದ ಸಂಗತಿಯಾಗಿದೆ."[1] ಮುಂದೆ ಶಿಥಿಲಾಚಾರವು ಬೆಳೆಯುತ್ತಾ ಹೋದಂತೆ ಶಿವಕೋಟಿ ಆಚಾರ್ಯರ ಹೆಸರಿನಿಂದ ಪ್ರಸಿದ್ಧವಾಗಿರುವ 'ರತ್ನಮಾಲಾ' ಗ್ರಂಥದಲ್ಲಿ ಮುನಿಗಳು ಅರಣ್ಯವನ್ನು ಬಿಟ್ಟು ಜಿನಮಂದಿರಗಳಲ್ಲಿ ವಾಸಿ

---

1. "ಇತಸ್ತತಶ್ಚ ತ್ರಸ್ಯನ್ತೋ ವಿಭಾವರ್ಯಾಂ ಯಥಾ ಮೃಗಾಃ ।
ವನಾದ್ವಿಶನ್ತ್ಯುಪಗ್ರಾಮಂ ಕಲೌ ಕಷ್ಟಂ ತಪಸ್ವಿನಃ" ॥ ೧೯೭॥

—ಆತ್ಮಾನುಶಾಸನ

ಸುವ ನಿಯಮ ಮಾಡಲಾಯಿತು[1] ಇದನ್ನೇ ಚೈತ್ಯವಾಸವೆನ್ನುತ್ತಾರೆ. ಈ ಚೈತ್ಯ ವಾಸವನ್ನು ಮುಂದಿನವರಾರೂ ವಿರೋಧಿಸಿದಂತೆ ಕಾಣುವುದಿಲ್ಲ. ಈ ಕಾಲದಲ್ಲಿ ಎಲ್ಲ ಊರುಗಳಲ್ಲಿಯೂ ಮುನಿಗಳಿಗೆ ಜಿನಮಂದಿರಗಳಲ್ಲಿಯೇ ವಸತಿ ವ್ಯವಸ್ಥೆ ಮಾಡುವುದು ಸಂಪ್ರದಾಯವಾಗಿದೆ.

### ಗೃಹವಾಸ

ಮುನಿಗಳ ವಸತಿ ವಿಚಾರದಲ್ಲಿ ಶಾಸ್ತ್ರೋಕ್ತ ಸಂಪ್ರದಾಯ ಮೇಲಿನಂತಿರುವಾಗ ವಿದ್ಯಾನಂದರು ಇದಕ್ಕೆ ಸಂಪೂರ್ಣ ವ್ಯತಿರಿಕ್ತವಾಗಿ ನಡೆದುಕೊಳ್ಳುತ್ತಿದ್ದಾರೆ. ಇವರು ವಾಸ್ತವ್ಯ ಹೂಡಿದ ಕಡೆಗಳಲ್ಲಿ ಇವರ ವಾಸಕ್ಕಾಗಿ ಭವ್ಯವಾದ, ಆಧುನಿಕ ಸೌಕರ್ಯ ಗಳಿಂದ ಕೂಡಿದ ಮನೆಗಳೇ ಇವರಿಗೆ ಬೇಕು. 1971ರಲ್ಲಿ ಇವರು ಇಂದೂರಿಗೆ ಬಂದಾಗ ಅಲ್ಲಿನವರು ದೇವಸ್ಥಾನವೊಂದರಲ್ಲಿ ವಸತಿ ವ್ಯವಸ್ಥೆ ಮಾಡಿದರು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ವಿದ್ಯಾನಂದರು ತಮ್ಮ ದಳ್ಳಾಳಿಗಳ ಮೂಲಕ ವಾಸಸ್ಥಾನ ವನ್ನು ಮನೆಯೊಂದಕ್ಕೆ ಬದಲಾಯಿಸಿಕೊಂಡರು.

ದಿಗಂಬರ ಮುನಿಗಳು ಗೃಹಸ್ಥರು ವಾಸಮಾಡುವ ಮನೆಗಳಲ್ಲಿ ಇಳಿದುಕೊಳ್ಳು ವುದು ಶಾಸ್ತ್ರಕ್ಕೆ ವಿರುದ್ಧವಾದ ಸಂಗತಿ. ಆದರೆ ವಿದ್ಯಾನಂದರಿಗೆ ಗೃಹಸ್ಥರ ಮನೆ ಗಳಲ್ಲಿ ವಾಸಮಾಡುವುದು ನೀರು ಕುಡಿದಷ್ಟು ಸುಲಭ. ಉತ್ತರಭಾರತದ ಜನರಿಗೆ ಇದೆಲ್ಲಾ ಚಿರಪರಿಚಿತ. ಕರ್ನಾಟಕದಲ್ಲಿ ಇವರು ಸಂಚಾರ ಕಾಲದಲ್ಲಿ ಗೃಹಸ್ಥರ ಮನೆ ಗಳಲ್ಲಿ ಅಂಜಿಕೆಯೇ ಇಲ್ಲದಂತೆ ತಂಗಿರುವುದು ಎಲ್ಲರಿಗೂ ತಿಳಿದ ವಿಚಾರವಾಗಿದೆ.

ವಿದ್ಯಾನಂದರು ಶ್ರಾವಕರನ್ನು ಸ್ವತಃ ಒತ್ತಾಯಪಡಿಸಿ ಅವರ ಮನೆಗಳಲ್ಲಿ ಉಳಿದುಕೊಳ್ಳುವುದಕ್ಕಾಗಿ ಅಂಗಲಾಚುವುದು ಬಹು ಜನರಿಗೆ ತಿಳಿದಿಲ್ಲ. ಇವರು ಮಧ್ಯಪ್ರದೇಶದಲ್ಲಿ ಸಂಚಾರ ಮಾಡುತ್ತಿದ್ದಾಗ ಒಮ್ಮೆ, ಶ್ರೀ ಶಾಂತಿಲಾಲ್ ಪಾಟನಿ c/o ಪಾಟನಿ ಅಂಡ್ ಕಂಪನಿ, ರತ್ಲಂ (ಮಧ್ಯಪ್ರದೇಶ)— ಈ ವಿಳಾಸದಾರರನ್ನು ದ್ದೇಶಿಸಿ "ನಾಳೆ ನಿಮ್ಮ ಮನೆಗೆ ಆಹಾರಕ್ಕೆ ಬರುತ್ತೇನೆ. ರಾತ್ರಿ ನಿಮ್ಮ ಮನೆ ಯಲ್ಲಿಯೇ ಉಳಿದುಕೊಳ್ಳುತ್ತೇನೆ" ಎಂದು ಕೇಳಿದರು. ಅದಕ್ಕೆ ಶಾಂತಿಲಾಲ್ ಪಾಟನಿಯವರು "ನೀವು ಆಹಾರಕ್ಕೆ ಬೇಕಾದರೆ ಬನ್ನಿ, ಸ್ವಾಗತವುಂಟು. ಆದರೆ ಮನೆ ಯಲ್ಲಿ ಉಳಿದುಕೊಳ್ಳಬೇಡಿ. ಇದು ಮುನಿಧರ್ಮಕ್ಕೆ ವಿರುದ್ಧ. ಮನೆಯಲ್ಲಿ ನೀವು ಉಳಿದುಕೊಂಡರೆ ನೋಡಿದ ಜನ ಏನನ್ನುತ್ತಾರೆ!" ಎಂದು ಉತ್ತರ ಕೊಟ್ಟರು. ಇದಕ್ಕೆ ವಿದ್ಯಾನಂದರು " ಏನು ಹೇಳುತ್ತಾರೆ. ನಾನು ಹೇಳಿದಂತೆ ಕೇಳುತ್ತಾರೆ.

---

1. "ಕಲೌ ಕಾಲೇ ವನೇ ವಾಸೋ ವರ್ಜ್ಯತೇ ಮುನಿಸತ್ತಮೈಃ ।
ಸ್ಥೀಯತೇ ಚ ಜಿನಾಗಾರೇ ಗ್ರಾಮಾದಿಷು ವಿಶೇಷತಃ" ॥ ೨೨ ॥

—ರತ್ನಮಾಲಾ

ಇರಲಿ ಹಾಗಿರಲಿ ನಾನು ನಾಳೆ ಬರುತ್ತೇನೆ" ಎಂದು ಪಂತ್ತ ಬಿಡದೆ ಅವರ ಮನೆಯಲ್ಲಿ ತಂಗುವ ಆಸೆಯನ್ನು ತೋರಿದರು. ಆದರೆ ಜೈನಶಾಸ್ತ್ರವನ್ನು ಬಲ್ಲ ಶ್ರಾವಕರಾದ ಪಾಟನಿಯವರು "ಬೇಡ ಮಹಾರಾಜರೆ, ನೀವು ಆಹಾರಕ್ಕೂ ಬರುವುದು ಬೇಡ! ಮನೆಯಲ್ಲಿ ತಂಗುವುದೂ ಬೇಡ. ನಮಸ್ಕಾರ" ಎಂದು ಅಲ್ಲಿಂದ ಹೊರಟುಬಂದರು.

ವಿದ್ಯಾನಂದರು 1980ರಲ್ಲಿ ಶ್ರವಣಬೆಳಗೊಳಕ್ಕೆ ಬರುವ ಮುಂಚೆ ಜೂನ್ ತಿಂಗಳಲ್ಲಿ ಚಿತ್ರದುರ್ಗ ಜಿಲ್ಲೆಯ ತಮ್ಮ ದಳ್ಳಾಳಿಗಳೊಬ್ಬರ ಮನೆಯಲ್ಲಿ ಮೂರು ದಿವಸ ಗಳ ಕಾಲ ಬಿಡಾರ ಮಾಡಿದ್ದರು. ಜುಲೈ ತಿಂಗಳಲ್ಲಿ ಶ್ರವಣಬೆಳಗೊಳಕ್ಕೆ ಬಂದು ತಮಗಾಗಿಯೇ ಕಟ್ಟಿದ್ದ ಅತ್ಯಾಧುನಿಕ ಮನೆಯೊಂದರಲ್ಲಿ ಬಿಡಾರ ಹೂಡಿದ ಮೇಲೆ ಮೈಸೂರು ಜಿಲ್ಲೆ ಸಾಲಿಗ್ರಾಮದ ಕೆಲವರು ಇವರಲ್ಲಿಗೆ ಬಂದು ತಮ್ಮ ಊರಿಗೆ ಬರು ವಂತೆ ಆಹ್ವಾನ ನೀಡಿದರು. ವಿದ್ಯಾನಂದರು ತಮ್ಮ ವಾಸಕ್ಕಾಗಿ ಪ್ರತ್ಯೇಕವಾದ ಒಂದು ಆರ್. ಸಿ. ಸಿ. ಮನೆಯನ್ನು ಒದಗಿಸುವುದಾದರೆ ಬರಲು ಸಿದ್ಧವೆಂದು ಹೇಳಿದರು. ಎಲ್ಲಾ ಮುನಿಗಳಿಗೂ ದೇವಸ್ಥಾನದಲ್ಲಿಯೇ ವಸತಿ ವ್ಯವಸ್ಥೆ ಮಾಡುವ ಸಾಲಿಗ್ರಾಮದ ಜನರಿಗೆ ಇವರ ಕೋರಿಕೆ ವಿಚಿತ್ರವಾಗಿ ಕಂಡಿತು. ಈ ಕೋರಿಕೆಗೆ ಒಪ್ಪದೆ ಜಿನಮಂದಿ ರದ ವಾಸ್ತವ್ಯವನ್ನೇ ಪ್ರತಿಪಾದಿಸಿದರು. ಇದಕ್ಕೆ ಏನೆಂದರೂ ಸಿದ್ಧರಿಲ್ಲದ ವಿದ್ಯಾ ನಂದರು ಕೈ ಅಲ್ಲಾಡಿಸಿದರು. ಸಾಲಿಗ್ರಾಮದ ಜನರು ಮನೆ ಬಯಸುವ ಮುನಿ ನಮ್ಮ ಊರಿಗೆ ಬರದಿದ್ದರೆ ನಷ್ಟವೇನಿಲ್ಲ ಎಂದುಕೊಂಡು ಹಿಂತಿರುಗಿದರು.

### ಪ್ರವಾಸಿ ಮಂದಿರದಲ್ಲಿ

ವಿದ್ಯಾನಂದರು ತಮ್ಮ ವಸತಿ ವ್ಯವಸ್ಥೆಯ ಶಿಥಿಲಾಚಾರದ ವಿಷಯದಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಪ್ರವಾಸಿ ಮಂದಿರಗಳಲ್ಲಿಯೂ ವಾಸ್ತವ್ಯ ಹೂಡು ತ್ತಾರೆ. ಪ್ರವಾಸಿ ಮಂದಿರಗಳಲ್ಲಿ ಮಾಂಸಾಹಾರದ ಸರಬರಾಜಿರುವುದು ಎಲ್ಲರಿಗೂ ತಿಳಿದ ಸಂಗತಿ. ಮೂಕ ಪ್ರಾಣಿಗಳ ವಧೆ ನಿರಂತರವಾಗಿ ನಡೆಯುವ ಇಂತಹ ಹಿಂಸಾ ಚಾರದ ಸ್ಥಳಗಳಲ್ಲಿ ವಾಸ್ತವ್ಯ ಹೂಡಬಾರದು ಎಂಬುದು ಮುನಿವಿದ್ಯಾನಂದರಿಗೆ ತಿಳಿ ದಿಲ್ಲ! ತಾ॥ 25, 26, ಮಾರ್ಚಿ 1981—ಈ ಎರಡು ದಿನಗಳಂದು ವಿದ್ಯಾನಂದರು ಶಿವಮೊಗ್ಗ ಜಿಲ್ಲೆಯ ಬಿ. ಆರ್. ಪ್ರಾಜೆಕ್ಟಿನ ಪ್ರವಾಸಿ ಮಂದಿರದಲ್ಲಿ ವಾಸ್ತವ್ಯ ಹೂಡಿದ್ದರು. ಈ ವಿಷಯ ಪೂರ್ವಭಾವಿಯಾಗಿ ತಾ॥ 15-3-1981ರ 'ಗೊಮ್ಮಟ ವಾಣಿ' (ಶ್ರವಣಬೆಳಗೊಳ ಜೈನಮಠದ ಪಾಕ್ಷಿಕ ಪತ್ರಿಕೆ)ಯಲ್ಲಿ ಸೂಚಿತವಾಗಿತ್ತು. ಹೀಗೆ ಮಾಂಸಾಹಾರ ಸರಬರಾಜು ಮಾಡುವ ಪ್ರವಾಸಿ ಮಂದಿರದಲ್ಲಿ ಜೈನದಿಗಂಬರ ಮುನಿಗಳು ಉಳಿಯಬಹುದಾದರೆ, ಶಾಕಾಹಾರದ ಸರಬರಾಜು ಉಳ್ಳ ಹೋಟೆಲುಗಳಲ್ಲಿ ಅವರು ಏಕೆ ಉಳಿದುಕೊಳ್ಳಬಾರದು ? ಇಂತಹ ಹೋಟೆಲುಗಳು ಪ್ರವಾಸಿ ಮಂದಿರ ಗಳಿಗಿಂತಲೂ ನೂರು ಪಾಲು ಸಾವಿರ ಪಾಲು ಹೆಚ್ಚು ಶ್ರೇಷ್ಠವಲ್ಲವೆ ? ಎಂದು ಈ ಸಂದರ್ಭದಲ್ಲಿ ಜನರು ಮಾತನಾಡಿಕೊಂಡರು.

ಜೈನಶಾಸ್ತ್ರಗ್ರಂಥಗಳು ನಿಂದ್ಯ ಆಚರಣೆಗಳನ್ನು ಮಾಡುವ ಜನರು ತಂಗುವ ಸ್ಥಳಗಳಲ್ಲಿ ಸಾಧುಗಳು ಇಳಿದುಕೊಳ್ಳಬಾರದು ಎಂದು ತಿಳಿಸುತ್ತವೆ. ಎಲ್ಲರಿಗೂ ನೀತಿ ಹೇಳುವ ವಿದ್ಯಾನಂದರು ಬಹುಪಾಲು ನಿಂದ್ಯ ಆಚರಣೆಗಳೇ ನಡೆಯುವ ಪ್ರವಾಸಿ ಮಂದಿರಗಳಲ್ಲಿ ವಾಸ್ತವ್ಯ ಹೂಡಲು ಮನಸ್ಸು ಮಾಡಿದ್ದು ಅವರ ಕಪಟತನಗಳ ಮತ್ತು ಸೋಗಿನ ಮುನಿಧರ್ಮದ ಸ್ಪಷ್ಟ ನಿದರ್ಶನವಾಗಿದೆ.

## ತ್ಯಾಗಿನಿವಾಸ

1981ರ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕದ ಸಮಯದಲ್ಲಿ ವಿದ್ಯಾನಂದರ ವಾಸಕ್ಕಾಗಿ ಕೋಣೆಗಳು, ಒಳಕೋಣೆಗಳು, ಫ್ಲಶೌಟ್ ಕಕ್ಕಸಿನ ವ್ಯವಸ್ಥೆಯುಳ್ಳ, ಇನ್ನಿತರ ಆಧುನಿಕ ಸೌಕರ್ಯಗಳುಳ್ಳ 'ತ್ಯಾಗಿನಿವಾಸ' ಎಂಬ ಹೆಸರಿನ ಒಂದು ಭವ್ಯ ಬಂಗಲೆಯನ್ನೇ ಕಟ್ಟಿದರು. ಅದರಲ್ಲೂ ಸಮವಸರಣದ ಪ್ರತೀಕವಾದ ರಥವನ್ನು ನಿಲ್ಲಿಸುವ ಮನೆಯನ್ನೇ ಧ್ವಂಸ ಮಾಡಿ ಈ ಬಂಗಲೆಯನ್ನು ಕಟ್ಟಿದರು. ದಿಕ್ಕೇ ಅಂಬರವಾಗಿರಬೇಕಾದ ಮುನಿಗೆ ಇಂತಹ ಸುಸಜ್ಜಿತ ಮನೆಯ ಅಗತ್ಯ ಒದಗಿಬಿತ್ತು !

ಈ ತ್ಯಾಗಿ ನಿವಾಸದಲ್ಲಿ ವಿದ್ಯಾನಂದರು ವಾಸ ಮಾಡುತ್ತಿರುವ ಸಮಯದಲ್ಲಿಯೇ ಇದೇ ಕಟ್ಟಡದಲ್ಲಿ ಶ್ರೀಮಂತ ಸ್ತ್ರೀಯೊಬ್ಬರು ವಾಸ ಮಾಡಲು ವಿದ್ಯಾನಂದರು ಅವಕಾಶ ಮಾಡಿಕೊಟ್ಟರು. ಈ ತ್ಯಾಗಿನಿವಾಸವನ್ನು ಸರ್ಪದಂತೆ ಕಾಯಲು ಒಬ್ಬ ಕಾವಲುಗಾರನೂ ಇದ್ದನು. ಕಟ್ಟಡದೊಳಕ್ಕೆ ಹೋಗಲಿಚ್ಛಿಸುವ ಇತರ ಜನರು ಈ ದ್ವಾರಪಾಲಕನ ಅನುಮತಿ ಪಡೆದು ಹೋಗಬೇಕಾಗಿತ್ತು. ದ್ವಾರಪಾಲಕ ಮೊದಲು ವಿದ್ಯಾನಂದರ ಬಳಿಗೆ ಹೋಗಿ ಅವರ ಸರಿಯಾದ ಇರುವಿಕೆಯನ್ನು ತಿಳಿದುಬಂದು ಜನರಿಗೆ ಪ್ರವೇಶಾವಕಾಶ ನೀಡುತ್ತಿದ್ದ. ಕೆಲವು ಸಂದರ್ಭಗಳಲ್ಲಿ ಗಂಟೆ ಗಂಟೆಗಳವರೆಗೆ ಜನಗಳಿಗೆ ಅನುಮತಿಯನ್ನು ನಿರಾಕರಿಸಲಾಗುತ್ತಿತ್ತು. ಕೆಲವು ಸಂದರ್ಭಗಳಲ್ಲಿ ಬೇಕಾದವರಿಗೆ ಮಾತ್ರ ಪ್ರವೇಶ ಸಿಗುತ್ತಿತ್ತು. ಹೆಂಗಸರಂತೂ ಒಳಗಡಯಿದ್ದ ಸಂದರ್ಭದಲ್ಲಿ ಪ್ರವೇಶವನ್ನು ಖಡಾಖಂಡಿತವಾಗಿ ನಿರಾಕರಿಸಲಾಗುತ್ತಿತ್ತು.

ಯಾವ ಗ್ರಂಥಿಗಳೂ ಇಲ್ಲದೆ ನಿರ್ಗ್ರಂಥನಾಗಿ ಬಯಲಿನಲ್ಲಿ ಆತ್ಮಸಾಧನೆ ಮಾಡಬೇಕಾದ ದಿಗಂಬರ ಮುನಿಗಳಾದ ವಿದ್ಯಾನಂದರಿಗೆ ಇವೆಲ್ಲಾ ಪರಿಗ್ರಹಗಳ ಸಂಪರ್ಕ ಏರುಪುದು, ಅವರು ವಾಸಿಸುವ ಬಂಗಲೆಗಳಲ್ಲಿ ರಹಸ್ಯ ಚಟುವಟಿಕೆಗಳು ನಡೆಯುತ್ತವೆ ಎಂಬುದನ್ನು ದೃಢಪಡಿಸುತ್ತದೆ. ವಿದ್ಯಾನಂದರು ಹೋದ ಹೋದ ಕಡೆಗಳಲ್ಲೆಲ್ಲಾ ಅವರ ದಲ್ಲಾಳಿಗಳು ಮುಂದಾಗಿ ಧಾವಿಸಿ ಅವರ ಸುಸಜ್ಜಿತ ವಾಸಕ್ಕೆ ತಕ್ಕ ಏರ್ಪಾಟುಗಳನ್ನು ಮಾಡುತ್ತಾರೆ.

## ನಿಜವಾದ ಕಾರಣ

ವಿದ್ಯಾನಂದರು ತಮ್ಮ ವಾಸಕ್ಕಾಗಿ ಸುಸಜ್ಜಿತ ಮನೆಗಳನ್ನೇ ಬಯಸಲು ಮೂಲ ಕಾರಣವೆಂದರೆ ಅವರು ಸೋಗಿನ ಮುನಿಯಾಗಿರುವುದೇ ಆಗಿದೆ. ದೇವಸ್ಥಾನಗಳಲ್ಲಿ ಉಳಿದುಕೊಂಡರೆ ಜೈನಸಿದ್ಧಾಂತದಂತೆ ಲೋಚು (ತನ್ನ ತಲೆ ಮತ್ತು ಮುಖದ ಕೂದಲುಗಳನ್ನು ಕೈಗಳಿಂದ ಕಿತ್ತುಕೊಳ್ಳುವುದು) ಮಾಡಿಕೊಳ್ಳಬೇಕು. ಸ್ನಾನ ಮಾಡದೆ ಇರಬೇಕು ಹಲ್ಲುಜ್ಜದೇ ಇರಬೇಕು. ಮಲಮೂತ್ರ ವಿಸರ್ಜನೆಗೆ ಊರಿನ ಹೊರಭಾಗಕ್ಕೆ ಹೋಗಬೇಕು. ರಾತ್ರಿ ಹೊತ್ತು ನೆಲದ ಮೇಲೆ ಮಲಗಬೇಕು. ಹೀಗೆ ಇಪ್ಪತ್ತೆಂಟು ಮೂಲಗುಣಗಳಲ್ಲಿ ಅನೇಕ ಗುಣಗಳನ್ನು ಕಡ್ಡಾಯವಾಗಿ ಅನಿವಾರ್ಯ ವಾಗಿ ಆಚರಿಸಲೇಬೇಕಾಗುತ್ತದೆ. ಇದರ ಬದಲು ದ್ವಾರಪಾಲಕನಿರುವ ಬಂಗಲೆಯಲ್ಲಿ ವಾಸ ಮಾಡಿದರೆ ಈ ಕಠೋರ ಆಚರಣೆಗಳಿಂದ ತಪ್ಪಿಸಿಕೊಂಡು ಇಪ್ಪತ್ತೆಂಟು ಮೂಲ ಗುಣಗಳನ್ನು ಆಚರಿಸುತ್ತಿದ್ದೇನೆಂದು ಜನರ ಮುಂದೆ ನಟನೆ ಮಾಡಬಹುದು. ವಿದ್ಯಾ ನಂದರು ಈ ನಟನೆಯಲ್ಲಿ ಚೆನ್ನಾಗಿ ಪಳಗಿದ್ದಾರೆ.

ವಿದ್ಯಾನಂದರು ಬಂಗಲೆಯಲ್ಲಿ ವಾಸ ಮಾಡುವಾಗ ರೇಜರ್‌ನಿಂದ ಸ್ವತಃ ಮುಖ ಕ್ಷೌರ ಮಾಡಿಕೊಳ್ಳುತ್ತಾರೆ. ಹಲ್ಲುಗಳನ್ನೂ ಸ್ವಚ್ಛವಾಗಿ ಉಜ್ಜುತ್ತಾರೆ. ಉಜ್ಜುವು ದೇನು ಬಂತು! ಇವರು ದೆಹಲಿಯಲ್ಲಿದ್ದಾಗ ಗುಟ್ಟಾಗಿ ಹಲ್ಲು ಕಟ್ಟಿಸಿಕೊಂಡಿರುವ ಸಂಗತಿ ಈಗಾಗಲೇ ಬಹು ಜನರಿಗೆ ತಿಳಿದಿರುವ ಸಂಗತಿ. ಈ ಕಟ್ಟಿಸಿಕೊಂಡಿರುವ ಹಲ್ಲುಗಳನ್ನು ಶುದ್ಧ ಮಾಡುತ್ತಾರೆ. ಹಾಗೆಯೇ ಸ್ನಾನವನ್ನೂ ಮಾಡುತ್ತಾರೆ. ಅಷ್ಟೇ ಅಲ್ಲ ಮಲಗುವಾಗ ಶಯನ ಸಾಧನಗಳನ್ನೂ ಉಪಯೋಗಿಸುತ್ತಾರೆ. ಈ ಕಾರ್ಯ ಗಳನ್ನೆಲ್ಲಾ ಮಾಡುವಾಗ ಬಂಗಲೆಯ ಒಳಗಡೆಗೆ ಇವರ ಪ್ರಮುಖ ದಳ್ಳಾಳಿಗಳನ್ನು ಬಿಟ್ಟು ಇತರರಾರಿಗೂ ಪ್ರವೇಶವಿರುವುದಿಲ್ಲ. ಜನ ಸಾಮಾನ್ಯರು ಬಂಗಲೆಯಲ್ಲಿ ವಾಸ ಮಾಡುವುದರ ರಹಸ್ಯಗಳನ್ನು ತಿಳಿಯಲು ಪ್ರಯತ್ನ ಪಡುವುದಿಲ್ಲ. ಏಕೆಂದರೆ ಅವರು ಡಂಬಾಚಾರದ ಪ್ರಚಾರ, ಮೆರವಣಿಗೆ, ದೊಡ್ಡಚಪ್ಪರ, ಚಾತುರ್ಯದ ಮಾತು ಇವು ಗಳಿಂದಾಗಿ ಮರುಳಾಗಿ ಹೋಗಿರುತ್ತಾರೆ.

## ಪಿತೂರಿಗಳ ಕೇಂದ್ರ

ವಿದ್ಯಾನಂದರು ವಾಸಿಸುವ ಬಂಗಲೆಗಳು ಅವರು ನಿರಂತರವಾಗಿ ಹೂಡುವ ಪಿತೂರಿಗಳ ಮಂತ್ರಾಲೋಚನೆಯ ಕೇಂದ್ರಗಳೆಂಬುದು ಇನ್ನೊಂದು ವಾಸ್ತವವಾದ ಸತ್ಯವಾಗಿದೆ. ಅವರು ಆಡುವ ಆಧ್ಯಾತ್ಮಿಕ ನಾಟಕಗಳ ನೇಪಥ್ಯಗೃಹಗಳಾಗಿಯೂ ಅವು ಬಳಕೆಯಾಗುತ್ತವೆ. ತಮ್ಮ ದಳ್ಳಾಳಿಗಳನ್ನು ಒಳಗೆ ಸೇರಿಸಿಕೊಂಡು ಹೊರಗೆ ದ್ವಾರಪಾಲಕನನ್ನು ನಿಲ್ಲಿಸಿ ಮಂತ್ರಾಲೋಚನೆ ಮಾಡಿ ತಮ್ಮ ಸ್ವಾರ್ಥ ಸಾಧನೆಯನ್ನು ಮಾಡಿಕೊಳ್ಳುವ ತಂತ್ರಗಳನ್ನು ರೂಪಿಸುವುದು, ವಿರೋಧಿಗಳನ್ನು ನಿರ್ನಾಮ ಮಾಡುವ

ಗುಂತ್ರದ ಹಿತಮರಿಗಳನ್ನು ನಿಯೋಜಿಸುವುದು. ತಮ್ಮ ಲೈಂಗಿಕ ವ್ಯವಹಾರಗಳನ್ನು ನಡೆಸುವುದು-ಇತ್ಯಾದಿ ಕಾರ್ಯಗಳೆಲ್ಲಾ ವಿದ್ಯಾನಂದರು ವಾಸಿಸುವ ಮನೆಗಳಲ್ಲಿ ನಿರ್ವಿಘ್ನವಾಗಿ ನಡೆಯುತ್ತವೆ.

ವಿದ್ಯಾನಂದರಿಗೆ ಬಂಗಲೆಗಳಲ್ಲಿ ವಾಸಮಾಡಲು ಅವಕಾಶ ಮಾಡಿಕೊಡದೇ ಹೋದರೆ ಅವರ ಶೇ. 90 ಭಾಗ ಗುಪ್ತಚಟುವಟಿಕೆಗಳನ್ನು ತಡೆಗಟ್ಟಬಹುದು. ''ನಾನು ಎಲ್ಲವನ್ನೂ ಬಿಟ್ಟವನು. ಒಂದು ತುಂಡು ಲಂಗೋಟಿಯೂ ನನಗಿಲ್ಲ. ನಾನು ಯಾರಿಗೂ ಹೆದರುವುದಿಲ್ಲ'' ಎಂದು ಬಹಿರಂಗ ಸಭೆಗಳಲ್ಲಿ ಸ್ವಪ್ರಶಂಸೆ ಮಾಡಿಕೊಳ್ಳುವ ಈ ದಿಗಂಬರ ಮುನಿಗಳು ಕಾವಲು ವ್ಯವಸ್ಥೆಯಿರುವ ಮನೆಗಳಲ್ಲಿ ವಾಸ ಮಾಡುವುದನ್ನು ಏಕೆ ಬಿಟ್ಟಿಲ್ಲ ಎಂಬುದನ್ನು ಆಲೋಚಿಸಿದಾಗ ಇವರಲ್ಲಿ ರಹಸ್ಯಗಳುಂಟು. ತೆರೆಮರೆಯ ಕೃತ್ಯಗಳುಂಟು, ಬೇಕಾದಷ್ಟು ಪರಿಗ್ರಹಗಳುಂಟು, ಅನುರಾಗಗಳುಂಟು ಎಂಬುದು ಸುಲಭವಾಗಿ ಅರ್ಥವಾಗುತ್ತದೆ. ಆದರೆ ನಾಚಿಕೆಗೇಡಿನ ಸಂಗತಿಯೆಂದರೆ ಇವರಿಂದ ಪ್ರಯೋಜನ ಪಡೆದವರು, ಹೊಗಳಿಸಿಕೊಂಡವರು ಎಲ್ಲರೂ ಇವರಿಗಾಗಿ ಬಂಗಲೆ ವ್ಯವಸ್ಥೆಯನ್ನು ಮಾಡಲು ಮುಂದಾಗುತ್ತಾರೆಯೇ ಹೊರತು ಜೈನಶಾಸ್ತ್ರಗ್ರಂಥಗಳನ್ನು ನೋಡಲು ಹೋಗುವುದಿಲ್ಲ. ತನ್ನ ಆತ್ಮೋದ್ಧಾರವನ್ನು ಮಾಡಿಕೊಳ್ಳುವುದಕ್ಕಾಗಿ ಗೃಹತ್ಯಾಗಮಾಡಿ ದೀಕ್ಷಾಬದ್ಧನಾದ ಮುನಿ ಮತ್ತೆ ಸುಸಜ್ಜಿತವಾದ ಗೃಹವನ್ನು ಬಯಸಿ ಗೃಹಸ್ಥನಾಗುತ್ತಿರುವುದು ಎಷ್ಟೊಂದು ಹಾಸ್ಯಾಸ್ಪದ ಸಂಗತಿ ಎಂಬುದು ಇಂಥವರಿಗೆ ಅರ್ಥವಾಗುವುದಿಲ್ಲ.

## ಬಂಗಲೆಯೊಳಗಿನ ಗುಡಿಸಲು ವಾಸ

ವಿದ್ಯಾನಂದರು ಉತ್ತರಭಾರತದಲ್ಲಿ ಅದೂ ದೆಹಲಿಯ ಸುತ್ತಮುತ್ತಲ ಊರುಗಳಲ್ಲಿಯೇ ಹೆಚ್ಚು ಚಾತುರ್ಮಾಸದ ನಾಟಕಗಳನ್ನು ಆಡಿದ್ದಾರೆ. ಈ ಸಮಯಗಳಲ್ಲೆಲ್ಲಾ ತಾವು ವಾಸ ಮಾಡಿದ ಆರ್. ಸಿ. ಸಿ. ಕಟ್ಟಡದ ಒಳಗೆ ಗುಡಿಸಲನ್ನು ಹಾಕಿಸಿಕೊಂಡು ವಾಸ ಮಾಡಿದ್ದಾರೆ. ಗುಡಿಸಲು ಸರಳವಾಸದ ಸಂಕೇತ. ಇದನ್ನು ಆಧುನಿಕವಾದ ಭವ್ಯ ಬಂಗಲೆಗಳ ಒಳಗೆ ಹಾಕಿಸಿಕೊಂಡು ವಾಸಮಾಡಿದರೆ ಅದು ಡಂಬಾಚಾರದ ಪ್ರತೀಕವಾಗುತ್ತದೆ. ಅಲ್ಲದೆ ಚಳಿಗೆ ಹೆದರುವುದನ್ನೂ ಸಹ ಅದು ಸೂಚಿಸುತ್ತದೆ. ಈ ಗುಡಿಸಲಿಗೆ ಬಾಗಿಲು ಸಹ ಇರುತ್ತದೆ. ಇಂತಹ ಗುಡಿಸಲಿನ ಒಳಗೆ ಇವರು ಸೇರಿಕೊಳ್ಳುತ್ತಾರೆ, 1970ರಲ್ಲಿ ಬೆತ್ತಲೆಯಾಗಿ ಹಿಮಾಲಯಕ್ಕೆ ಹೋಗಿ ಬಂದರು. ಅಂತಹ ಚಳಿಗೂ ಇವರು ಹೆದರಲಿಲ್ಲ ಎಂದು ಇನ್ನಿಲ್ಲದಂತೆ ಪ್ರಚಾರ ಮಾಡಿಸಿಕೊಂಡ ಈ ಮುನಿಗಳು ಅನಂತರ ಆದರಲ್ಲೂ ಕಿಟಕಿ ಬಾಗಿಲುಗಳಿಂದ ಸುಭದ್ರವಾದ ಸಿಮೆಂಟ್ ಕಟ್ಟಡದ ಒಳಗಿನ ಗುಡಿಸಲನ್ನು ಹೇಗೆ ಇಷ್ಟಪಟ್ಟರು ? ಇದು ಚಳಿಗೆ ಹೆದರದಿರುವ ಲಕ್ಷಣವೆ ? ನಿಜಸಂಗತಿಯೆಂದರೆ ಗುಡಿಸಲು ಇರುವ ಭವನದೊಳಕ್ಕೆ ರಾತ್ರಿಹೊತ್ತು

ಇತರರಾರೂ ಬರದಂತೆ ಸರ್ಪಕಾವಲಿನ ವ್ಯವಸ್ಥೆಯಿರುತ್ತದೆ. ಈ ಮುನಿಗಳು ಗುಡಿಸಲಿನ ಒಳಗಡೆ ಬೆಚ್ಚಗೆ ಹೊದ್ದುಕೊಂಡು ಇಷ್ಟಪಟ್ಟವರೊಂದಿಗೆ ಟೇಪ್‌ರೆಕಾರ್ಡರಿನ ಮಧುರ ಸಂಗೀತದೊಂದಿಗೆ ಮಲಗುತ್ತಿದ್ದುದು ಇವರ ಪ್ರಮುಖ ದಳ್ಳಾಳಿಗಳಿಗೆ ಮಾತ್ರವಲ್ಲದೆ ಇತರರಿಗೂ ತಿಳಿದ ಸಂಗತಿಯಾಗಿದೆ. ಇವರ ದಳ್ಳಾಳಿಗಳಲ್ಲಿ ಒಬ್ಬನಾದ ನರಿಗೌಡನಿಗೆ 1980ರಲ್ಲಿ ಕಾರಣಾಂತರಗಳಿಂದ ಕೆಲವು ತಿಂಗಳುಗಳ ಕಾಲ ದಳ್ಳಾಳಿ ಪದವಿಯಿಂದ ಉಚ್ಚಾಟನೆಯಾದಾಗ ಅವನು ಈ ವಿಷಯಗಳನ್ನೆಲ್ಲಾ ಬಹಿರಂಗ ಪಡಿಸಿರುವುದು ವಿದ್ಯಾನಂದರಿಗೆ ಬಹುಶಃ ಇನ್ನೂ ತಿಳಿದಿಲ್ಲವೆಂದು ಕಾಣುತ್ತದೆ.

ಅಧ್ಯಾಯ : ಹದಿನಾರು

# ಅಸ್ನಾನ, ಅದಂತಧಾವನ, ಲೋಚು —ಈ ವಿಧಿಗಳ ಉಲ್ಲಂಘನೆ

ಜೈನ ಸಾಧುಗಳಲ್ಲಿ ದಿಗಂಬರ ಮುನಿಗಳು ತಮ್ಮ ಜೀವನ ಪರ್ಯಂತ ಸ್ನಾನ ಮಾಡಲೇಬಾರದೆಂದು ಜೈನಮುನಿ ಧರ್ಮದಲ್ಲಿ ಸ್ಪಷ್ಟವಾಗಿ ವಿಧಿಸಲಾಗಿದೆ. ಮಲ ಪರೀಷಹವನ್ನು ಸಹಿಸದೇ ಇರುವವರನ್ನು ಮುನಿಯೆಂದು ಕರೆಯಲೇ ಬರುವುದಿಲ್ಲ. ಈ ವಿಧಿಯಲ್ಲಿ ಯಾವ ಮತಭೇದವೂ ಇಲ್ಲ. ಇದೊಂದು ಮುನಿಯ ಮಹಾನ್ ಗುಣವಾಗಿದೆ. ಇದರಿಂದ ಪ್ರಾಣಸಂಯಮ, ಇಂದ್ರಿಯಸಂಯಮ ಇವೆರಡರ ರಕ್ಷಣೆಯಾಗುತ್ತದೆ.

ವಿದ್ಯಾನಂದರು ಈ ಮೂಲಗುಣವನ್ನು ಪಾಲನೆ ಮಾಡದೆ ಬಂಗಲೆಯಲ್ಲಿ ವಾಸ ಮಾಡುವ ಸಮಯಗಳಲ್ಲಿ ಗೋಪ್ಯವಾಗಿ ಸ್ನಾನ ಮಾಡುತ್ತಾರೆ. ಇವರ ಆಪ್ತದಳ್ಳಾಳಿಗಳು ಸ್ನಾನ ಸಾಧನಗಳನ್ನು ಒದಗಿಸುತ್ತಾರೆ. ಮನೆಗಳಲ್ಲಿ ಇವರು ವಾಸಮಾಡುವುದೇ ಇದಕ್ಕೆ ಸ್ಪಷ್ಟವಾದ ಸಾಕ್ಷ್ಯವಾಗಿದೆ. ಸ್ನಾನ ಮಾಡುವುದಿಲ್ಲ ಎಂದು ಹೇಳುವುದಾದರೆ ಅವರು ಸ್ನಾನದ ಕೋಣೆಯಿರುವ ಮನೆಗಳಲ್ಲಿ ವಾಸ್ತವ್ಯ ಹೂಡಬೇಕಾದ ಅಗತ್ಯವಿರುತ್ತಿರಲಿಲ್ಲ. ವಿದ್ಯಾನಂದರ ಸಾಧನೆಗಳ ವಿಚಾರವಾಗಿ ಅಬ್ಬರದ ಪ್ರಚಾರ ಮಾಡುವ ಜನರು ಈ ಪ್ರಶ್ನೆಯ ಬಗೆಗೆ ಮೌನವಹಿಸುತ್ತಾರೆ ಇಲ್ಲವೆ ವಿತಂಡವಾದ ಮಾಡುತ್ತಾರೆ. ಬಂಗಲೆಯ ಹೊರಗಡೆ ದ್ವಾರಪಾಲಕರನ್ನು ನಿಲ್ಲಿಸಿ ಕದ್ದು ಸ್ನಾನ ಮಾಡುವ ಈ ಕಪಟ ಮುನಿಗಳ ಸ್ನಾನದ ರಹಸ್ಯ ಜನಸಾಮಾನ್ಯರಿಗೆ ತಿಳಿಯುವುದಿಲ್ಲ. ಜನರು, ಇವರು

ಎಲ್ಲಾ ಮುನಿಗಳಂತೆ ಸ್ನಾನ ಮಾಡುವುದಿಲ್ಲ, ಮುನಿಧರ್ಮ ಪಾಲನೆ ಮಾಡುತ್ತಿದ್ದಾರೆ ಎಂದು ನಂಬಿ ಇವರಿಗೆ ಗೌರವ ಸಲ್ಲಿಸುತ್ತಾರೆ. ಆದರೆ ಜನರಿಟ್ಟಿರುವ ನಂಬಿಕೆಗೆ ದ್ರೋಹವೆಸಗಿ ಸ್ನಾನಮಾಡುತ್ತಾ ಮುನಿಧರ್ಮದ ಪ್ರಧಾನವಾದ ಮೂಲಗುಣಕ್ಕೇ ವಿದ್ಯಾನಂದರು ಎಳ್ಳುನೀರು ಬಿಟ್ಟಿದ್ದಾರೆ.

ಬಂಗಲೆಯೊಳಗಿರುವ ಫ್ಲಶೌಟ್ ಕಕ್ಕಸು ಮನೆಯನ್ನೂ ಇವರು ಉಪಯೋಗಿಸುತ್ತಾರೆ. ಇದು ಮುನಿಗಳು ಪಾಲಿಸಲೇಬೇಕಾದ ಪ್ರತಿಷ್ಠಾಪನಾ ಸಮಿತಿಗೆ ವಿರೋಧವಾಗಿದೆ. ಬಹುತೇಕ ಇವರು ಹೋದ ಹೋದ ಕಡೆ ಇವರಿಗಾಗಿಯೇ ಪ್ರತ್ಯೇಕವಾದ ಕಕ್ಕಸು ಮನೆಯನ್ನೊಳಗೊಂಡ ಕಟ್ಟಡಗಳನ್ನು ಕಟ್ಟುವುದು ಇವರ ಮುನಿಧರ್ಮದ ವಿಪರ್ಯಾಸಕ್ಕೆ ಒಂದು ಸಾಕ್ಷಿಯಾಗಿದೆ. ಫ್ಲಶೌಟ್ ಉಪಯೋಗದಿಂದ ಸಾಕಷ್ಟು ಜೀವಹಿಂಸೆಯಾಗುತ್ತದೆ ಎಂಬುದು ವಾಸ್ತವವಾದ ಸಂಗತಿ. ಇದು ಅಹಿಂಸೆಯನ್ನು ಮಹಾವ್ರತವಾಗಿ ಆಚರಿಸುವ ಮುನಿಗಳಿಗೆ ಹೊಂದುವುದಿಲ್ಲ ಎಂಬುದನ್ನು ಜೈನಶಾಸ್ತ್ರ ಬಲ್ಲವರು ಮಾತ್ರ ತಿಳಿದಿದ್ದಾರೆ

ವಿದ್ಯಾನಂದರ ಸ್ನಾನದ ವಿಚಾರವಾಗಿ ಜನರಲ್ಲಿ ಹರಡಿರುವ ವದಂತಿಗಳಿಗೇನೂ ಕೊರತೆಯಿಲ್ಲ. ಇವರನ್ನು ನೆರಳಿನಂತೆ ಹಿಂಬಾಲಿಸುವ ಮಧ್ಯವಯಸ್ಸಿನ ಶ್ರೀಮಂತ ಮಹಿಳೆಯೊಬ್ಬಳೇ ಇವರಿಗೆ ಸ್ನಾನ ಮಾಡಿಸುತ್ತಾಳೆ ಎಂಬುದೊಂದು ಜನರಲ್ಲಿ ಬಹಳ ಪ್ರಚಾರ ಪಡೆದಿರುವ ವದಂತಿ. ಇದನ್ನು ಪ್ರತ್ಯಕ್ಷವಾಗಿ ಕಂಡವರುಂಟೇ ಎಂಬ ಪ್ರಶ್ನೆ ಮುಖ್ಯವಲ್ಲ. ಏಕೆಂದರೆ ಬಾಗಿಲು ಭದ್ರಪಡಿಸಿ ಸರ್ಪಕಾವಲು ಹಾಕಿರುವಾಗ ಒಳಗೆ ಏನು ಬೇಕಾದರೂ ನಡೆಯಬಹುದು! ವದಂತಿ ಏನೇ ಇರಲಿ ವಿದ್ಯಾನಂದರು ಸ್ನಾನ ಮಾಡುವುದಂತೂ ವಾಸ್ತವಸತ್ಯ.

## ಕೃತಕ ಹಲ್ಲಿನ ಮುನಿ

ಆಹಾರವನ್ನು ಸ್ವೀಕರಿಸಲು ಸಾಧನವಾದ ಸಹಜ ಹಲ್ಲುಗಳು ತಮ್ಮ ಸಾಮರ್ಥ್ಯವನ್ನು ಕಳೆದುಕೊಂಡಾಗ ಉದುರುತ್ತವೆ. ಹೀಗಾದಾಗ ಈ ಕಾಲದ ಗೃಹಸ್ಥರು ಕೃತಕ ಹಲ್ಲುಗಳನ್ನು ಮೊರೆಹೋಗುತ್ತಾರೆ. ಕೆಲವು ಗೃಹಸ್ಥರಂತೂ ಈ ಕೃತಕ ದಂತಗಳನ್ನು ಕಟ್ಟಿಸಿಕೊಳ್ಳಲು ಜುಗುಪ್ಸೆ ಪಟ್ಟು, ಮಜ್ಜಿಗೆ, ಗಂಜಿ ಮತ್ತಿತರ ದಂತಸಹಾಯರಹಿತ ಆಹಾರಗಳಿಂದ ಜೀವನ ಸಾಗಿಸುತ್ತಾರೆ ಇಂಥವರ ಸಂಯಮ ಮೆಚ್ಚುವಂತಹುದು. ಗೃಹಸ್ಥರಾದವರೇ ಬಿದ್ದು ಹೋಗುವ ಹಲ್ಲುಗಳ ಬಗೆಗೆ ಇಂತಹ ಅಸಾಧಾರಣ ಸಂಯಮ ತೋರಿಸುವಾಗ ಇನ್ನು ಪಂಚೇಂದ್ರಿಯಗಳ ವ್ಯಾಮೋಹವನ್ನು ಸಂಪೂರ್ಣವಾಗಿ ಬಿಟ್ಟಿರಲೇಬೇಕಾದ ದಿಗಂಬರ ಮುನಿಗಳು ಇನ್ನೆಂಥಹ ಸಂಯಮವನ್ನು ಈ ವಿಚಾರದಲ್ಲಿ ತೋರಿಸಬಾರದು! ಮುನಿಗಳಾದವರು ಜಿಹ್ವಾಚಾಪಲ್ಯವನ್ನು ಪೂರ್ಣವಾಗಿ ಬಿಟ್ಟಿರಬೇಕು. ವ್ರತನಿಷ್ಠರಾದ ಇಂತಹ ಮುನಿಗಳಿಗೆ ಹಲ್ಲುಗಳು ಬಿದ್ದಾಗ

ಶರೀರದ ನಶ್ವರತೆಯನ್ನು ಕಂಡು ಅವರ ವೈರಾಗ್ಯಭಾವನೆ ಇನ್ನೂ ಹೆಚ್ಚಾಗಬೇಕು. ಪುದ್ಗಲಸ್ವರೂಪಿಯಾದ ಹಲ್ಲುಗಳು ವೃದ್ಧಾಪ್ಯಕಾರಣವಾಗಿ ಬೀಳುವ ಸಂದರ್ಭದಲ್ಲಿ ದಿಗಂಬರ ದೀಕ್ಷೆ ತೆಗೆದುಕೊಳ್ಳುವಾಗ ವಸ್ತ್ರವನ್ನು ಕಳಚಿ ಬಿಸಾಡಿದಂತೆ ಹಲ್ಲನ್ನೂ ಸಹ ಸ್ಥಿರ ವೈರಾಗ್ಯ ಭಾವನೆಯಿಂದ ಬಿದ್ದು ಹೋಗಲು ಬಿಡಬೇಕು. ಅದರ ಬಗ್ಗೆ ಮಹತ್ವ ಸಲ್ಲದು! ಬಿದ್ದ ಹಲ್ಲಿಗೆ ಬದಲಿ ಹಲ್ಲನ್ನು ಜೋಡಿಸಿಕೊಳ್ಳುವ ಆಸೆ ಸಲ್ಲದು! ಮುನಿಗಳೂ ಸಹ ಗೃಹಸ್ಥರಂತೆ ಕೃತಕ ಹಲ್ಲುಗಳನ್ನು ಕಟ್ಟಿಸಿಕೊಂಡರೆ ಅವರ ಮುನಿಧರ್ಮವೇ ನಾಶವಾಗುತ್ತದೆ. ದಿಗಂಬರತ್ವಕ್ಕೆ ಅರ್ಥವೇ ಉಳಿಯುವುದಿಲ್ಲ. ಹಲ್ಲನ್ನು ಕಟ್ಟಿಸಿಕೊಂಡ ಮೇಲೆ ಇನ್ನು ಬಟ್ಟೆಯನ್ನೂ ಸಹ ಏಕೆ ತೊಡಬಾರದು? ಹಾಗೆಯೇ ಒಂದು ಮದುವೆಯನ್ನು ಸಹ ಏಕೆ ಮಾಡಿಕೊಳ್ಳಬಾರದು? ಸೋಗಿನ ಮುನಿಧರ್ಮವನ್ನು ಅನುಸರಿಸುವುದಕ್ಕಿಂತ ಇದು ಸಾವಿರ ಪಾಲು ಒಳ್ಳೆಯದಲ್ಲವೆ? ಎಂಬ ಅಭಿಪ್ರಾಯಗಳು ಈ ಸಂದರ್ಭದಲ್ಲಿ ಉಂಟಾಗುತ್ತವೆ.

ವಿದ್ಯಾನಂದ ಮುನಿಗಳು ಕೃತಕ ಹಲ್ಲುಗಳನ್ನು 1978ನೇ ವರ್ಷದಲ್ಲಿ ದೆಹಲಿಯಲ್ಲಿ ಕಟ್ಟಿಸಿಕೊಂಡಿದ್ದಾರೆ. ಈ ರಹಸ್ಯ ಮೊದಲು ಕೆಲವರಿಗೆ ಮಾತ್ರ ತಿಳಿದಿತ್ತು. ವಿದ್ಯಾನಂದರೊಂದಿಗೆ ಮಾತನಾಡುವಾಗ ಸೂಕ್ಷ್ಮವಾಗಿ ಗಮನಿಸಿದ ಜನರಿಗೂ ಇದು ಅರ್ಥವಾಗಿತ್ತು. ವಿದ್ಯಾನಂದರು 1980ರಲ್ಲಿ ಕೊಲ್ಲಾಪುರಕ್ಕೆ ಬಂದಾಗ ಶೇಡಬಾಳದ ಬಾಲ್ಯಕಾಲದ ಸ್ನೇಹಿತರೊಬ್ಬರು ಇವರನ್ನು ನೋಡಿದರು. ಇವರ ಕೃತಕ ಹಲ್ಲುಗಳನ್ನು ಕಂಡು ಆಶ್ಚರ್ಯಪಟ್ಟರು. ಹಿಂದೆ ಶೇಡಬಾಳಗಲ್ಲಿದ್ದಾಗ ಇದ್ದ ಹಲ್ಲುಗಳ ಸ್ಥಾನದಲ್ಲಿ ಕೃತಕ ದಂತಗಳು ವಿರಾಜಿಸುತ್ತಿದ್ದವು. ವಿದ್ಯಾನಂದರು ಹಲ್ಲುಕಟ್ಟಿಸಿಕೊಂಡಿದ್ದಾರೆ ಎಂಬುವುದರಲ್ಲಿ ಆ ವ್ಯಕ್ತಿಗೆ ಯಾವ ಅನುಮಾನವೂ ಉಳಿಯಲಿಲ್ಲ. ಕೂಡಲೇ ಅವರ ಮನಸ್ಸು "ದಿಗಂಬರ ಮುನಿಯಾಗಿದ್ದು ಕೃತಕ ದಂತಗಳ ಹಂಗಿಗೆ ಒಳಗಾಗಿರುವವರು ಇವರೆಂತಹ ಮುನಿ! ಇವರು ತಮ್ಮ ಹಿಂದಿನ ದುರಾಚಾರಗಳನ್ನು ಈಗಲೂ ಬಿಟ್ಟಿಲ್ಲವೆಂಬುದಕ್ಕೆ ಈ ಕೃತಕ ದಂತಗಳೇ ಸಾಕ್ಷಿ! ಈಗ ದಿಗಂಬರರಾಗಿ ನಾಟಕವಾಡುತ್ತಿದ್ದಾರೆ ಅಷ್ಟೆ!" ಎಂದಿತು.

ವಿದ್ಯಾನಂದರು ಶ್ರವಣಬೆಳಗೊಳದಲ್ಲಿ ನೆಲೆಸಿದ್ದಾಗ ಇವರಿಗೆ 150 ರೂಪಾಯಿಗಳನ್ನು ಸಲ್ಲಿಸಿ ಊಟ ಹಾಕಿದ ತುಮಕೂರುಜಿಲ್ಲೆಯ ತಂಡಗಗ್ರಾಮದ ಕೆಲವು ಹುಡುಗರು ವಿದ್ಯಾನಂದರು ಹಲ್ಲುಕಟ್ಟಿಸಿಕೊಂಡಿರುವುದನ್ನು ಪತ್ತೆಮಾಡಿದರು! ಮಾತುಕತೆಯ ಸಂದರ್ಭದಲ್ಲಿ ವಿದ್ಯಾನಂದರು ದೊಡ್ಡದಾಗಿ ಬಾಯಿತೆರೆದು ನಕ್ಕಾಗ ಅವರ ಕೃತಕಹಲ್ಲುಗಳು ರಹಸ್ಯವನ್ನು ಬಯಲು ಮಾಡಿದುವು. ಹುಡುಗರು ಈ ವಿಚಾರವನ್ನು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡು ದಿಗಂಬರ ಮುನಿಗಳಾದವರು ಹಲ್ಲುಗಳನ್ನು ಕಟ್ಟಿಸಿಕೊಳ್ಳಬಹುದೇ ಎಂದು ಪ್ರಶ್ನೆ ಹಾಕಿಕೊಂಡರು. ಅವರಲ್ಲಿ ಒಬ್ಬ

"ಅವರು ಕನ್ನಡಕವನ್ನು. ಹಾಕಿಕೊಳ್ಳುತ್ತಾರೆ. ಕಣ್ಣಿಗೆ ಕನ್ನಡಕ ಹಾಕಿಕೊಂಡಂತೆ ಹಲ್ಲು ಹಾಳಾದಾಗ ಹಲ್ಲನ್ನು ಕಟ್ಟಿಸಿಕೊಳ್ಳಬಹುದು" ಎಂದು ಸಮರ್ಥನೆ ಮಾಡಿದ. ತಕ್ಷಣ ಇನ್ನೊಬ್ಬ ಹುಡುಗ "ಹಾಗಾದರೆ ಮುನಿಗಳ ಮೂತ್ರಪಿಂಡಗಳು ಹಾಳಾದರೆ ಅಂಥವರಿಗೆ ಆಪರೇಷನ್ ಮಾಡಿ ಬದಲಿ ಮೂತ್ರ ಪಿಂಡಗಳನ್ನು ಜೋಡಿಸ ಬಹುದಲ್ಲವೆ ? ಇದರಲ್ಲೇನು ತಪ್ಪು ?" ಎಂದು ಪ್ರಶ್ನೆಹಾಕಿದ. ಈ ಪ್ರಶ್ನೆ ಬರುತ್ತಿದ್ದಂತೆಯೇ ಮತ್ತೊಬ್ಬ ಹುಡುಗ "ಬೇರೆಯಾರೋ ಒಬ್ಬ ಮನುಷ್ಯನ ಮೂತ್ರ ಪಿಂಡವನ್ನು ತನ್ನ ಶರೀರದಲ್ಲಿ ಜೋಡಿಸಿಕೊಳ್ಳುವುದನ್ನು ಮುನಿಯಾದವನು ಇಷ್ಟ ಪಟ್ಟಾಗ ಅದರಲ್ಲಿ ತಪ್ಪೇನಿಲ್ಲ ಎಂದು ಹೇಳಬಹುದಾದರೆ, ದಿಗಂಬರ ಮುನಿಗಳು ದಿನ ದಲ್ಲಿ ಮೂರು ಹೊತ್ತು ಸಹ ಊಟಮಾಡಬಹುದು, ಏನನ್ನು ಬೇಕಾದರೂ ತಿನ್ನ ಬಹುದು, ಬಟ್ಟೆಯನ್ನೂ ಹಾಕಿಕೊಳ್ಳಬಹುದು ಎಂದೆಲ್ಲಾ ಹೇಳಬಹುದಲ್ಲ ? ಆಗ ಮುನಿಯೆಂಬುದಕ್ಕೆ ಅರ್ಥ ಉಳಿಯುತ್ತದೆಯೆ ? ನಿಜವಾಗಿ ಇವರಾರೂ ಮುನಿಗಳೇ ಅಲ್ಲ. ಎಲ್ಲಾ ನಾಟಕದ ಮುನಿಗಳು. ನಾವು 150 ರೂಪಾಯಿ ಕೊಟ್ಟು ಈ ಊಟದ ನಾಟಕದಲ್ಲಿ ಭಾಗವಹಿಸಿ ಮೋಸಹೋದೆವು" ಎಂದು ಎಲ್ಲರ ಅವಿವೇಕವನ್ನು ಮನ ವರಿಕೆ ಮಾಡಿಕೊಟ್ಟ.

ವಿದ್ಯಾನಂದರು ಮಹಾಪುರುಷರು, ದೊಡ್ಡ ಸಂತರು, ತೀರ್ಥಂಕರನಾಮಕರ್ಮ ಕಟ್ಟಲಿರುವ ಮಹಾತ್ಮರು. ಮಹಾವ್ರತಿಗಳು ಎಂದೆಲ್ಲಾ ಇವರನ್ನು ಕಂಠಶೋಷಣೆ ಮಾಡಿಕೊಳ್ಳುತ್ತಾ ಹೊಗಳುವ ಭಟ್ಟಂಗಿಗಳು ಇವರು ಹಲ್ಲುಕಟ್ಟಿಸಿಕೊಂಡು ವ್ರತಭಂಗ ಮಾಡಿಕೊಂಡು ಕಪಟಸನ್ಯಾಸಿಪಟ್ಟ ಪಡದಿರುವುದನ್ನು ಮಾತ್ರ ಗೋಪ್ಯವಾಗಿಡುತ್ತಾರೆ.

ವಿದ್ಯಾನಂದರು ಕೃತಕ ಹಲ್ಲುಗಳನ್ನು ಕಟ್ಟಿಸಿ ಕೊಂಡಿರುವ ಕಾರಣಗಳು ಹೀಗಿವೆ. ಮೊದಲನೆಯದಾಗಿ ಇಷ್ಟಪಟ್ಟ ಆಹಾರಪದಾರ್ಥಗಳನ್ನು ತಿನ್ನುವುದಕ್ಕಾಗಿ ಈ ಹಲ್ಲು ಗಳು ಬೇಕೇಬೇಕು. ಇನ್ನು ಎರಡನೆಯದಾಗಿ ಹಲ್ಲುಬಿದ್ದ ಸ್ಥಿತಿಯಲ್ಲಿ ಜನರಮುಂದೆ ವಿಕಾರವಾಗಿ ಕಾಣಿಸಿಕೊಳ್ಳುವುದು ಇವರಿಗೆ ಇಷ್ಟವಿಲ್ಲ. ಅದರಲ್ಲೂ ಸ್ತ್ರೀಯರ ಮುಂದೆ ಹಲ್ಲಿಲ್ಲದೆ ಕಾಣಿಸಿಕೊಳ್ಳುವುದು ಸರ್ವಥಾ ಇಷ್ಟವಿಲ್ಲ ! ಹಲ್ಲುಗಳು ಬಿದ್ದಮೇಲೆ ಕೆನ್ನೆ ಗಳು ಗುಳಿಬಿದ್ದು ವಿಕಾರದ ರೂಪ ಹಾಳಾಗುವುದಿಲ್ಲವೆ ? ಮಹಾವ್ರತಿಗಳಾದ ಮುನಿ ಗಳು ರೂಪಮದವನ್ನು ಬಿಡಬೇಕು ಎಂದು ತೀರ್ಥಂಕರವಾಣಿ ಬೋಧಿಸಬಹುದು, ಆದರೆ ವಿದ್ಯಾನಂದರು ತೀರ್ಥಂಕರವಾಣಿಯನ್ನು ಜನರಿಗೆ ಹೇಳುವುದಕ್ಕಾಗಿ ಮೀಸಲಾ ಗಿಟ್ಟಿದ್ದಾರೆಯೇ ಹೊರತು ಆಚರಿಸುವುದಕ್ಕಲ್ಲ ! ಹಲ್ಲು ಬಿದ್ದ ಸ್ಥಿತಿಯಲ್ಲಿ ಫೋಟೋ ತೆಗೆಸಿಕೊಂಡು ಪತ್ರಿಕೆಗಳಲ್ಲಿ ಪ್ರಚಾರಕ್ಕೆ ಕೊಟ್ಟಾಗ ಸುಂದರವಾಗಿ ಕಾಣಲು ಸಾಧ್ಯವೆ ? ಆದ್ದರಿಂದ ಮುಖದ ಆಕಾರ ಚನ್ನಾಗಿ ಕಾಣುವುದಕ್ಕಾಗಿಯೂ ಸಹ ಹಲ್ಲು ಕಟ್ಟಿಸಿ ಕೊಂಡಿದ್ದಾರೆ ಎಂಬುದು ಎಂಥವರಿಗಾದರೂ ಅರ್ಥವಾಗುವ ವಿಚಾರ.

ಹಲ್ಲು ಕಟ್ಟಿಸಿಕೊಂಡಾಗ ದೇಹದ ಸುರಕ್ಷತೆಯನ್ನು ಬಯಸಿದಂತಾಯಿ.. ರೌದ್ರಧ್ಯಾನಕ್ಕೆ ಕಾರಣವಾಯಿತು. ಜೊತೆಗೆ ರೋಗಪರೀಷಹಕ್ಕೆ ಅಂಜಿದಂತಾಯಿತು. ಹೀಗೆ ರೌದ್ರಧ್ಯಾನ ಮತ್ತು ಪರೀಷಹಭೀತಿಯಿಂದ ಕೂಡಿ ಧರ್ಮಭ್ರಷ್ಟರಾಗಿರುವ ವಿದ್ಯಾನಂದರು ಜನರಲ್ಲಿ ನೀತಿಪ್ರಜ್ಞೆಯನ್ನು ತುಂಬಲು ಹೊರಟಿರುವುದು ತುಂಬಾ ವಿಚಿತ್ರವಾಗಿದೆ.

## ವೈದ್ಯಕೀಯ ಪರೀಕ್ಷೆ

ಜೈನಧರ್ಮದ ತತ್ತ್ವಗಳಿಗೆ ಅನುಗುಣವಾಗಿ ಮುನಿಗಳು ತಮ್ಮ ಶರೀರದ ರೋಗಗಳಿಗೆ "ಸ್ವತಃ ಚಿಕಿತ್ಸೆಯನ್ನು ಮಾಡುವುದಿಲ್ಲ. ಮಾಡಿಸಿಕೊಳ್ಳುವುದೂ ಇಲ್ಲ."[1] ಬೇನೆಯಿಂದ ಹುಟ್ಟುವ ದುಃಖವನ್ನು ಸಮಭಾವದಿಂದ ಸಹಿಸುವರು. ರೋಗದಿಂದ ವಿಚಲಿತನಾಗಿ ದೈನ್ಯತೆಯಿಂದ "ಔಷಧದ ಇಚ್ಛೆಯನ್ನು ಮಾಡುವುದಿಲ್ಲ."[2] 'ರೋಗ ಪರೀಷಹ'ವನ್ನು ತಾಳದ ಮುನಿ ಮುನಿಯಲ್ಲ.

ವಿದ್ಯಾನಂದರ ವಿಚಾರಕ್ಕೆ ಬಂದರೆ ಈ ತತ್ತ್ವಗಳೆಲ್ಲಾ ತಲೆಕೆಳಗಾದ ಸಂಗತಿ. ವಿದ್ಯಾನಂದರು ಕಾಲಕಾಲಕ್ಕೆ ಪರಿಣತರಾದ ಪಾಶ್ಚಾತ್ಯವೈದ್ಯಪದ್ಧತಿಯ ವೈದ್ಯರಿಂದ ಶರೀರದ ಚಿಕಿತ್ಸೆಯನ್ನು ಮಾಡಿಸಿಕೊಳ್ಳುತ್ತಾರೆ. ಈ ಚಿಕಿತ್ಸೆಯೂ ಸಹ ಇವರು ಬಂಗಲೆಗಳಲ್ಲಿ ವಾಸಿಸುತ್ತಿರುವ ಸಂದರ್ಭಗಳಲ್ಲಿ ಗುಟ್ಟಾಗಿ ನಡೆಯುತ್ತದೆ. ಇವರ ದಳ್ಳಾಳಿಗಳು ಮತ್ತು ಸಮೀಪವರ್ತಿಗಳು ಪ್ರಸಿದ್ಧ ವೈದ್ಯರನ್ನು ಇವರಿರುವ ಕಡೆಗೇ ಕರೆತರುತ್ತಾರೆ. ವೈದ್ಯರು ಪರೀಕ್ಷೆಮಾಡಿ ಬರೆದುಕೊಟ್ಟ ಟಾನಿಕ್ ಮತ್ತು ಮಾತ್ರೆಗಳನ್ನು ದಳ್ಳಾಳಿಗಳು ವಿದ್ಯಾನಂದರಿಗೆ ಸರಬರಾಜು ಮಾಡುತ್ತಾರೆ.

1980 ರಲ್ಲಿ ವಿದ್ಯಾನಂದರು ಶ್ರವಣಬೆಳಗೊಳಕ್ಕೆ ಬಂದು ತ್ಯಾಗಿನಿವಾಸವೆಂಬ ಭೋಗನಿವಾಸದಲ್ಲಿ ಸ್ಥಾಪಿತರಾದ ಕೂಡಲೇ ಮೈಸೂರಿನ ಸುಪ್ರಸಿದ್ಧ ಸರ್ಕಾರಿ ವೈದ್ಯರೊಬ್ಬರನ್ನು ತ್ಯಾಗಿನಿವಾಸಕ್ಕೆ ಕರೆದುಕೊಂಡು ಬಂದು ವಿದ್ಯಾನಂದರಿಗೆ ಚಿಕಿತ್ಸೆಮಾಡಿಸಿದರು. ವೈದ್ಯರು ಔಷಧಗಳನ್ನು ಬರೆದುಕೊಟ್ಟು ಹೋದರು. ನಾಲ್ಕಾರು ತಿಂಗಳುಗಳು ಕಳೆದ ಮೇಲೆ ಪುನಃ ಅದೇ ವೈದ್ಯರಿಗೆ ಕರೆಹೋಯಿತು. ಮೊದಲನೆಯ ಭೇಟಿಯಲ್ಲಿ ವಿದ್ಯಾನಂದರು ಈ ವೈದ್ಯರನ್ನು ಉಪೇಕ್ಷೆಯಿಂದ ಕಂಡಿದ್ದರು. ಈ ನೆನಪು ಚೆನ್ನಾಗಿದ್ದ ವೈದ್ಯರು ಮತ್ತೆ ಮೈಸೂರಿನಿಂದ ತ್ಯಾಗಿನಿವಾಸಕ್ಕೆ ಬರಲು ಸೌಜನ್ಯದಿಂದ ನಿರಾಕರಿಸಿದರು. ಬೇರೊಬ್ಬ ವೈದ್ಯರು ಚಿಕಿತ್ಸೆ ನಡೆಸಿದರು. ಈ ರೀತಿಯಲ್ಲಿ ವಿದ್ಯಾನಂದರಿಗೆ ದೈಹಿಕರೋಗಗಳು ಬಂದಾಗ ಗುಪ್ತವಾದ ವೈದ್ಯಕೀಯ ಚಿಕಿತ್ಸೆಗಳು ಅವರ ಸನ್ಯಾಸ ಜೀವನದುದ್ದಕ್ಕೂ ಬೇಕಾದಷ್ಟು ಬಾರಿ ನಡೆದಿವೆ.

---

1, 2. — ರತ್ನಕರಂಡಕ ಶ್ರಾವಕಾಚಾರ, ಪುಟ—611

**ಕೇಶಲೋಚ ಮಾಡದ ಮುನಿ**

ದಿಗಂಬರ ಮುನಿಗಳು ಎರಡು, ಮೂರು, ನಾಲ್ಕು ತಿಂಗಳುಗಳ ತರುವಾಯ ಆ ದಿನದಲ್ಲಿ ಉಪವಾಸವಿದ್ದು ತನ್ನ ಕೈಗಳಿಂದಲೇ ತಲೆಗಡ್ಡಮೀಸೆಗಳ ಕೂದಲುಗಳನ್ನು ಕಿತ್ತುಕೊಳ್ಳಬೇಕು. ಇದನ್ನು 'ಲೋಚು' ಎಂದು ಕರೆಯುತ್ತಾರೆ. ಇದೂ ಸಹ ಮುನಿಯ ಒಂದು ಮಹಾನ್ ಗುಣವಾಗಿದೆ. ಎರಡು ತಿಂಗಳಿಗೊಮ್ಮೆ ಕೇಶಲೋಚ ಮಾಡಿಕೊಳ್ಳುವುದು ಉತ್ತಮಲೋಚವೆನಿಸುತ್ತದೆ. ಮೂರು ತಿಂಗಳಿಗೊಮ್ಮೆ ಮಾಡಿಕೊಳ್ಳುವುದು ಮಧ್ಯಮಲೋಚವಾಗುತ್ತದೆ. ನಾಲ್ಕುತಿಂಗಳಿಗೊಮ್ಮೆ ಮಾಡಿಕೊಳ್ಳುವುದು ಜಘನ್ಯಲೋಚವಾಗುತ್ತದೆ. ಲೋಚನ್ನು ಮಾಡಿಕೊಳ್ಳುವುದೂ ಸಹ ತಪಸ್ಸೇ ಆಗಿದೆ.

ವಿದ್ಯಾನಂದರು ಮುನಿಧರ್ಮದ ಇತರ ವಿಧಿಗಳನ್ನು ಉಲ್ಲಂಘಿಸಿರುವಂತೆ ಈ ಕೇಶಲೋಚವಿಧಿಗೂ ಸಹ ಪೂರ್ಣವಾಗಿ ವಿದಾಯ ಹೇಳಿದ್ದಾರೆ. 1963 ರಲ್ಲಿ ದೇಶಭೂಷಣ ಮುನಿಗಳಿಂದ ಇವರು ದೀಕ್ಷೆವಹಿಸಿದಾಗ ಕೇಶಲೋಚವಿಧಿ ನಡೆಯಿತೋ ಇಲ್ಲವೊ ಎಂಬುದು ತಿಳಿಯದು. ಆದರೆ ದೇಶ ಭೂಷಣರಿಂದ ಪ್ರತ್ಯೇಕಗೊಂಡಮೇಲೆ ಇವರ ಕೇಶಲೋಚ ಸಮಾರಂಭ ಯಾವಾಗಲೂ ನಡೆದಿಲ್ಲ. 1980 ರಲ್ಲಿ ಇವರು ಕರ್ನಾಟಕಕ್ಕೆ ಬಂದಾಗಿನಿಂದಲಂತೂ ಇವರು ಕೇಶಲೋಚವನ್ನು ಯಾವ ಊರಿನಲ್ಲಿಯೂ ಮಾಡಿಕೊಂಡಿಲ್ಲವೆಂಬುದು ಸುಸ್ಪಷ್ಟ. ಬೇರೆ ಮುನಿಗಳ ಲೋಚನ್ನು ಜನರು ಕಂಡಿದ್ದಾರೆ. ಆದರೆ 'ವಿದ್ಯಾನಂದ ಮುನಿಗಳ ಲೋಚು' ಎಂಬುದು ಪರಂಗಿಯವನ ಹತ್ತಿರ ಸುಣ್ಣ ಕೇಳಿದಂತೆ ಎಂಬಂತಾಗಿದೆ.

ವಿದ್ಯಾನಂದರ ಲೋಚನ ವಿಚಾರವಾಗಿ ಸುಳ್ಳು ಮಾಹಿತಿಯನ್ನು ನೀಡುವ ದಳ್ಳಾಳಿಗಳ ಜಾಲಕ್ಕೆ ಕೊರತೆಯೇನಿಲ್ಲ. ಅವರು ಸಾಕಿಕೊಂಡಿರುವ ದಳ್ಳಾಳಿಗಳು ಮತ್ತು ಸ್ಥಳೀಯವಾಗಿ ಒದಗುವ ಕೆಲವು ದಳ್ಳಾಳಿಗಳು ''ವಿದ್ಯಾನಂದರು ಬಹಿರಂಗವಾಗಿ ಲೋಚು ಮಾಡಿಕೊಳ್ಳುವುದಿಲ್ಲ' ಎಂದು ಪ್ರಚಾರ ಮಾಡುತ್ತಾರೆ. ಅಲ್ಲದೆ ''ಈ ದಿನ ಬೆಳಗಿನ ಜಾವ ವಿದ್ಯಾನಂದರು ಲೋಚು ಮಾಡಿಕೊಂಡರು ನಾವು ಖುದ್ದಾಗಿ ನೋಡಿದೆವು'' ಎಂದು ಸುಳ್ಳು ಸುದ್ದಿ ಹೇಳಿ ಜನಗಳನ್ನು ನಂಬಿಸಲು ಪ್ರಯತ್ನಿಸುತ್ತಾರೆ. ಈ ನಾಟಕ ವಿದ್ಯಾನಂದರು ದಿಗಂಬರರಾದಾಗಿನಿಂದ ನಿರಂತರವಾಗಿ ನಡೆದಿದೆ. ಈ ಲೋಚಿನ ವಿಚಾರದಲ್ಲಿ ವಾಸ್ತವವಾದ ಸಂಗತಿಯೆಂದರೆ ವಿದ್ಯಾನಂದರು ರೇಜರ್ ಉಪಯೋಗಿಸಿ ಸ್ವತಃ ಮುಖಕ್ಷೌರ ಮಾಡಿಕೊಳ್ಳುತ್ತಾರೆ. ಇದು ಬಹಳ ಗೋಪ್ಯವಾಗಿ ನಡೆಯುತ್ತದೆ ದ್ವಾರಪಾಲಕನನ್ನು ಇಟ್ಟುಕೊಂಡಿರುವ ಬಂಗಲೆಯವಾಸವನ್ನು ಪೂರ್ಣವಾಗಿ ಬಿಟ್ಟುಕೊಟ್ಟು ಮುಕ್ತಪ್ರವೇಶಾವಕಾಶವಿರುವ ದೇವಾಲಯಗಳಲ್ಲಿ ಇವರು ಇಳಿದುಕೊಳ್ಳಲು ಸಿದ್ಧರಾದರೆ ಇವರ ಈ ಲೋಚಿನ ಗುಟ್ಟು ಬಯಲಾಗುತ್ತದೆ.

## ನಟನೆಯ ಪೇಚು

ವಿದ್ಯಾನಂದರ ಲೋಚನ ನಾಟಕ ಅವರಿಗೆ ಅನೇಕ ಕಡೆಗಳಲ್ಲಿ ಪೇಚಿನ ಸ್ಥಿತಿಯನ್ನೂ ಉಂಟು ಮಾಡಿದೆ. ಉದಾಹರಣೆಗೆ ಹೇಳಬಹುದೆಂದರೆ ವಿದ್ಯಾನಂದರು 1980 ರ ಮೇ ತಿಂಗಳಿನಲ್ಲಿ ಬೆಳಗಾವಿ ನಗರದಲ್ಲಿ ಬೀಡುಬಿಟ್ಟಿದ್ದಾಗ ಒಂದು ಸಂಜೆ ಅವರು ಕಾರ್ಯಕರ್ತರೊಬ್ಬರಿಗೆ "ಬೆಳಿಗ್ಗೆ ನಾವು ಲೋಚು ಮಾಡಿಕೊಳ್ಳುವವರಿದ್ದೇವೆ. ಆದ್ದರಿಂದ ನಮ್ಮ ಬೆಳಗಿನ ಪ್ರವಚನ ಇರುವುದಿಲ್ಲ ಅದಕ್ಕಾಗಿ ವ್ಯವಸ್ಥೆ ಮಾಡಬೇಡಿ" ಎಂದು ಸೂಚನೆ ಕೊಟ್ಟರು. ಈ ಕಾರ್ಯಕರ್ತರು ವಿದ್ಯಾನಂದರ ಲೋಚಿನ ಅಂತರಂಗ-ಬಹಿರಂಗ ನಾಟಕವನ್ನು ತಿಳಿದು ಕೊಂಡವರಲ್ಲ ! ಇವರು ತಮ್ಮ ಸಹ ಕಾರ್ಯಕರ್ತರಿಗೆ ಈ ಬಗ್ಗೆ ಸೂಚನೆಕೊಡುವಾಗ "ಬೆಳಿಗ್ಗೆ ಮಹಾರಾಜರು ಲೋಚುಮಾಡಿಕೊಳ್ಳುತ್ತಾರೆ" ಎಂದು ತಿಳಿಸಿದರು ಈ ಸುದ್ದಿ ಒಬ್ಬರಿಂದ ಇನ್ನೊಬ್ಬರಿಗೆ ಹರಡಿ ಬೆಳಿಗ್ಗೆ ವಿದ್ಯಾನಂದರು ಲೋಚು ಮಾಡಿಕೊಳ್ಳುವ ಸಮಾರಂಭವಿದೆ ಎಂದಾಗಿ ಬಿಟ್ಟಿತು.

ದೊಡ್ಡ ಪ್ರಚಾರ, ದೊಡ್ಡ ಚಪ್ಪರ, ದೊಡ್ಡ ಮಾತುಗಳನ್ನು ನೋಡಿ ಕೇಳಿ ಭ್ರಮೆಗೊಳಗಾಗಿದ್ದ ಜನ 'ದೊಡ್ಡ ಮುನಿಗಳ ಲೋಚು' ಎಂದ ಕೂಡಲೇ ಕೇಳಬೇಕೆ ! ಚಕ್ರವಾಕ ಪಕ್ಷಿಗಳಂತೆ ಹಗಲಾಗುವುದನ್ನೇ ಕಾಯುತ್ತಿದ್ದು ಹಗಲಾದೊಡನೆ ನೂರಾರು ಜನರು ವಿದ್ಯಾನಂದರ ಬಂಗಲೆಯ ಕಡೆ ಧಾವಿಸಿದರು ಇತ್ತ ಭವನದ ಒಳಗಡೆಯಿದ್ದ ವಿದ್ಯಾನಂದರು ಆ ಹೊತ್ತಿಗಾಗಲೇ ಸದ್ದಿಲ್ಲದೆ ಕ್ಷೌರಮಾಡಿಕೊಂಡುಬಿಟ್ಟಿದ್ದರು. ಹೊರಗೆ ಜನಜಂಗುಳಿ ಹೆಚ್ಚಾಯಿತು. ವಿದ್ಯಾನಂದರ ಲೋಚಿನ ಭವ್ಯದೃಶ್ಯ ನೋಡಲು ಜನ ಕಾತುರರಾಗಿ ಬೇಗಬೇಗ ಬರುತ್ತಲೇ ಇದ್ದರು. ಭವನದ ಒಳಗಡೆಯಿದ್ದ ವಿದ್ಯಾನಂದರಿಗೆ ಜನರು ಜಮಾಯಿಸುತ್ತಿರುವ ಉದ್ದೇಶ ತಿಳಿದು ಪೀಕಲಾಟ ಪ್ರಾರಂಭವಾಯಿತು. ಇಂತಹ ಪೇಚಿನ ಸ್ಥಿತಿಯನ್ನು ಅವರು ನಿರೀಕ್ಷಿಸಿರಲಿಲ್ಲ ! ಲೋಚಿನ ಕಠೋರ ತಪಸ್ಸನ್ನು ಕಾಣಲು ಬಂದ ಮುಗ್ಧ ಜನರಿಗೆ ನುಣ್ಣಗಾಗಿರುವ ಮುಖವನ್ನು ಯಾವಮುಖದಿಂದ ತೋರಿಸುವುದು ! ಈಗ ವಿದ್ಯಾನಂದರಿಗೆ ಜನರನ್ನು ವಂಚಿಸದೆ ಬೇರೆ ಮಾರ್ಗವೆಲ್ಲಿ ? ಸರಿ ಅವರ ದಳ್ಳಾಳಿಗಳು ಮುನಿ-ಮಹಾರಾಜರು ಈಗಾಗಲೇ ಭವನದ ಒಳಗಡೆಯೇ ಲೋಚು ಮಾಡಿಕೊಂಡುಬಿಟ್ಟಿದ್ದಾರೆ. ಎಂದು ಹೇಳಿ ಜನರನ್ನು ಸಮಾಧಾನ ಪಡಿಸಿ ಚದುರಿಸಿದರು. ನಿರಾಶರಾದ ಜನರು ಬೇಸ್ತು ಬಿದ್ದು ಹಿಂದಿರುಗಿದರು.

ತಾ. 29-3-1981 ರಂದು ನರಸಿಂಹರಾಜ ಪುರದ ಜೈನಮಠದಲ್ಲಿ ವಿದ್ಯಾನಂದರು ವಾಸ್ತವ್ಯ ಹೂಡಿದರು. ಬಂದಾಗ ಇವರ ಗಡ್ಡಮೀಸೆಗಳನ್ನು ಜನರು ಕಂಡಿದ್ದರು. ಆದರೆ ಬೆಳಿಗ್ಗೆ ಎದ್ದು ನೋಡಿದಾಗ ಯಾವಗಳಿಗೆಯಲ್ಲೋ ಅವು ಕಾಣೆಯಾಗಿದ್ದುವು. ಕ್ಷೌರಮಾಡಿಕೊಂಡಿರುವ ಮುನಿಯನ್ನು ಕಂಡು ಜನರು ಕಲಿಗಾಲದ ಮುನಿ ಎಂದು ಮಾತನಾಡಿಕೊಂಡರು. ಅನಂತರ ಅವರು ಆಹಾರವನ್ನೂ ತೆಗೆದು ಕೊಂಡುದನ್ನು ತಿಳಿದು ಜನಗಳಿಗೆ ಅವರ ಕಪಟತನದಲ್ಲಿ ಸಂಶಯವೇ ಉಳಿಯಲಿಲ್ಲ.

ಅಧ್ಯಾಯ : ಹದಿನೇಳು

# ನಾಚಿಕೆಗೇಡಿನ ಆಹಾರ ಸ್ವೀಕಾರವಿಧಿ

ಜೈನ ಧರ್ಮದ ಶಾಸ್ತ್ರ ಗ್ರಂಥಗಳಲ್ಲಿ ಮುನಿಗಳು ಆಹಾರ ಸ್ವೀಕರಿಸಬೇಕಾದ ಕ್ರಮಗಳನ್ನು ಸ್ಪಷ್ಟವಾಗಿ ಹೇಳಲಾಗಿದೆ. ಅವುಗಳ ಪ್ರಕಾರ ದಿಗಂಬರ ಮುನಿಗಳು ಪ್ರತಿನಿತ್ಯ ಒಮ್ಮೆ ಗೃಹಸ್ಥರಿರುವ ಬೀದಿಯಲ್ಲಿ ಭಿಕ್ಷೆಗಾಗಿ ಆಮಂತ್ರಣವಿಲ್ಲದೆ ಭ್ರಾಮರಿ ಗೊಟ್ಟು ಹೋಗಬೇಕು. ಗೃಹಸ್ಥನು 'ನವಧಾಭಕ್ತಿ'ಯಿಂದ ಮುನಿಯನ್ನು ಆಹಾರಕ್ಕಾಗಿ ಕರೆದೊಯ್ದು ಮನೆಯವರಿಗಾಗಿ ಸಿದ್ಧಗೊಳಿಸಿದ ಅನ್ನದಲ್ಲಿ ಎಷ್ಟನ್ನು ಕೊಡುವನೋ ಅಷ್ಟನ್ನು ಮಾತ್ರ ಸ್ವೀಕರಿಸಬೇಕು. ತನ್ನ ಸಲುವಾಗಿಯೇ ಆಹಾರವನ್ನು ಸಿದ್ಧಪಡಿಸಿದ್ದಾರೆ ಎಂದು ತಿಳಿದ ಕೂಡಲೇ ಅಂತಹ ಆಹಾರವನ್ನು ಸ್ವೀಕರಿಸಕೂಡದು. ಇದನ್ನೇ 'ಉದ್ದಿಷ್ಟಾಹಾರ ತ್ಯಾಗ'ವೆನ್ನುವರು. 'ಔದ್ದೇಶಿಕ' (ಭಿಕ್ಷುವಿಗೆಂದೇ ಸಿದ್ಧಪಡಿಸಿದ) ಆಹಾರವನ್ನು ಮುನಿ ಮುಟ್ಟಲೇ ಕೂಡದು. ಮುನಿ ಆಹಾರವನ್ನು ಸ್ವೀಕರಿಸುವಾಗ "ನಲವತ್ತಾರು ದೋಷಗಳನ್ನು ತಪ್ಪಿಸಿ, ಮೂವತ್ತೆರಡು ಅಂತರಾಯಗಳನ್ನು ಪಾಲಿಸಿ, ಹದಿನಾಲ್ಕು ಮಲಗಳನ್ನು ಪರಿಹರಿಸಿ ಶುದ್ಧ ಆಹಾರವು ದೊರೆತರೇನೇ ತಿನ್ನಬೇಕು."[1] "ಊಟದ ಆಮಂತ್ರಣವನ್ನು ಮುನಿ ಸ್ವೀಕರಿಸಕೂಡದು. ಊಟಕ್ಕಾಗಿ ಯಾಚನೆಯನ್ನೂ ಮಾಡಬಾರದು"[2] ಇಂತಹ ಧರ್ಮನಿಷ್ಠ ಸಾಧುಗಳಿಗೆ ಆಹಾರಾದಿಗಳನ್ನು ಕೊಡುವುದಕ್ಕೆ 'ವೈಯಾವೃತ್ಯ' ಎನ್ನುತ್ತಾರೆ.

## ವ್ಯಾಪಾರಿ ದಂಧೆ

ಮುನಿಗಳ ಆಹಾರ ಸ್ವೀಕಾರ ನಿಯಮಗಳು ಹೀಗಿದ್ದರೂ, ಈ ವಿಷಯದಲ್ಲಿ ಬೇಕಾದಷ್ಟು ಶಿಥಿಲಾಚಾರ ಈಗಾಗಲೇ ರೂಢಿಯಲ್ಲಿದೆ. ಮುನಿಧರ್ಮಪಾಲನೆ ಮಾಡದ ಮುನಿಗಳು. ಶಾಸ್ತ್ರ ತಿಳಿಯದ ಗೃಹಸ್ಥರು ಈ ಶಿಥಿಲಾಚಾರಗಳಿಗೆ ಕಾರಣರಾಗಿದ್ದಾರೆ.

ವಿದ್ಯಾನಂದ ಮುನಿಗಳಂತೂ ಜೈನ ಶಾಸ್ತ್ರದಲ್ಲಿ ಹೇಳಿರುವ ಆಹಾರ ಸ್ವೀಕಾರದ ವಿಧಿಗಳನ್ನು ಲೆಕ್ಕಕ್ಕೇ ಇಟ್ಟುಕೊಂಡಿಲ್ಲ! ಮುನಿಧರ್ಮದ ಇತರ ವಿಧಿಗಳನ್ನು ಉಪೇಕ್ಷೆ ಮಾಡಿರುವಂತೆ ಈ ವಿಧಿಯನ್ನೂ ರಾಜಾರೋಷವಾಗಿ ಉಲ್ಲಂಘಿಸಿದ್ದಾರೆ. ಮುನಿಗಳ ಇಪ್ಪತ್ತೆಂಟು ಮೂಲ ಗುಣಗಳಲ್ಲಿ ಒಂದಾದ ಈ ಮೂಲಗುಣದ ಪಾಲನೆ ಮೂಲೆಗುಂಪಾಗಿ ಇದು ವಿದ್ಯಾನಂದರು ಲೋಭದಿಂದ ಹಣ ಸಂಪಾದನೆ ಮಾಡುವ ಒಂದು ಲಾಭದಾಯಕ ವ್ಯಾಪಾರಿ ದಂಧೆಯಾಗಿ ಮಾರ್ಪಟ್ಟಿದೆ. ಸರಕುಗಳನ್ನು ಮಾರುವ

1, 2.—ರತ್ನ ಕರಂಡಕ ಶ್ರಾವಕಾಚಾರ (ಸಮಂತಭದ್ರ) ಟೀಕೆ—249.

ವ್ಯಾಪಾರಿ ಆ ಸರಕಿಗಿರುವ ಬೇಡಿಕೆಯ ಗತಿಯನ್ನನುಸರಿಸಿ ಅದರ ಬೆಲೆಯನ್ನು ಹೆಚ್ಚು-ಕಡಿಮೆ ಮಾಡುವಂತೆ, ವಿದ್ಯಾನಂದರು ತಾವು ತಂಗುವ ಬೇರೆ ಬೇರೆ ಸ್ಥಳಗಳಲ್ಲಿ ತಮಗೆ ಆಹಾರ ದಾನ ಮಾಡಲು ಆಸೆ ಪಟ್ಟವರಿಗೆ ಅವರು ತೆರಬೇಕಾದ ಶುಲ್ಕದಲ್ಲಿ ಹೆಚ್ಚು-ಕಡಿಮೆ ಮಾಡುತ್ತಾರೆ.

1979ನೇ ವರ್ಷದಲ್ಲಿ ವಿದ್ಯಾನಂದರು ಇಂದೂರಿನಲ್ಲಿ ಚಾತುರ್ಮಾಸ ಮಾಡುತ್ತಿದ್ದಾಗ ತಮಗೆ ಆಹಾರದಾನ ಮಾಡಬೇಕೆನ್ನುವವರು ಐದು ನೂರು ರೂಪಾಯಿಗಳನ್ನು ಆಹಾರ ದಾನದ ಶುಲ್ಕವನ್ನಾಗಿ ಕೊಡಬೇಕೆಂದು ಗೊತ್ತುಪಡಿಸಿದ್ದರು. ಐದು ನೂರು ರೂಪಾಯಿ ಕೊಟ್ಟವರು ವಿದ್ಯಾನಂದರು ಬೀಡು ಬಿಟ್ಟಿರುವ ಸ್ಥಳಕ್ಕೆ ಹೋಗಿ ವಿದ್ಯಾನಂದರಿಗೆಂದೇ ವ್ಯವಸ್ಥೆ ಮಾಡಿದ ಭೋಜನ ಶಾಲೆಯಲ್ಲಿ ಅವರಿಗೆಂದೇ ಸಿದ್ಧಪಡಿಸಿದ ಆಹಾರವನ್ನು ಅವರ ಕೈಗೆ ಹಾಕಬಹುದಾಗಿತ್ತು. 1980ರ ಶ್ರವಣಬೆಳಗೊಳದ ವಾಸದಲ್ಲಿ ಈ ಶುಲ್ಕ ನೂರೈವತ್ತು ರೂಪಾಯಿ ಆಯಿತು. ಈ ಪ್ರಕಾರ ನೂರೈವತ್ತು ರೂಪಾಯಿ ಕೊಟ್ಟವರ ಕೈಯಿಂದ ಆಹಾರ ತಿನ್ನುವ ನಾಚಿಗೆಗೇಡಿನ ಕೆಲಸ ಕೆಲವು ತಿಂಗಳುಗಳವರೆಗೂ ನಡೆಯಿತು. ಬಂಡವಾಳವಿಲ್ಲದ ಹಣ ಸಂಪಾದನೆಯೂ ಬಹಳ ಚನ್ನಾಗಿ ಆಯಿತು.

## ತುತ್ತಿನ ಶುಲ್ಕ

ವಿದ್ಯಾನಂದರು ಚಾತುರ್ಮಾಸದ ನಾಟಕವಾಡುವ ಸ್ಥಳಗಳಲ್ಲಿ ಆಹಾರ ದಾನದ ಹೆಸರಿನಲ್ಲಿ ಜನರನ್ನು ವಂಚಿಸಿ ಹಣ ಸುಲಿಯಬಹುದು. ಆದರೆ ಸುತ್ತಾಟದ ಕಾಲದಲ್ಲಿ ಈ ಸುಲಿಗೆ ಹೇಗೆ ಎಂಬ ಪ್ರಶ್ನೆಗೂ ಪರಿಹಾರವುಂಟು. ಸುತ್ತಾಟದ ಕಾಲದಲ್ಲಿ ಈ ಬೆಲೆಯನ್ನು ಒಂದೊಂದು ತುತ್ತಿಗೆ ಗೊತ್ತುಪಡಿಸುತ್ತಾರೆ. 1981ರ ಏಪ್ರಿಲ್ ತಿಂಗಳಿನಲ್ಲಿ ಇವರು ಭದ್ರಾವತಿಗೆ ಬಂದು ಶ್ರೀ ಮಂಜುನಾಥಸ್ವಾಮಿ ಕಲ್ಯಾಣ ಮಂಟಪದಲ್ಲಿ ಎರಡು ದಿನಗಳ ಕಾಲ ಬೀಡುಬಿಟ್ಟಿದ್ದರು. ಈ ಸಮಯದಲ್ಲಿ ಒಂದು ತುತ್ತು ಆಹಾರವನ್ನು ತೆಗೆದುಕೊಂಡು ವಿದ್ಯಾನಂದರ ಕೈಗೆ ಹಾಕಲು ಹದಿನೈದು ರೂಪಾಯಿಗಳ ಶುಲ್ಕವನ್ನು ಗೊತ್ತುಪಡಿಸಿದ್ದರು. ಪುಣ್ಯ ಸಂಪಾದನೆಯಾಗುತ್ತದೆ ಎಂಬ ನಂಬಿಕೆಯ ಲೋಭಕ್ಕೆ ಒಳಗಾದ ಮುಗ್ಧ ಜನರು ಹಣತೆತ್ತು ತುತ್ತು ಹಾಕಿದರು. ಒಂದೇ ದಿನದಲ್ಲಿ ಸುಮಾರು ನಲವತ್ತು ಜನರು ತುತ್ತು ಹಾಕಿದರು. ಇದರಿಂದ ವಿದ್ಯಾನಂದರಿಗೆ ತಮ್ಮ ದಳ್ಳಾಳಿಗಳ ಮೂಲಕ ಒಂದೇ ದಿನದಲ್ಲಿ ಆರುನೂರು ರೂಪಾಯಿಗಳಷ್ಟು ಹಣ ಸಂಪಾದನೆಯಾಯಿತು.

ಗೃಹಸ್ಥರು ಧಾರ್ಮಿಕ ದೃಷ್ಟಿಯಿಂದ ಮಾಡುವ ಆಹಾರದಾನದ ಪವಿತ್ರಕ್ರಿಯೆಯನ್ನು ವಿದ್ಯಾನಂದರ ಹಾಗೆ ಹಣ ಸುಲಿಯುವ ಸಾಧನವನ್ನಾಗಿ ಮಾಡಿ ಅದನ್ನು

ನಾಚಿಕೆಗೇಡಿನ ಸ್ಥಿತಿಗೆ ತಂದ ದಿಗಂಬರ ಮುನಿಗಳು ದಿಗಂಬರ ಸಾಧಂಗಳ ಇತಿಹಾಸ ದಲ್ಲಿಯೇ ಇನ್ನೊಬ್ಬರು ಸಿಗುವುದಿಲ್ಲ! ನನಗೆ ಐದುನೂರು ರೂಪಾಯಿಕೊಟ್ಟು ಅನ್ನ ಹಾಕಬೇಡಿ. ಅದರ ಬದಲು ಅದೇ ಹಣವನ್ನು ಖರ್ಚುಮಾಡಿ ನೂರಾರು ಜನ ನಿರ್ಗತಿಕ ಬಡವರಿಗೆ ಅನ್ನ ಹಾಕಿ ಪುಣ್ಯಕಟ್ಟಿಕೊಳ್ಳಿ ಎಂಬ ಮಾತು ಮಹಾತನಾಡುವ ಗೊಮ್ಮಟ ಎಂದು ಕರೆಸಿಕೊಂಡಿರುವ ಈ ಮುನಿಗಳ ಬಾಯಿಂದ ಒಂದು ಬಾರಿಯೂ ಹೊರಡಲಿಲ್ಲ! ನೂರಾರು ರೂಪಾಯಿಗಳನ್ನು ತೆತ್ತು ಈ ಮುನಿಗೆ ಅನ್ನ ಹಾಕಲು ಧಾವಿಸುವ ಜನರಿಗೂ ಈ ಮುನಿಗೆ ಅನ್ನದಾಹಕ್ಕಿಂತಲೂ ಹಣದ ದಾಹ ಹೆಚ್ಚು ಇದೆ ಎಂಬುದು ಅರ್ಥವಾಗುವುದಿಲ್ಲ

ವಿದ್ಯಾನಂದರ ಆಹಾರ ಸ್ವೀಕಾರವಿಧಿ ಇಷ್ಟೊಂದು ಜುಗುಪ್ಸೆ ತರಿಸುವುದಾಗಿರು ವಾಗ ಇನ್ನು ಅವರಿಗೆ ಆಹಾರದಲ್ಲಿ ಅಂತರಾಯ ಆಗಿದೆಯೇ? ಉಪವಾಸ ಮಾಡು ತ್ತಾರೆಯೇ ಎಂಬುವನ್ನು ತಿಳಿದುಕೊಳ್ಳುವ ಕುತೂಹಲ ಅನಗತ್ಯ.

**ಅಧ್ಯಾಯ : ಹದಿನೆಂಟು**

# ವಿದ್ಯಾನಂದರು ಮತ್ತು ಹಣ

ವಿದ್ಯಾನಂದರಿಗೂ ಹಣಕ್ಕೂ ಸಂಬಂಧವಿದೆಯೇ ಎಂಬ ಪ್ರಶ್ನೆ ಬಂದಾಗ ಅವರು ದಿಗಂಬರರು, ಒಂದು ತುಂಡು ಲಂಗೋಟಿಯೂ ಸಹ ಅವರಿಗಿಲ್ಲ. ಅವರು ಹಣ ತೆಗೆದುಕೊಂಡು ಇಟ್ಟುಕೊಳ್ಳುವುದಾದರೂ ಎಲ್ಲಿ? ಅವರು ಹಣವನ್ನಿಟ್ಟುಕೊಂಡಿದ್ದಾರೆ ಎನ್ನುವವರು ತಿಳಿಗೇಡಿಗಳು. ಹೋಗಲಿ ಅವರು ಹಣ ತೆಗೆದುಕೊಂಡು ಮಾಡುವು ದಾದರೂ ಏನು? ಎಂಬ ಮರುಪ್ರಶ್ನೆಯನ್ನು ವಿದ್ಯಾನಂದರಲ್ಲಿ ಅಂಧ ಶ್ರದ್ಧೆಯುಳ್ಳ ವರು ಹಾಕುತ್ತಾರೆ. ಇಂಥ ಮೂಢರಿಗೆ ಅವರ ಜೀವನ ರಹಸ್ಯಗಳನ್ನು ಸಾಕ್ಷ್ಯಾಧಾರಗಳ ಸಮೇತ ಬಿಡಿಸಿ ಹೇಳುವ ಪ್ರಯತ್ನ ಗೋರ್ಕಲ್ಲ ಮೇಲೆ ಮಳೆಗರೆದಂತೆ.

ಗೃಹತ್ಯಾಗ ಮಾಡಿ ಕಾವಿ ವಸ್ತ್ರ ತೊಟ್ಟ ಮಂನುಷ್ಯ ಮುನಿಗಳ ಸಂಘದಲ್ಲಿರುವು ದನ್ನು ಬಯಸದೆ ಆಶ್ರಮವೊಂದರ ಆಡಳಿತವನ್ನು ಏಕೆ ಇಷ್ಟಪಟ್ಟ? ಕುರುಕ ಸಹೋದ್ಯೋಗಿಯನ್ನು ಹೇಗೆ ಸಹಿಸಿಕೊಂಡ? ಕೆಲಸದವಳೊಂದಿಗೆ ಹೇಗೆ ಅನೈತಿಕ ಸಂಪರ್ಕವಿರಿಸಿಕೊಂಡ? ಆಶ್ರಮದ ಹಣವನ್ನು ಹೇಗೆ ಲೂಟಿ ಹೊಡೆದ? ಅಮಾಯಕ ಹುಡುಗನನ್ನು ಏಕೆ ಬಡಿದು ಸಾಯಿಸಿದ? ಆಶ್ರಮ ಬಿಟ್ಟು ಹೊರಡು ಎಂದರೂ

ಏತಕ್ಕಾಗಿ ಭಂಡಾಟವಾಡಿದ ? ಪುನಃ ಇವೆಲ್ಲಾ ಚಾಳಿಗಳೂ ಹೊಂಬುಜದಲ್ಲಿಯೂ ಪುನರಾವರ್ತನೆಯಾದುವಲ್ಲ ಏಕೆ ? ದಿಗಂಬರ ಮುನಿದೀಕ್ಷೆ ವಹಿಸಿದ ಮೇಲೂ ಮುನಿ ಧರ್ಮಕ್ಕೆ ಅನುಗುಣವಾಗಿ ಏಕೆ ನಡೆದುಕೊಳ್ಳುತ್ತಿಲ್ಲ ? ದಿಗಂಬರರಾಗಿ ಎಲ್ಲವನ್ನೂ ಬಿಟ್ಟಿದ್ದಾರೆ ಎಂದರೆ ಆವರ ಬಾಲ್ಯಕಾಲದ ಸ್ನೇಹಿತರುಗಳನ್ನೇಕೆ ಬಿಟ್ಟಿಲ್ಲ ? ದ್ವಾರ ಪಾಲಕನಿರುವ ಸುಸಜ್ಜಿತ ಬಂಗಲೆಗಳ ವಾಸವನ್ನೇಕೆ ಇವರು ಬಿಡಲು ಶಕ್ತರಾಗಿಲ್ಲ ? ಇವರ ಸಮಾರಂಭಗಳಿಗೆ ಪುರಸಭಾಧ್ಯಕ್ಷರುಗಳು, ಜಿಲ್ಲಾಧಿಕಾರಿಗಳು, ಮತ್ತು ರಾಜಕಾರಣಿ ಗಳೇ ಏಕೆ ಬೇಕು ? ಎಷ್ಟು ಸಾರಿ ಬ್ಯಾಂಡ್ ಹೊಡೆಸಿಕೊಂಡು ಮೆರವಣಿಗೆ ಮಾಡಿಸಿ ಕೊಂಡರೂ ಇವರಿಗೆ ಬೇಸರವೇಕೆ ಬರುವುದಿಲ್ಲ ? ಇವೆಲ್ಲಾ ವೈರಾಗ್ಯ ಭಾವನೆಯಿಂದ ಸರ್ವಸಂಗ ಪರಿತ್ಯಾಗಿಯಾಗಿರುವ ಮುನಿಯ ಲಕ್ಷಣಗಳೇ ?

ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಇಷ್ಟು. ಇವರು ಬಟ್ಟೆಯನ್ನು ಮಾತ್ರ ಕಳಚಿದ್ದಾರೆ. ಆದರೆ ಎಲ್ಲಾ ಲೌಕಿಕ ವ್ಯವಹಾರಗಳೂ, ಸುಖೋಪಭೋಗಗಳೂ, ಅಷ್ಟದಾರಿ ಹಿಡಿದ ಗೃಹಸ್ಥರಿಗಿಂತಲೂ ಇವರಿಗೆ ಬಹಳ ಹೆಚ್ಚು ಇವೆ. ಧರ್ಮದ ಮುಖವಾಡದೊಂದಿಗೆ, ತಂತ್ರ ಕುತಂತ್ರಗಳ ಸಹಯೋಗದೊಂದಿಗೆ ಮುಚ್ಚುಮರೆಯಲ್ಲಿ ಇವೆಲ್ಲಾ ಯೋಜನಾಬದ್ಧವಾಗಿ ವ್ಯವಸ್ಥಿತವಾಗಿ ನೆರವೇರುತ್ತವೆ.

## ಎಲುಬು ಸೇರಿದ ದುರಾಸೆಗಳು

ವಿದ್ಯಾನಂದರ ಜೀವನದ ಮೂರು ಮುಖ್ಯ ದುರಾಸೆಗಳೆಂದರೆ ಹೆಣ್ಣಿನ ದುರಾಸೆ ಹಣದ ದುರಾಸೆ ಮತ್ತು ಸ್ವಪ್ರಚಾರದ ದುರಾಸೆ. ವಿದ್ಯಾನಂದರು ಕ್ಷುಲ್ಲಕರಾಗಿದ್ದಾಗ ಸಾಕಷ್ಟು ಹಣದೋಚಿ ಅದನ್ನು ಸ್ವೇಚ್ಛೆಯಾಗಿ ಉಪಯೋಗಿಸಿರುವುದು ಅವರ ಹಿಂದಿನ ಕೃತ್ಯಗಳಿಂದ ತಿಳಿದುಬರುತ್ತದೆ. ಈಗ 'ವಿದ್ಯಾನಂದ' ಹೆಸರನ್ನು ಧರಿಸಿರುವಾಗ ದೋಚುತ್ತಿರುವ ಹಣ ಹಿಂದಿನ ಎಲ್ಲಾ ದಾಖಲೆಗಳನ್ನೂ ಮೀರಿಸಿದೆ. ಹೆಣ್ಣಿನ ದುರಾಸೆ ಮತ್ತು ಹಣದ ದುರಾಸೆಗಳು ವಿದ್ಯಾನಂದರಲ್ಲಿ ಚರ್ಮಗತವಾಗಿ, ರಕ್ತಗತವಾಗಿ ಕಡೆಗೆ ಅವರ ಎಲುಬುಗಳಲ್ಲೂ ಸೇರಿಹೋಗಿವೆ. 1970ರ ಬೇಸಿಗೆಯಲ್ಲಿ ಇವರು ಹಿಮಾಲಯದ ಬದ್ರೀನಾಥಕ್ಕೆ ಹೋಗಿಬಂದ ಮೇಲೆ ಅದರ ಪ್ರಚಾರ ಬಲದಿಂದ ಧರ್ಮದ ಹೆಸರಿನಲ್ಲಿ ನಡೆಸುವ ಹಣದ ದಂಧೆಯ ಕಾಯಕಕ್ಕೆ ಕೊನೆ ಮೊದಲಿಲ್ಲ. ಈ ದಂಧೆ ಇವರು ಸಾಕಿಕೊಂಡಿರುವ ದಳ್ಳಾಳಿಗಳ ಮೂಲಕ ಇದುವರೆಗೂ ವಿರೋಧಗಳನ್ನು ಕಡೆಗಣಿಸಿ ಒಂದೇ ಸಮನೆ ಮುಂದುವರೆಯುತ್ತಿದೆ.

## ದೆಹಲಿಯ ಜನೋದಯ ಪತ್ರಿಕೆಯಲ್ಲಿ

ವಿದ್ಯಾನಂದರ ಹಣದ ದುರಾಸೆಯ ತಂತ್ರಕೆಳಿಗೆ 1974ರಲ್ಲಿ ಇವರ ವಿರುದ್ಧ ದೆಹಲಿಯ 'ಜನೋದಯಂ' ಎಂಬ ಹಿಂದಿ ನಿಯತಕಾಲಿಕ ಪತ್ರಿಕೆಯಲ್ಲಿ ಬಂದ ಲೇಖನ

ವೊಂದನ್ನು ಇಲ್ಲಿ ಗಮನಿಸಬಹುದು. ಈ ಪತ್ರಿಕೆಯ ಪ್ರಬಂಧ ಸಂಪಾದಕರು ಶ್ರೀ ರಾಮೇಶ್ವರ ಗೋಯಲ್ ಎಂಬುವರು. ಪತ್ರಿಕೆಯ 16-12-1974ರ ಸಂಚಿಕೆಯಲ್ಲಿ "ಸಂತರು ಕಾಲಿಟ್ಟಲ್ಲಿ ಎಷ್ಟು ಚಿನ್ನ ಕಸಿದುಕೊಂಡದ್ದಾಯಿತು" ಎಂಬ ಶಿರೋನಾಮೆಯಲ್ಲಿ ಈ ಲೇಖನ ಪ್ರಕಟವಾಗಿದೆ. ಲೇಖನದ ಪೂರ್ಣಪಾಠ ಹೀಗಿದೆ : (ಪತ್ರಿಕೆಯ ಸಂಪಾದಕ ರಾ. ಪ್ರ. ಗೌಡ ಎಂಬುವರು)

"ಈ ಹಿಂದಿನ 1974ರ ನವೆಂಬರ್ ಒಂದರ ಜನೋದಯ ಸಂಚಿಕೆಯಲ್ಲಿ ಒಂದು ವಿಷಯ ಪ್ರಕಟವಾಗಿತ್ತು. ಧರ್ಮಾಚಾರ್ಯರಿಗೆ ತಪ್ಪು ರೀತಿಯಲ್ಲಿ ನೀಡಿದ ಚಂದಾ ಅಥವಾ ಧರ್ಮದ ಹೆಸರಿನಲ್ಲಿ ಧನಸಂಗ್ರಹ ಮಾಡುವುದನ್ನು ಕುರಿತದ್ದೇ ಆ ವಿಷಯವಾಗಿತ್ತು. ಮುನಿಶ್ರೀ ವಿದ್ಯಾನಂದರು ಜನರಿಗೆ ತ್ಯಾಗದ ಮಹತ್ವವನ್ನು ಕುರಿತು ಭಾಷಣ ಮಾಡಿದ ವಿಚಾರ ತಮಗೆಲ್ಲಾ ಗೊತ್ತೇ ಇದೆ. ಇದರಿಂದ ಪ್ರಭಾವಿತರಾದ ಧರ್ಮಾವಲಂಬಿ ಶ್ರೋತೃಗಳು ನಗದು ಹಣವನ್ನು ಹಾಗೂ ಮಹಿಳೆಯರು ಬಂಗಾರದ ಆಭರಣಗಳೇ ಮುಂತಾದವುಗಳನ್ನು ತತ್ಕಾಲದಲ್ಲಿ ತ್ಯಜಿಸಿ ದಾನ ಮಾಡಿದರು. ಈ ಬಂಗಾರವನ್ನು ಮುನಿಶ್ರೀಯವರ ಶಿಷ್ಯರು ಪಡೆದಿದ್ದರು ಮತ್ತು ಮುನಿಶ್ರೀಯವರು 'ಸಮ್ಮೇದ ಶಿಖರಜಿ ಪಯೋಜನಾ'ದ (ಸಂತರ ವಾಸಸ್ಥಳ ನಿರ್ಮಾಣಕ್ಕಾಗಿ ಸಂಗ್ರಹವಾದ ಚಂದಾ ಹಣದಲ್ಲಿ) ಹಣದಲ್ಲಿ ಯಾವುದೇ ತೆರನಾದ ವ್ಯವಹಾರ ತಲೆದೋರಿಲ್ಲ. ಮತ್ತು ಈಗ ಸಂಗ್ರಹಿಸಿರುವ ಹಣ ಹಾಗೂ ಬಂಗಾರದ ಪೂರ್ಣ ಲೆಕ್ಕವನ್ನು ಇಡಲಾಗುವುದು ಎಂದು ಘೋಷಿಸಿದರು. ಈ ಹಣದಿಂದ ಸಾಧುಗಳಿಗೆ ನಿವಾಸ ಸ್ಥಾನವನ್ನು ಕಟ್ಟಲಾಗುವುದು ಎಂದು ತಿಳಿಸಿದರು.

ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ ಎಲ್ಲಿ ಒಂದು ಕಡೆ ಗೃಹಸ್ಥಾಶ್ರಮವನ್ನು ತ್ಯಜಿಸಬೇಕೆಂದು ಬೋಧನೆ ಮಾಡಲಾಗುತ್ತಿತ್ತೊ ಅಲ್ಲಿಯೇ ಇನ್ನೊಂದು ಕಡೆ ಸಾಧುಗಳಿಗಾಗಿ ಧನ ಸಂಗ್ರಹದ ಕಾರ್ಯವೂ ನಡೆಯುತ್ತಿತ್ತು. ಹಣತ್ಯಾಗ ಮಾಡಬೇಕೆಂದು ಹೇಳುತ್ತಿದ್ದಾಗಲೇ ತ್ಯಾಗ ಮಾಡಿದವನಿಂದ ಹೇಳುತ್ತಿರುವವನೇ ಆ ತ್ಯಾಗದ ಹಣವನ್ನು ಪಡೆಯುತ್ತಿರುವ ಕಾರ್ಯ ನಡೆಯುತ್ತಿತ್ತು.

ಮೇಲಿನ ವಿಚಾರವನ್ನು ಪ್ರಕಟಮಾಡಿದುದರ ಪರಿಣಾಮವಾಗಿ ಓದುಗರಿಂದ ಅನೇಕ ಪ್ರತಿಕ್ರಿಯೆಗಳು ಬಂದುವು. ಅನೇಕ ಜನರು ಸಂಪಾದಕರನ್ನು ಭೇಟಿಯಾದರು. ಕೆಲವರು 'ಜನೋದಯ'ದ ಸಂಪಾದಕರನ್ನು ಈ ರಹಸ್ಯವನ್ನು ಬಯಲು ಮಾಡಿದುದಕ್ಕಾಗಿ ಅಭಿನಂದಿಸಿದರು. ಮತ್ತೆ ಕೆಲವರು ಮುನಿವರ್ಗದ ಪಕ್ಷ ಸೇರುವ ಪ್ರಯತ್ನ ನಡೆಸಿದರು. ಜನೋದಯದ ಸಂಪಾದಕರಿಗೆ ಹಲವು ರೀತಿಯ ಬೆದರಿಕೆಗಳನ್ನು ಹಾಕಿದ ವಿಷಯ ತಮಗೆ ತಿಳಿದೇ ಇದೆ.

ಮುನಿ ವಿದ್ಯಾನಂದರ ಪರವಾಗಿ ಒಬ್ಬನು 22 ತೊಲ ಬಂಗಾರ ಮಾತ್ರ ಸಂಗ್ರಹ ವಾಗಿತ್ತು ಎಂದನು. ಇದಕ್ಕೆ ವಿರುದ್ಧವಾಗಿ ಸಹಸ್ರಾರು ತೊಲಗಳ ಬಂಗಾರ ಸಂಗ್ರಹ ವಾಗಿತ್ತು ಎಂದು ಸಮಾರಂಭದಲ್ಲಿ ಪಾಲ್ಗೊಂಡಿದ್ದ ಪ್ರತ್ಯಕ್ಷದರ್ಶಿಗಳ ಹೇಳಿಕೆಯಾಗಿದೆ. ಈ ಸಂಬಂಧದಲ್ಲಿ ಪ್ರತ್ಯಕ್ಷದರ್ಶಿಗಳು ತಿಳಿಸಿದುದೇನೆಂದರೆ 'ಸಮಾರಂಭದ ನಿರ್ವಾಹಕರು ಪಡೆದ ಹಣದ ಬಗ್ಗೆ ಮೈಕಿನಲ್ಲಿ ಘೋಷಿಸುತ್ತಾ ಹೇಳಿದುದು ಹೀಗೆ : ಸುಮಾರು ನಾಲ್ಕುನೂರು ಬಳೆಗಳು, ಮೂರುನೂರು ಚೈನ್‌ನೆಕ್ಲೇಸ್ ಮುಂತಾದವುಗಳು ಹಾಗೂ ಐದು ನೂರು ಉಂಗುರಗಳು ಬಂದೇ ವಗೈರೆ ರೀತಿಯಲ್ಲಿ ಬಂಗಾರ ಬಂದಿದೆ–ಪಡೆದ ಬಂಗಾರಕ್ಕೆ ರಶೀದಿಯನ್ನು ಯಾರಿಗೂ ಕೊಡಲಿಲ್ಲ ಎಂಬುದು ಗಮನಿಸಬೇಕಾದ ವಿಷಯ.'

ವಾಸ್ತವವಾಗಿ ಎಷ್ಟು ಬಂಗಾರವಿತ್ತು ಎಂಬುದು ಹೇಳಲು ಸಾಧ್ಯವಿಲ್ಲ ! ಸರ್ಕಾರ ಅಪೇಕ್ಷಿಸಿದಲ್ಲಿ ತನಿಖೆ ನಡೆಸುವುದೂ ಹಾಗೂ ಈ ರೀತಿಯಲ್ಲಿ ಬಂಗಾರ ಸಂಗ್ರಹಕ್ಕೆ ಇಂಡಿಯನ್ ಪೀನಲ್ ಕೋಡಿನಲ್ಲಿ ಯಾವುದೇ ಶಿಕ್ಷೆ ಇಲ್ಲವೆ ? ಅವಶ್ಯಕವಾದಲ್ಲಿ ಇದರ ತನಿಖೆಯನ್ನು ಸಿ.ಬಿ.ಐ. ಮೂಲಕ ನಡೆಸಬಹುದು.

ಈ ಸಂಬಂಧದಲ್ಲಿ ನಮಗೆ ಅನೇಕ ಪ್ರತಿಕ್ರಿಯೆಗಳು ಬಂದಿವೆ. ಹಾಗೂ ನಾವು ನಮ್ಮ ಓದುಗರಲ್ಲಿ ಪ್ರಾರ್ಥಿಸಿಕೊಳ್ಳುವುದೇನೆಂದರೆ, ಈ ಸಂಬಂಧದಲ್ಲಿ ತಮಗೆ ತಿಳಿದಿರುವ ಮಾಹಿತಿಯನ್ನು ಒದಗಿಸಿದಲ್ಲಿ ಆಗ ಅಷ್ಟು ಸತ್ಯ ಹೊರಕ್ಕೆ ಬರುತ್ತದೆ."

'ಜನೋದಯಾ' ಪತ್ರಿಕೆಯ ಮೇಲಿನ ವರದಿ ವಿದ್ಯಾನಂದರು ಧರ್ಮದ ಹೆಸರಿನಲ್ಲಿ ಸಮಾಜದ ಜನರಿಂದ ಹಣವನ್ನೂ ಚಿನ್ನವನ್ನೂ ಲೂಟಿ ಹೊಡೆದಿರುವುದನ್ನು ಬಹಿರಂಗ ಪಡಿಸಿದೆ. ಇಂತಹ ಪ್ರಸಂಗಗಳು ವಿದ್ಯಾನಂದರು ದಿಗಂಬರರಾದಾಗಿನಿಂದ ಎಷ್ಟು ನಡೆದಿರಬಹುದು ಎಂಬುದನ್ನು ಊಹಿಸಬಹುದು. ಅವರು ಯಾವ ಯಾವ ಬಗೆಯಲ್ಲಿ ಯಾವ ಯಾವ ಕಾರ್ಯಗಳ ಹೆಸರಿನಲ್ಲಿ ಹಣ ಸುಲಿದಿರಬಹುದು ಎಂಬುದು ಊಹೆಗೆ ನಿಲುಕದ ವಿಷಯವೇನಲ್ಲ. ಇವರ ದಳ್ಳಾಳಿಗಳಲ್ಲಿ ಒಬ್ಬನಾದ ನರಿಗೌಡ ಹಿಂದೆ ಶೇಡಬಾಳದಲ್ಲಿ ಯಾರದೋ ಮನೆಯಲ್ಲಿ ಪಾತ್ರೆ ತಿಕ್ಕುವ ಕೆಲಸ ಮಾಡುತ್ತಿದ್ದ. ಈಗ ಅವನು ಶೇಡಬಾಳದಲ್ಲಿ ಲಕ್ಷ ರೂಪಾಯಿ ಬೆಲೆ ಬಾಳುವ ಮನೆ ಕಟ್ಟಿಸಿದ್ದಾನೆ. ಅನೇಕ ಎಕರೆಗಳಷ್ಟು ಹೊಲ ಕರೀದಿಸಿದ್ದಾನೆ. ಇದಕ್ಕೆಲ್ಲಾ ಹಣ ಇವನಿಗೆ ಹೇಗೆ ಬಂತು ! ವಿದ್ಯಾನಂದರ ಇನ್ನೊಬ್ಬ ದಳ್ಳಾಳಿಯಾದ ಅಂಗವಿಕಲ ಮನುಷ್ಯ ಸಾಂಗಲಿಯ ತನ್ನ ಪ್ರೇಯಸಿಯೊಬ್ಬಳಿಗೆ ಭವ್ಯವಾದ ಮನೆ ಕಟ್ಟಿಸಿಕೊಟ್ಟಿದ್ದಾನೆ. ಅವಳ ಮಡಿಲಿಗೆ ಸಾಕಷ್ಟು ಹಣವನ್ನು ಸುರಿದಿದ್ದಾನೆ. ಶಾಲೆಯೊಂದರಲ್ಲಿ ಹಣ ತಿಂದುದಕ್ಕಾಗಿ 1957 ರಲ್ಲಿ ಕೆಲಸ ಕಳೆದುಕೊಂಡ ಈ ಅಂಗವಿಕಲ ಮನುಷ್ಯ ಇಷ್ಟೆಲ್ಲಾ ಕಾರುಬಾರು ಮಾಡಲು ಹೇಗೆ ಸಾಧ್ಯವಾಯಿತು.

## ಸಿ. ಬಿ. ಐ. ತನಿಖೆ

ಜನೋದಯಂ ಪತ್ರಿಕೆಯಲ್ಲಿ ವಿದ್ಯಾನಂದರ ವಿರುದ್ಧ ಬಂದ ಆಪಾದನೆಗಳನ್ನು ಅನುಸರಿಸಿ, ಹಾಗೆಯೇ ಕೆಲವರು ಸಮಾಜ ಮುಖಂಡರ ಒತ್ತಾಯದಿಂದಾಗಿ ಮೇಲಿನ ಚಿನ್ನ ಸಂಗ್ರಹದ ಅಕ್ರಮ ವ್ಯವಹಾರವನ್ನು ಸರ್ಕಾರ ಸಿ. ಬಿ. ಐ. ತನಿಖೆಗೆ ಒಳಪಡಿಸಿತು ಸಿ. ಬಿ. ಐ. ಅಧಿಕಾರಿಗಳು ದೆಹಲಿಯ ಸಾಕಷ್ಟು ಜನರನ್ನು ಸಂಪರ್ಕಿಸಿ ವಿಚಾರಣೆ ನಡೆಸಿದರು. ಈ ಸಿ. ಬಿ. ಐ. ತನಿಖೆಯ ವರದಿ ಏನಾಯಿತು ? ಎಂಬುದು ಇದುವರೆಗೂ ತಿಳಿದು ಬಂದಿಲ್ಲ.

## ಶಿಕ್ಷಣ ಸಂಸ್ಥೆಯ ಹಣದ ಮೇಲೆ ಕಣ್ಣು

ವಿದ್ಯಾನಂದರ ಒಂದು ಆಕ್ಷೇಪಾರ್ಹವಾದ ಹಣದ ದುರಾಸೆಯ ಚಟುವಟಿಕೆ, ಅವರು ತಾ. 20-7-1980 ರಂದು ಶ್ರವಣಬೆಳಗೊಳಕ್ಕೆ ಬಂದಾಗಿನಿಂದ ನಡೆಯ ತೊಡಗಿತು. ಶ್ರವಣಬೆಳಗೊಳದ ಮಠಾಧಿಪತಿಗಳಾದ ಚಾರುಕೀರ್ತಿಗಳು ಮಾಡಿರುವ ಹಣದ ಅವ್ಯವಹಾರಗಳನ್ನು ಮೈಸೂರಿನ ಸಮಾಜ ಸೇವಾಕರ್ತರಾದ ಶ್ರೀ ಸಿ.ಬಿ.ಎಂ. ಚಂದ್ರಯ್ಯನವರು ಬಯಲು ಮಾಡಿ ಸರ್ಕಾರಕ್ಕೆ ಈ ಮುಂಚೆ ದೂರು ಸಲ್ಲಿಸಿದ್ದರು.[1] ವಿದ್ಯಾನಂದರು ಚಾರುಕೀರ್ತಿಗಳ ಅವ್ಯವಹಾರಗಳು ಮತ್ತು ಹಣದೋಚುವ ಅಕೃತ್ಯಗಳ ಬೇಗಾವಲಿಗೆ ನಿಂತು ಚಂದ್ರಯ್ಯನವರನ್ನು ನಿರ್ನಾಮ ಮಾಡಲು ಪಿತೂರಿ ನಡೆಸಿದರು. ಈ ಪಿತೂರಿಯ ಅಂಗವಾಗಿ ಚಂದ್ರಯ್ಯನವರು ಕಾರ್ಯದರ್ಶಿಗಳಾಗಿದ್ದ "ಶ್ರೀಗೋಮಟೇಶ್ವರ ಶಿಕ್ಷಣಸಂಸ್ಥೆ–ಮೈಸೂರು (ರಿ)" ಇದರ ಆಸ್ತಿ ಪಾಸ್ತಿಗಳನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳಲು ವಿಶ್ವಪ್ರಯತ್ನ ನಡೆಸಿದರು. ಶ್ರವಣಬೆಳಗೊಳ ಮತ್ತು ಮೈಸೂರುಗಳಲ್ಲಿ ಗೋಡೆಗಳ ಮೇಲೆ ಚಂದ್ರಯ್ಯನವರ ವಿರುದ್ಧ ಅಶ್ಲೀಲ ಬರಹಗಳನ್ನೂ ಸಹ ಬರೆಸಿದರು. ಶ್ರವಣಬೆಳಗೊಳದಲ್ಲಿ ಒಂದು ಪ್ರಥಮ ದರ್ಜೆಕಾಲೇಜನ್ನು ಸ್ಥಾಪಿಸುವ ಡೋಂಗಿ ಆಶ್ವಾಸನೆಯನ್ನು ಜನರಿಗೆ ನೀಡಿ ಅವರನ್ನು ಚಂದ್ರಯ್ಯನವರ ವಿರುದ್ಧ ಎತ್ತಿಕಟ್ಟಲು ಪ್ರಯತ್ನಿಸಿದರು. ಕೆಲಜನಗಳ ಮೂಲಕ ಶಿಕ್ಷಣ ಸಂಸ್ಥೆಯಲ್ಲಿದ್ದ ಲಕ್ಷಾಂತರ ರೂಪಾಯಿಗಳಷ್ಟು ಹಣವನ್ನು ಕಸಿಯಲು ವಿಫಲ ಪ್ರಯತ್ನ ನಡೆಸಿದರು.

ವಿದ್ಯಾನಂದರು ಶಿಕ್ಷಣ ಸಂಸ್ಥೆಯಿಂದ ಹಣಕಸಿಯಲು ಮಾಡಿದ ಭಂಡಾಟದ ಪ್ರಯತ್ನಗಳು ಸಿ.ಬಿ.ಎಂ. ಚಂದ್ರಯ್ಯನವರ ಮುಂದೆ ನಡೆಯಲಿಲ್ಲ. ತಾ. 14-7-1980 ರಲ್ಲಿ ತಮ್ಮ ಬೆಳ್ಳೂರಿನ ಭಾಷಣದಲ್ಲಿ ಚಂದ್ರಯ್ಯನವರನ್ನು "ನಾನು ಬಿಡೋದಿಲ್ಲ ; ಕ್ಷಮೆ ಮಾಡೋದಾದರೂ ಕ್ಷಮೆ ಮಾಡೋದಿಲ್ಲ" ಎಂದು ತೊಡೆತಟ್ಟಿದ್ದ ವಿದ್ಯಾ

---

1 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ'—ಬಿ.ಎಸ್. ನಂದಕುಮಾರ್—ಈ ಪುಸ್ತಕದಲ್ಲಿ ದೂರುಗಳ ವಿವರಗಳನ್ನು ನೋಡಬಹುದು.

ನಂದರು ಎರಡುವರ್ಷಗಳ ಕಾಲ ಶ್ರವಣಬೆಳಗೊಳದಲ್ಲಿಯೇ ಇದ್ದರೂ ಚಂದ್ರಯ್ಯ ನವರ ಒಂದು ರೋಮವನ್ನೂ ಸಹ ಕೊಂಕಿಸಲು ಸಾಧ್ಯವಾಗದೆ ಕಡೆಗೆ ಸೋತು ಮೌನವಾಗಿ ಶ್ರವಣಬೆಳಗೊಳದಿಂದ ದಕ್ಷಿಣ ಕನ್ನಡ ಜಿಲ್ಲೆಯ ಕಡೆಗೆ ಕಂಬಿ ಕೀಳು ವಂತಾಯಿತು.

## ಪರರ ಲೆಕ್ಕ ಕೇಳುವ ಮುನಿ

ವಿದ್ಯಾನಂದರು ತಾ. 14–7–1980 ರಂದು ಮಂಡ್ಯಜಿಲ್ಲೆಯ ಬೆಳ್ಳೂರಿನಲ್ಲಿ ಮಾಡಿದ ಭಾಷಣದಲ್ಲಿ 1976 ನೇ ವರ್ಷದಲ್ಲಿ ಮುಚ್ಚಲಾಗಿದ್ದ ಶ್ರವಣಬೆಳಗೊಳದ 'ಶ್ರೀ ಗೋಮಟೇಶ್ವರ ಮಹಾವಿದ್ಯಾಲಯ'ದ ಲೆಕ್ಕವನ್ನು ಚಂದ್ರಯ್ಯನವರು ಕೊಡು ತ್ತಿಲ್ಲ ಎಂದು ಅಪಾದನೆ ಹೊರಿಸಿದರು. ಈ ವಿಚಾರದಲ್ಲಿ ಜನರನ್ನು ತಪ್ಪುದಾರಿಗೆಳೆ ದರು. ನಿಜಸಂಗತಿಯೆಂದರೆ ಈ ಹಿಂದೆ ವಿದ್ಯಾನಂದರು ಯಾವಾಗಲಾಗಲೀ ಲೆಕ್ಕಕ್ಕಾಗಿ ಚಂದ್ರಯ್ಯನವರನ್ನು ಕೇಳಿಯೇ ಇರಲಿಲ್ಲ. ಅಷ್ಟಾಗಿ ಸಂಸ್ಥೆಯ ಲೆಕ್ಕಪತ್ರಗಳಿಗೂ ವಿದ್ಯಾನಂದರಿಗೂ ಯಾವ ಸಂಬಂಧವೂ ಇಲ್ಲ. ಸಂಸ್ಥೆಯು ಸದಸ್ಯರನ್ನು ಹೊಂದಿದ್ದು ಅದರ ಲೆಕ್ಕಪತ್ರಗಳು ಆಡಿಟ್ ಆಗಿ ಸರ್ಕಾರದ ಒಪ್ಪಿಗೆಯನ್ನೂ ಅಷ್ಟು ಹೊತ್ತಿಗಾಗಲೇ ಪಡೆದಿದ್ದುವು. 1980 ರ ಹೊತ್ತಿಗಾಗಲೇ ಕರ್ನಾಟಕ ಸರ್ಕಾರ, ಮುಚ್ಚಲಾಗಿದ್ದ ಕಾಲೇಜಿನ ಆಸ್ತಿಪಾಸ್ತಿಗಳ ವಿತರಣೆಯನ್ನೂ ಸಹ ಮುಗಿಸಿತ್ತು. ಕಾಲೇಜಿನ ಅಸ್ತಿತ್ವವೇ ಸಂಪೂರ್ಣವಾಗಿ ಇಲ್ಲದಂತಾದ ಮೇಲೆ ಕಾಲೇಜನ್ನು ನಡೆಸುತ್ತಿದ್ದ 'ಶ್ರೀ ಗೋಮ ಟೇಶ್ವರ ಶಿಕ್ಷಣ ಸಂಸ್ಥೆ' ಮಾತ್ರ ಮೈಸೂರಿನಲ್ಲಿ ಅಸ್ತಿತ್ವದಲ್ಲಿತ್ತು. ವಾಸ್ತವ ಸಂಗತಿ ಹೀಗಿದ್ದಾಗ ಕಾಲೇಜಿಗಾಗಲೀ, ಶಿಕ್ಷಣ ಸಂಸ್ಥೆಗಾಗಲೀ ಯಾವ ರೀತಿಯ ಸಂಬಂಧವೂ ಇಲ್ಲದೆ ಇದ್ದ ವಿದ್ಯಾನಂದರು ಬಹಿರಂಗ ಸಭೆಯಲ್ಲಿ ಸುಳ್ಳು ಹೇಳಿ ಚಂದ್ರಯ್ಯನವರ ವಿರುದ್ಧ ಜನಗಳನ್ನು ಎತ್ತಿಕಟ್ಟಲು ಪ್ರಯತ್ನಿಸಿದರು.

ಚಂದ್ರಯ್ಯನವರು ವಿದ್ಯಾನಂದರ ಮೆರವಣಿಗೆಗೆ ಶ್ರವಣಬೆಳಗೊಳದ ಮುಜ ರಾಯಿ ಸಂಸ್ಥೆಯಿಂದ ಹಣ ಬಿಡುಗಡೆ ಮಾಡಲು ವಿರೋಧಿಸಿದ್ದೇ ಹೀಗೆ ಅವರ ಮೇಲೆ ವಿದ್ಯಾನಂದರು ಸೇಡು ತೀರಿಸಿಕೊಳ್ಳಲು ಹೊರಡುವುದಕ್ಕೆ ಇದ್ದ ನಿಜವಾದ ಕಾರಣ ವಾಗಿತ್ತು.[1]

## ತನ್ನ ಲೆಕ್ಕ ಹೇಳದ ಮುನಿ

ತಮಗೆ ಸಂಬಂಧವಿಲ್ಲದ ಸಂಸ್ಥೆಯ ಲೆಕ್ಕಪತ್ರಗಳು ಸರಿಯಾಗಿದ್ದರೂ ಅದರ ಬಗ್ಗೆ ಬಹಿರಂಗವಾಗಿ ಸುಳ್ಳು ಹೇಳಿ ಲೆಕ್ಕ ಕೇಳುವ ವಿದ್ಯಾನಂದರು ತಮ್ಮ ಸಮಾರಂಭ

---

1. ಈ ವಿಚಾರದ ಪೂರ್ಣವಿವರಕ್ಕೆ ಇದೇ ಲೇಖಕರ 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ' ಎಂಬ ಪುಸ್ತಕ ಓದ ಬಹುದು.

ಗಳಿಗೆ ಊರು ಊರುಗಳಲ್ಲಿ ಜನರು ಮಾಡುವ ಹಣದ ಲೆಕ್ಕವನ್ನು ಇದುವರೆಗೂ ಎಲ್ಲಿಯೂ ಕೇಳಿದ ನಿದರ್ಶನವಿಲ್ಲ ! ಮತ್ತು ಅದನ್ನು ಜನರಿಗೆ ಹೇಳಿದ ನಿದರ್ಶನವಿಲ್ಲ !

ಸಾಧುಗಳು ಸಮಾಜದ ಪಾಲಿಗೆ ಹೊರೆಯಾಗದಂತೆ ಇರಬೇಕು. ತಮಗೆಂದೇ ಮಾಡಿದ ಆಹಾರವನ್ನೂ ಅವರು ಸ್ವೀಕರಿಸಬಾರದು ಎಂದು ಜೈನತತ್ವಗಳು ಹೇಳುತ್ತಿರುವಾಗ ಈ ವಿದ್ಯಾನಂದರ ಕಡೆಯವರು ಜನರಿಂದ ಅಧಿಕ ಮೊತ್ತದ ಚಂದಾಹಣವನ್ನು 'ಸಮಾಜದ ನಿರ್ಣಯ' ಎಂಬ ನಿರ್ಬಂಧಕ್ಕೊಳಪಡಿಸಿ ಬಹುಜನರಿಂದ ಬಲಾತ್ಕಾರವಾಗಿ ವಸೂಲು ಮಾಡುವಾಗ ಈ ವಿದ್ಯಾನಂದರು ಇವುಗಳ ಲೆಕ್ಕವನ್ನು ಕೇಳುವುದೂ ಇಲ್ಲ, ಹೇಳುವುದೂ ಇಲ್ಲ !

ದೆಹಲಿಯಿಂದ ಶ್ರವಣಬೆಳಗೊಳದವರೆಗೆ ಇವರ ಮೆರವಣಿಗೆ ಮತ್ತು ಪೆಂಡಾಲುಗಳಿಗೆಂದು ಸಂಗ್ರಹಿಸಿರುವ ಹಣ ಕೋಟಿಗಟ್ಟಲೆಯೆಂದು ಇತರರು ಹೇಳುತ್ತಾರೆ. ವಿದ್ಯಾನಂದರ ಕೆಲವು ಅತ್ಯಂತ ಪ್ರಮುಖ ದಳ್ಳಾಳಿಗಳು ಈ ಹಣಸಂಗ್ರಹ ಕಾರ್ಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ ಈ ಹಣ ಸಂಗ್ರಹಿಸುವ ವಿಚಾರದಲ್ಲಿ ಅನೇಕ ಬಗೆಯ ಚಾತುರ್ಯಗಳುಂಟು. ಗಂಡನಿಗೆ ತಿಳಿಯದಂತೆ ಹೆಂಡತಿಯಿಂದ, ಹೆಂಡತಿಗೆ ತಿಳಿಯದಂತೆ ಗಂಡನಿಂದ ಹಣವಸೂಲಿ ಮಾಡಿರುವ ಪ್ರಸಂಗಗಳೂ ಉಂಟು. ಮಕ್ಕಳು ಸಂಗ್ರಹಿಸಿಟ್ಟುಕೊಂಡಿದ್ದ ಪುಡಿಗಾಸನ್ನೂ ಇವರು ಬಿಟ್ಟಿಲ್ಲ. ಹೀಗೆಲ್ಲಾ ತಮ್ಮ ದಳ್ಳಾಳಿಗಳು, ಅನುಯಾಯಿಗಳು ಸಂಗ್ರಹಿಸಿದ ಹಣ ಮತ್ತು ವೆಚ್ಚ ಮಾಡಿರುವ ಹಣದ ಲೆಕ್ಕಪತ್ರಗಳನ್ನು ಬಹಿರಂಗಪಡಿಸಲು ವಿದ್ಯಾನಂದರಿಗೆ ಇದುವರೆಗೆ ಸಾಧ್ಯವಾಗಿಲ್ಲ.

ತಾವು ದ್ವೇಷಿಸುವ ವ್ಯಕ್ತಿಗಳ ವ್ಯವಹಾರದ ಲೆಕ್ಕಪತ್ರಗಳು ಸರಿಯಾಗಿದ್ದರೂ, ಒಲ್ಲದ ಗಂಡನಿಗೆ ಮೊಸರಲಿ ಕಲ್ಲು ಎಂಬಂತೆ ಅದರಲ್ಲಿ ಇಲ್ಲದ ದೋಷವನ್ನು ಹುಡುಕುವುದೂ ಮತ್ತು ತಮ್ಮ ವ್ಯವಹಾರಗಳ ಲೆಕ್ಕಪತ್ರಗಳು ಕೊಳೆತು ನಾರುತ್ತಿದ್ದರೂ ಅದರ ಕಡೆ ಗಮನವಿಲ್ಲದೆ ಇರುವುದೂ ವಿದ್ಯಾನಂದರ ಜೀವನ ಸಿದ್ಧಾಂತವಾಗಿದೆ.

## ವಿದ್ಯಾನಂದ ನಿಲಯದ ಹೆಸರಲ್ಲಿ ಹಣದ ಲೂಟಿ

ಆಚಾರ್ಯ ಶಾಂತಿಸಾಗರರು ಸು 1932–35 ನೇ ವರ್ಷಗಳ ಸಮಯದಲ್ಲಿ ರಾಜಸ್ಥಾನದ ಜೈಪುರದಲ್ಲಿ ಒಮ್ಮೆ ವಾಸ್ತವ್ಯ ಹೂಡಿದ್ದರು. ಆಗ ಶೇಡಬಾಳದ ಅನಾಥಾಶ್ರಮದ ಕೆಲವರು ಅವರ ಹತ್ತಿರಕ್ಕೆ ಹೋಗಿ ಶೇಡಬಾಳದ ಆಶ್ರಮಕ್ಕೆ ಜನರಿಂದ ಹಣಕೊಡಿಸಿ ಕೊಡಿ ಎಂದು ಪ್ರಾರ್ಥಿಸಿ ಕೊಂಡರು. ಇದಕ್ಕೆ ಶಾಂತಿಸಾಗರರು ''ಯಾರಲ್ಲಿಯೇ ಆಗಲಿ ಸಂಸ್ಥೆಗೆಂದು ಹಣಬೇಡಲು ಹೋಗುವುದು ತಪ್ಪು. ಇಲ್ಲಿ ನೀವು 'ಶಾಂತಿಸಾಗರ ಅನಾಥಾಶ್ರಮ'ಕ್ಕೆಂದು ಹಣ ಬೇಡಿದರೆ ಅದು ನನ್ನ ಹೆಸರಿನ ಬಲದ ಮೇಲೆ ಸಂಗ್ರಹವಾಗುತ್ತದೆ. ಇದು ಸರಿಯಲ್ಲ ! ಯಾರಿಗಾದರೂ ಹಣ ಕೊಡುವ ಮನಸ್ಸಾದರೆ ಅವರಾಗಿಯೇ ಬಂದು ಕೊಡುತ್ತಾರೆ. ದಾನ ಎಂಬುದು

ಹೀಗಿರಬೇಕೇ ಹೊರತು ಬೇಡಿ ತೆಗೆದುಕೊಳ್ಳುವುದು ತಪ್ಪು'' ಎಂದು ಹಿತವಾದ ಹೇಳಿ ಅವರನ್ನು ಹಿಂದಕ್ಕೆ ಕಳುಹಿಸಿಕೊಟ್ಟರು. ಇದು ಅನುಕರಣೀಯವಾದ ನಡವಳಿಕೆ. ಆದರೆ ಎಲ್ಲಾ ಮುನಿಗಳೂ ಶಾಂತಿ ಸಾಗರರ ಹಾಗೆ ಇರುವುದು ಸಾಧ್ಯವೆ ? ಇಂದು ಒಬ್ಬ ಮುನಿಯ ಸಾಮರ್ಥ್ಯವನ್ನು ಅವನಲ್ಲಿರುವ ಹಣಕೂಡಿಸುವ ಸಾಮರ್ಥ್ಯದಿಂದ ಅಳೆಯಲಾಗುತ್ತಿದೆ. ಅವನು ಧರ್ಮಭ್ರಷ್ಟನಾದರೂ ಸರಿ ಅವನು ವ್ಯವಹಾರಕ್ಕಿಳಿದು ಹಣದ ದಂಧೆ ಮಾಡುವುದನ್ನು ದೊಡ್ಡ ಕೆಲಸವೆಂದು ಭಾವಿಸಲಾಗುತ್ತಿದೆ.

ಶ್ರವಣಬೆಳಗೊಳದ ಚಾರುಕೀರ್ತಿಸ್ವಾಮಿಗಳು ಮುನಿವಿದ್ಯಾನಂದರ ಹೆಸರಿನಲ್ಲಿ 'ವಿದ್ಯಾನಂದನಿಲಯ' ವೆಂಬ ಧರ್ಮಶಾಲೆಯನ್ನು ಕಟ್ಟಿಸಿದ್ದಾರೆ. ಇದಕ್ಕೆ ವಿದ್ಯಾನಂದರೇ ಸ್ವತಃ ಮುಂದೆ ನಿಂತು ಉತ್ತರ ಭಾರತದ ಜನರಿಂದ ಹಣವನ್ನು ಕೊಡಿಸಿದ್ದಾರೆ. ಈ ಕಟ್ಟಡಕ್ಕೆ ಲಕ್ಷಾಂತರ ರೂಪಾಯಿಗಳು ವೆಚ್ಚವಾಗಿದೆ. ಇದಕ್ಕೆ ಯಾವ ಯಾವ ದಾನಿಗಳು ಎಷ್ಟು ಎಷ್ಟು ಹಣ ಕೊಟ್ಟರು ? ಸಂಗ್ರಹಿಸಿದ ಒಟ್ಟು ಹಣವೆಷ್ಟು? ಖರ್ಚಾದದ್ದು ಎಷ್ಟು ? ಇದರ ಲೆಕ್ಕಪತ್ರಗಳನ್ನು ಏಕೆ ಪ್ರಕಟಿಸಿಲ್ಲ ? ಸಾರ್ವಜನಿಕರಿಂದ ಹಣ ಸಂಗ್ರಹಿಸಿ ಅವರ ಉಪಯೋಗಕ್ಕಾಗಿ ಕಟ್ಟಡ ಕಟ್ಟಿಸಿ ಅದರ ಲೆಕ್ಕಪತ್ರಗಳನ್ನು ಸಾರ್ವಜನಿಕರ ಮುಂದೆ ಏಕೆ ಇಡುತ್ತಿಲ್ಲ ? ಎಂಬ ಪ್ರಶ್ನೆಗಳನ್ನು ವಿದ್ಯಾನಂದರು ಕೇಳುತ್ತಿಲ್ಲ.

ವಿದ್ಯಾನಂದ ನಿಲಯವನ್ನು ಕಟ್ಟಿಸುವಾಗ ಒಬ್ಬೊಬ್ಬ ದಾನಿಯಿಂದ ಒಂದೊಂದು ರೂಮಿಗೆ ಇಷ್ಟು ಖರ್ಚು ಬರುತ್ತದೆ ಎಂದು ಹಣಸಂಗ್ರಹಿಸಿದ್ದಾರೆ. ಹೀಗೆ ಸಂಗ್ರಹಿಸಿದ ಮೇಲೆ ದಾನ ಕೊಟ್ಟವರ ಹೆಸರನ್ನು ಅಮೃತಶಿಲೆಯ ಫಲಕದಲ್ಲಿ ಕೆತ್ತಿಸಿ ರೂಮಿನ ಮುಂದೆ ಪ್ರದರ್ಶಿಸುವುದು ಸಂಪ್ರದಾಯ ವಿದ್ಯಾನಂದನಿಲಯದಲ್ಲಿ ಯಾವ ಕೊಠಡಿಯ ಮುಂದೆಯೂ ದಾನಕೊಟ್ಟವರ ಹೆಸರಿಲ್ಲ. ಹೆಸರನ್ನು ಪ್ರದರ್ಶಿಸದೇ ಇರುವುದಕ್ಕೆ ಕಾರಣವೂ ಇದೆ. ಈ ಕಾರ್ಯದಲ್ಲಿ ನಡೆದಿರುವ ವಂಚನೆಯೆಂದರೆ ಅಸಂಖ್ಯಾತ ದಾನಿಗಳಿಂದ ನಿಮ್ಮ ಹೆಸರಿನಲ್ಲಿ ಕೊಠಡಿ ಕಟ್ಟಿಸುತ್ತೇವೆಂದು ಇವರು ಹಣ ವಸೂಲು ಮಾಡಿದ್ದಾರೆ. ವಸೂಲಾದ ಹಣದಲ್ಲಿ ಒಂದು ಭಾಗವನ್ನು ಮಾತ್ರ ವೆಚ್ಚಮಾಡಿ ವಿದ್ಯಾನಂದನಿಲಯವನ್ನು ಕಟ್ಟಿಸಿದ್ದಾರೆ. ಉಳಿದ ಹಣವನ್ನೆಲ್ಲಾ ನುಂಗಿದ್ದಾರೆ. ದಾನ ಕೊಟ್ಟ ವ್ಯಕ್ತಿಯಾರಾದರೂ ಬಂದಾಗ ಅವರನ್ನು ಕರೆದುಕೊಂಡು ಹೋಗಿ ವಿದ್ಯಾನಂದ ನಿಲಯದ ಯಾವುದಾದರೂ ಒಂದು ಕೊಠಡಿಯನ್ನು ತೋರಿಸುತ್ತಾರೆ. ಒಂದೊಂದು ಕೊಠಡಿಯನ್ನು ಕಟ್ಟಿಸಲೆಂದು ಹಣಕೊಟ್ಟವರ ಹೆಸರನ್ನು ಶಾಶ್ವತವಾಗಿ ಕೊಠಡಿಯ ಮುಂದೆ ಪ್ರಕಟಿಸಿದರೆ ಈ ವಂಚನೆಯ ಪ್ರಕರಣ ಬಯಲಾಗುವುದಕ್ಕೆ ಅವಕಾಶವಾಗುತ್ತದೆ.

ಈ ಅನ್ಯಾಯ ಸಾಲದೆಂಬಂತೆ ವಿದ್ಯಾನಂದನಿಲಯವು ಮುಜರಾಯಿ ಆಸ್ತಿ ಎಂಬಂತೆ ಸರ್ಕಾರಕ್ಕೆ ತೋರಿಸಿ ಅದರ ಮ್ಯಾಚಿಂಗ್‌ಗ್ರ್ಯಾಂಟ್ ಸಹ ಬರುವಹಾಗೆ ಮಾಡಿ, ಈ ಅಕ್ರಮವನ್ನು ಎಸಗಿದ ಮೇಲೆ ಚಾರುಕೀರ್ತಿಗಳು ವಿದ್ಯಾನಂದ ನಿಲಯವನ್ನು ತಮ್ಮ ಖಾಸಗಿ ಆಸ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇಷ್ಟಲ್ಲದೆ ಅದನ್ನು ಲಾಡ್ಜಿಂಗ್ ಆಗಿ ಪರಿವರ್ತಿಸಿ ಅದರಿಂದ ಪ್ರತಿ ತಿಂಗಳೂ ಸಾವಿರಾರು ರೂಪಾಯಿಗಳಷ್ಟು ಬಾಡಿಗೆ ಯನ್ನು ವಸೂಲು ಮಾಡುತ್ತಾ ಈ ಹಣವನ್ನೆಲ್ಲಾ ಮಠದ ಸ್ವಾಮಿಗಳು ತಮ್ಮ ಮೋಜಿನ ಜೀವನಕ್ಕೆ ಉಪಯೋಗಿಸುತ್ತಿದ್ದಾರೆ. ಹೀಗೆ ಸಾರ್ವಜನಿಕ ನಿಧಿಯಿಂದ ಕಟ್ಟಿದ ವಿದ್ಯಾನಂದನಿಲಯ ಸ್ವಾಮಿಗಳ ಖಾಸಗಿ ಆಸ್ತಿಯಾಗಿ ಅವರ ಭೋಗಜೀವನದ ಅಗತ್ಯಗಳನ್ನು ಪೂರೈಸುವ ಸಾಧನವಾಗಿದೆ.

ವಿದ್ಯಾನಂದರು ತಾವೇ ಕೊಡಿಸಿದ ಹಣದಿಂದ ತಮ್ಮ ಹೆಸರಿನಲ್ಲಿ ಕಟ್ಟಿರುವ ಈ ಧರ್ಮಶಾಲೆಯ ಲೆಕ್ಕಪತ್ರಗಳನ್ನು ಕೇಳಿ ಅದನ್ನು ಸಾರ್ವಜನಿಕರ ಮುಂದೆ ಇಡಲು ಸಿದ್ಧರಿಲ್ಲದಿರುವುದನ್ನು ನೋಡಿದರೆ, ಮತ್ತು ಅವರ ಅವ್ಯವಹಾರಗಳನ್ನು ಸಹಿಸಿ ಕೊಂಡು ಸುಮ್ಮನಿರುವುದನ್ನು ನೋಡಿದರೆ, ವಿದ್ಯಾನಂದನಿಲಯದ ಹೆಸರಿನಲ್ಲಿ ನುಂಗಿ ರುವ ಮತ್ತು ಈಗಲೂ ಅದರ ಉತ್ಪತ್ತಿಯನ್ನೆಲ್ಲಾ ಸ್ವಾಹಾಮಾಡುತ್ತಿರುವ ಹಣದಲ್ಲಿ ಇವರಿಗೂ ಪಾಲುಂಟು ಎಂಬುದು ಅರ್ಥವಾಗುತ್ತದೆ.

## ಗ್ರಾಮಫೋನ್ ರೆಕಾರ್ಡುಗಳಿಗೆಂದು ಹಣ

ವಿದ್ಯಾನಂದರು ಆಗಾಗ್ಗೆ ಹಣಸಂಪಾದನೆಗೆಂದು ಅನೇಕ ಮಾರ್ಗೋಪಾಯ ಗಳನ್ನು ಕಂಡುಕೊಳ್ಳುತ್ತಾರೆ. ಹಣಸಂಗ್ರಹದ ಎಲ್ಲಾ ವ್ಯವಹಾರವೂ ಧರ್ಮದ ಹೆಸರಿ ನಲ್ಲಿಯೇ ನಡೆಯುತ್ತದೆ. ಇಂಥ ಒಂದು ಮಾರ್ಗೋಪಾಯ ಜಿನಭಕ್ತಿ ಗೀತೆಗಳ ರೆಕಾರ್ಡ್ ಮಾಡಿಸಲು ಇವರು ಹಣಸೆಳೆದದ್ದು. ಈ ಯೋಜನೆಗೆ ಅನೇಕರು ಹಣ ತೆತ್ತಿದ್ದಾರೆ. ಮೈಸೂರಿನ ಶ್ರೀಮಂತರೊಬ್ಬರು ಈ ಬಾಬ್ತಿಗೆಂದು ಹತ್ತುಸಾವಿರ ರೂಪಾಯಿಗಳನ್ನು ವಿದ್ಯಾನಂದರು 1974 ರಲ್ಲಿ ದೆಹಲಿಯಲ್ಲಿದ್ದಾಗ ಅವರಿಗೆ ಅರ್ಪಿಸಿ ಬಂದಿದ್ದಾರೆ. ಹೀಗೆ ಅಸಂಖ್ಯಾತ ಜನರಿಂದ ಬಹಳ ಸರುವಾಗಿ ಸಂಗ್ರಹಿಸಿರುವ ಹಣಕ್ಕೆ ಯಾವ ರಶೀದಿಯನ್ನೂ ನೀಡಿಲ್ಲ. ಸಂಗ್ರಹಿಸಿದ ಹಣದ ಲೆಕ್ಕಪತ್ರಗಳನ್ನೂ ಬಹಿರಂಗ ಪಡಿಸಿಲ್ಲ. ಎಷ್ಟು ಹಣ ನಿಜವಾಗಿ ಈ ಬಾಬ್ತಿಗೆ ಖರ್ಚಾಯಿತು ? ಉಳಿದ ಹಣ ಏನಾಯಿತು ? ರೆಕಾರ್ಡ್‌ಗಳನ್ನು ಮಾರಾಟ ಮಾಡಿ ಬಂದ ಹಣ ಎಲ್ಲಿಗೆ ಹೋಗು ತ್ತದೆ ? ಎಲ್ಲವೂ ಗೋಪ್ಯವಾಗಿದೆ ? ಚಿದಂಬರ ರಹಸ್ಯವಾಗಿದೆ. ಪ್ರಚಾರದಲ್ಲಿ ಮಾತ್ರ ಯಾರೂ ಮಾಡಿಸದ. ಇದ್ದ ರೆಕಾರ್ಡುಗಳನ್ನು ಅವರು ಮಾಡಿಸಿಬಿಟ್ಟರು ಎಂಬ ಆರ್ಭಟ ನಿರಂತರವಾಗಿ ನಡೆಯುತ್ತದೆ. ಈ ರೆಕಾರ್ಡ್ ಮಾಡಿಸುವ ನಾಟಕ

ದಲ್ಲಿ ಎಷ್ಟು ಹಣ ನಿಜವಾಗಿ ಮಂಗವಮಾಯವಾಯಿತು ಎಂಬುದು ಇವರಿಗೂ ಇವರ ದಳ್ಳಾಳಿಗಳಿಗೂ ಮಾತ್ರ ತಿಳಿದ ರಹಸ್ಯವಾಗಿದೆ.

## ಅಭಿಷೇಕ ಜಲದ ಮಾರಾಟ

1981 ನೇ ವರ್ಷದ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕ ವಿದ್ಯಾನಂದರ ಮಾರ್ಗದರ್ಶನದಲ್ಲಿ ನಡೆಯಿತು. ಇಲ್ಲಿ ಇವರು ಮಾಡಿದ ಮಾರ್ಗದರ್ಶನವೆಂದರೆ ಧಾರ್ಮಿಕಭಾವನೆಗಳಿಗೆ ಎಳ್ಳುನೀರು ಬಿಟ್ಟು ಆಡಂಬರದ ಜಾತ್ರೆನಡೆಸಿ ಹಣಸಂಗ್ರಹದ ವ್ಯಾಪಕವಾದ ಬಲೆಯನ್ನು ಬೀಸಿದ್ದು ಮಾತ್ರ. ಕ್ಷೇತ್ರದ ಮುಜರಾಯಿ ಸಂಸ್ಥೆಯಾದ ಎಸ್.ಡಿ ಜೆ.ಎಂ.ಐ. ಮೇನೇಜಿಂಗ್ ಕಮಿಟಿಯ ಹಣಸಂಗ್ರಹ ಮಾಡುವ ಪರಮಾಧಿಕಾರದ ಹಕ್ಕನ್ನು ಕುತಂತ್ರಮಾಡಿ ಅದರ ವಶದಿಂದ ತಪ್ಪಿಸಿ ಖಾಸಗಿಯವರಿಗೆ ಅದನ್ನು ಅಕ್ರಮವಾಗಿ ಒಪ್ಪಿಸಿ, ಹಾಗೆ ಸಂಗ್ರಹಿಸಿದ ದೊಡ್ಡಮೊತ್ತದ ಹಣವನ್ನು ವಿದ್ಯಾನಂದರೂ ಮತ್ತು ಅವರ ದಳ್ಳಾಳಿಗಳೂ ಹಂಚಿಕೊಂಡಿದ್ದೇ ಈ ಸಮಯದಲ್ಲಿ ಅವರು ಮಾಡಿದ ಮಹತ್‌ಸಾಧನೆ.

ಅಭಿಷೇಕದ ಕಲಶಗಳಿಗೆಲ್ಲಾ ನೂರೊಂದು ರೂಪಾಯಿ ಶುಲ್ಕ ಕೊಡಬೇಕು ಎಂದು ಗೊತ್ತುಪಡಿಸಿ ಅದಕ್ಕೆ ಕ್ರಮಬದ್ಧವಲ್ಲದ ರಶೀದಿಯನ್ನು ನೀಡಿ, ಅಭಿಷೇಕದ ಕಲಶ ನೀಡುವಾಗ ಆ ರಶೀದಿಯನ್ನು ಪುನಃ ಹಿಂದಕ್ಕೆ ಪಡೆದು ಕೊಂಡು ಹಣಕೊಟ್ಟು ದಾಖಲೆಯಾದ ಅಕ್ರಮ ರಶೀದಿ ಅವರ ಹತ್ತಿರದಲ್ಲಿ ಉಳಿಯದಂತೆ ಮಾಡಿ ಆ ಹಣವನ್ನೆಲ್ಲಾ ವಿದ್ಯಾನಂದರು ಮತ್ತು ಅವರ ದಳ್ಳಾಳಿಗಳು ಬಹಳ ನಯವಾಗಿ ವಶಪಡಿಸಿಕೊಂಡಿರುವುದು—ಇವೆಲ್ಲಾ ವಿದ್ಯಾನಂದರ ಮಾರ್ಗದರ್ಶನದಲ್ಲಿ ಆದ ಜನವಂಚನೆಯ ಕಾರ್ಯಗಳು.

## ದೇವರನ್ನು ನೋಡಲು ತಲೆಗಂದಾಯ

ಕೇಂದ್ರಸರ್ಕಾರ ಮಾಡಿರುವ ಕಾನೂನಿನಂತೆ ಗೋಮಟೇಶ್ವರ ವಿಗ್ರಹವನ್ನು ದರ್ಶನಮಾಡಲು ತಲೆಗಂದಾಯ ವಿಧಿಸುವುದಕ್ಕೆ ಯಾರಿಗೂ ಹಕ್ಕಿಲ್ಲ. ಹಣಕೊಟ್ಟು ದೇವರ ದರ್ಶನ ಮಾಡಬೇಕೆಂದು ಜೈನತತ್ವಗಳಲ್ಲಿ ಎಲ್ಲಿಯೂ ಹೇಳಿಲ್ಲ. ವಾಸ್ತವ ಸಂಗತಿ ಹೀಗಿರುವಾಗ ಮಸ್ತಕಾಭಿಷೇಕ ಸಮಯದಲ್ಲಿ ನೂರೊಂದು ರೂಪಾಯಿ ಕಳಶ ತೆಗೆದುಕೊಂಡವರಿಗೆ ಮಾತ್ರ ಬೆಟ್ಟಕ್ಕೆ ಪ್ರವೇಶ ಎಂಬ ನಿರ್ಬಂಧ ಈ ವಿದ್ಯಾನಂದರ ಮಾರ್ಗದರ್ಶನದಲ್ಲಿಯೇ ಬಂದದ್ದು.

ಈಗಲೂ ಸಹ ಶ್ರವಣಬೆಳಗೊಳಕ್ಕೆ ಹೋಗಿ ಗೋಮಟೇಶ್ವರನ ದರ್ಶನ ಮಾಡಬೇಕೆನ್ನುವವರಿಂದ ಪ್ರವೇಶದ್ವಾರದಲ್ಲಿ ಒಂದು ರೂಪಾಯಿ ತಲೆಗಂದಾಯ

ವಸೂಲು ಮಾಡುತ್ತಿದ್ದಾರೆ. ಈ ವಸೂಲಾತಿಯಲ್ಲೂ ಒಂದು ವಂಚನೆಯುಂಟು. ಒಂದು ರೂಪಾಯಿ ತೆಗೆದುಕೊಂಡು ಅವರು ನೀಡುವ ಟಿಕೆಟ್‌ನಲ್ಲಿ 'ಪ್ರವೇಶಶುಲ್ಕ' ಎಂಬ ಒಕ್ಕಣೆಯಿರದೆ 'ಕ್ಷೇತ್ರಾಭಿವೃದ್ಧಿ ನಿಧಿ' ಎಂಬ ಒಕ್ಕಣೆಯಿರುತ್ತದೆ. ಈ ಕುತಂತ್ರ ದಿಂದಾಗಿ ಯಾರೂ ತಲೆಗಂದಾಯ ವಿಧಿಸಿದ್ದಕ್ಕಾಗಿ ಮೊಕದ್ದಮೆ ಹೂಡಲು ಅವಕಾಶ ವಾಗುವುದಿಲ್ಲ.

ತ್ಯಾಗಮೂರ್ತಿಗೆ ಮಾಡುವ ಅಭಿಷೇಕದ ಜಲವನ್ನು ಮಾರಾಟದ ಸಾಧನವನ್ನಾಗಿ ಮಾಡಿ ಹಣವಿದ್ದವರು ಮಾತ್ರ ಪುಣ್ಯವನ್ನು ಕೊಂಡುಕೊಳ್ಳಬಹುದು ಎಂಬ ನಾಚಿಗೆ ಗೇಡಿನ ವ್ಯಾಪಾರಿಬುದ್ಧಿ ಪುಣ್ಯಕ್ಷೇತ್ರದಲ್ಲಿ ಅಸಹ್ಯಕರವಾಗಿ ಪ್ರದರ್ಶನವಾಗಲು ಈ ವಿದ್ಯಾನಂದರೆ ಮೂಲ ಕಾರಣ.

## ಜನಮಂಗಲ ಕಲಶದ ಹಣ

ಮಸ್ತಕಾಭಿಷೇಕ (1981) ಸಂದರ್ಭದಲ್ಲಿ ಶ್ರೀ ಗೋಮಟೇಶ್ವರನ ಹೆಸರಿನಲ್ಲಿ ಹೊರಡಿಸಿದ 'ಜನಮಂಗಲ' ಕಲಶದ ಬಾಬ್ತು ದೇಶಾದ್ಯಂತ ಸಂಗ್ರಹಿಸಿದ ಸುಮಾರು 30-40 ಲಕ್ಷ ರೂಪಾಯಿನ ದೊಡ್ಡ ಮೊತ್ತದ ಹಣ ಕಾನೂನಿನಂತೆ ಶ್ರವಣಬೆಳಗೊಳದ ಎಸ್. ಡಿ ಜೆ ಎಂ. ಐ ಕಮಿಟಿಯ ಬೊಕ್ಕಸಕ್ಕೆ ಸೇರಬೇಕಾಗಿತ್ತು. ಆದರೆ ಆ ಹಣ ವೆಲ್ಲಾ ವಿದ್ಯಾನಂದರ ಅನುಯಾಯಿಗಳು ರಚಿಸಿಕೊಂಡಿರುವ ಟ್ರಸ್ಟಿನ ವಶದಲ್ಲಿದೆ. ನಿಜವಾದ ವಾರಸುದಾರರಲ್ಲಿರಬೇಕಾದ ಹಣ ಕಮಿಟಿಯೊಂದಿಗೆ ಸಂಬಂಧವಿಲ್ಲದ ಪ್ರತ್ಯೇಕವಾದ ಕೆಲವು ಜನರ ಅಂಕೆಗೆ ಒಳಪಟ್ಟ ಟ್ರಸ್ಟಿನಲ್ಲಿದ್ದರೆ ಸಮಂಜಸವೆ ? ಹಣ ವನ್ನು ಪರಭಾರೆ ಮಾಡುವ ಕುತಂತ್ರ ಯಾರ ಮಾರ್ಗದರ್ಶನದಲ್ಲಿ ನಡೆಯಿತು ? ವಿದ್ಯಾ ನಂದರು ಈ ಅವ್ಯವಹಾರಗಳ ಒಸ್ನೆಲೆಯ ಸ್ಫೂರ್ತಿ ಕೇಂದ್ರವಾಗಿದ್ದಾರೆ

ಹೀಗೆ ವಿದ್ಯಾನಂದರಿಂದ ಕೆಲವು ಸಂದರ್ಭಗಳಲ್ಲಿ ನೇರವಾಗಿ ಕೆಲವು ಸಂದರ್ಭ ಗಳಲ್ಲಿ ಪರೋಕ್ಷವಾಗಿ ನಡೆದಿರುವ ಹಣದ ಅವ್ಯವಹಾರಗಳಿಗೆ ಕೊನೆ ಮೊದಲಿಲ್ಲ ಈ ಅನ್ಯಾಯದ ಮಾರ್ಗದಿಂದ ವಿದ್ಯಾನಂದರು ಈಗ ಲಕ್ಷಾಂತರ ರೂಪಾಯಿಗಳ ಆಗು ಹೋಗುಗಳನ್ನು ನಿರ್ಧರಿಸುವ ಸಾಮರ್ಥ್ಯವನ್ನು ತಮ್ಮ ಮಧ್ಯವರ್ತಿಗಳ ನೆರವಿನಿಂದ ಪಡೆದಿದ್ದಾರೆ. ಈ ಹಣದ ದುರಾಸೆಯಿಂದಾಗಿಯೇ ತಮ್ಮ ಬಗ್ಗೆ ಬರುವ ಎಲ್ಲಾ ಟೀಕೆಗಳಿಗೂ ಕಿವುಡರಾಗಿದ್ದುಕೊಂಡು ಭಂಡತನದ ಮಾರ್ಗವನ್ನು ಬಿಡದೆ ಹಿಡಿದಿದ್ದಾರೆ.

ಅಧ್ಯಾಯ : ಹತ್ತೊಂಬತ್ತು

# ಹೊಗಳಿಕೆ, ಸನ್ಮಾನ ಮತ್ತು ಸ್ವಪ್ರಚಾರದ ತಂತ್ರಗಳು

ಆಚಾರ್ಯ ಕುಂದಕುಂದರು "ಯಾವ ಸಾಧು ಗೃಹಸ್ಥರೊಡನೆ ಅತಿಸ್ನೇಹ ಬೆಳೆಸುವನೋ, ಆಚಾರ ಮತ್ತು ವಿನಯವನ್ನು ಯಾರು ಆಚರಿಸುವುದಿಲ್ಲವೋ ಅವನು ಸಾಧುವಲ್ಲ ತಿರ್ಯಂಚವಿದ್ದಂತೆ (ಲಿಂಗಪ್ರಾಭೃತ) ಎಂದು ಹೇಳಿದ್ದಾರೆ. ಈ ಮಾತು ಗಳಿಗೆ ವಿದ್ಯಾನಂದರು ಅತ್ಯುತ್ತಮವಾದ ನಿದರ್ಶನವಾಗಿದ್ದಾರೆ. ದೆಹಲಿ–ಇಂದೂರು–ಮುಂಬಯಿಗಳಲ್ಲಿರುವ ಕೆಲವು ಶ್ರೀಮಂತರು ಇಂದು ವಿದ್ಯಾನಂದರೊಂದಿಗೆ ಬಹಳ ಸ್ನೇಹವುಳ್ಳವರು. ಅಲ್ಲದೆ ಅನೇಕ ಸಮಾಜ ಘಾತುಕ ವ್ಯಕ್ತಿಗಳು, ಕಳ್ಳಸಾಗಣೆಗಾರರು, ಕಳ್ಳವ್ಯಾಪಾರಿಗಳೊಂದಿಗೆ ವಿದ್ಯಾನಂದರು ನಿಕಟಸಂಪರ್ಕವಿಟ್ಟುಕೊಂಡಿದ್ದಾರೆ. ಇವರಲ್ಲಿ ಅನೇಕರು ತಮ್ಮ ಕೆಲಸಕಾರ್ಯಗಳನ್ನೂ ಬಿಟ್ಟು ಸಾವಿರಾರು ರೂಪಾಯಿಗಳನ್ನು ನೀರಿನಂತೆ ಖರ್ಚು ಮಾಡಿಕೊಂಡು ವಿದ್ಯಾನಂದರ ಹಿಂದೆ ಹಿಂದೆಯೇ ಸುತ್ತಾಡುತ್ತಾರೆ. ಕೆಲವು ಪ್ರತಿಷ್ಠಿತ ಮಹಿಳೆಯರೂ ಇದರಲ್ಲಿ ಹಿಂದೆ ಬಿದ್ದಿಲ್ಲ. ಇತರ ಆಚಾರವಂತ ಮುನಿಗಳ ಕಡೆ ಈ ರೀತಿ ಗಮನವೀಯದೆ ಈ ನಟನೆಯ ಮುನಿಗಳ ಹಿಂದೆ ಬೀಳಲು ಏನು ಕಾರಣವಿರಬಹುದು ? ಇದರ ರಹಸ್ಯ ತಿಳಿಯುವುದು ಕಷ್ಟವೇನಲ್ಲ.

## ಹೊಗಳಿಕೆಯ ಸಮ್ಮೋಹನಾಸ್ತ್ರ

ಲೋಕದಲ್ಲಿ ಮುಖಸ್ತುತಿಯ ಸಮ್ಮೋಹನಾಸ್ತ್ರಕ್ಕೆ ಆಹುತಿಯಾಗದವರು ಬಹಳ ವಿರಳ. ವಿದ್ಯಾನಂದರ ಅನೇಕ ಅನುಯಾಯಿಗಳ ಕಥೆಯೂ ಇದೇ ಆಗಿದೆ. ವಿದ್ಯಾನಂದರು ಶ್ರೀಮಂತರನ್ನೂ, ರಾಜಕಾರಣಿಗಳನ್ನೂ, ಅಧಿಕಾರಿಗಳನ್ನೂ ಹೊಗಳುವುದರಲ್ಲಿ ಯಾವ ಭಟ್ಟಂಗಿಗೂ ಕಡಿಮೆಯಿಲ್ಲ! ಸಾಮಾನ್ಯವಾಗಿ ಪ್ರತಿಯೊಂದು ಊರಿನಲ್ಲಿಯೂ ಸಮಾಜದ ಮುಖಂಡತ್ವವನ್ನು ಹಣದ ಬಲವುಳ್ಳವರು ಆಕ್ರಮಿಸಿಕೊಂಡಿರುತ್ತಾರೆ. ಇಂಥ ಜನರನ್ನು ನಯವಾಗಿ ಹೊಗಳಿ ಅಟ್ಟಕ್ಕೇರಿಸಿ ತಮ್ಮ ಅಂಕೆಯೊಳಗೆ ಇಟ್ಟುಕೊಳ್ಳುವುದು ವಿದ್ಯಾನಂದರ ವ್ಯಾಪಕವಾದ ನಿರಂತರವಾದ ಕಾರ್ಯತಂತ್ರವಾಗಿದೆ. ವಧೆಯಾದ ಪ್ರಾಣಿಗಳ ಚರ್ಮದಿಂದ ಪಾದರಕ್ಷೆ ತಯಾರಿಸಿ ಮಾರಾಟ ಮಾಡುವ ಶ್ರೀಮಂತರೊಬ್ಬರನ್ನು ವಿದ್ಯಾನಂದರು 'ಸಾಕ್ಷಾತ್‌ರಾಮ' ಎಂದು ಹೊಗಳುತ್ತಾರೆ. ಪದೇ ಪದೇ ತನ್ನ ಕಾರ್ಖಾನೆಯಲ್ಲಿ ಕಾರ್ಮಿಕರನ್ನು ಬಗ್ಗುಬಡಿಯಲು ಲಾಕೌಟನ್ನು ಘೋಷಿಸಿ, ಇದರ ಮೂಲಕ ಶ್ರಮಜೀವಿ ವರ್ಗವನ್ನೂ ಅವರ ಕುಟುಂಬದವರನ್ನೂ

ಆರ್ಥಿಕವಾಗಿಯೂ ಮಾನಸಿಕವಾಗಿಯೂ ಹಿಂಸಿಸುವ ಶ್ರೀಮಂತರೊಬ್ಬರನ್ನು ಈ ವಿದ್ಯಾನಂದರು 'ಸಾಕ್ಷಾತ್ ಲಕ್ಷ್ಮಣ' ಎಂದು ಸ್ತುತಿಸುತ್ತಾರೆ. ಈ ರೀತಿಯ ಮುಖ ಸ್ತುತಿಯ ಮಾತುಗಳಿಗೆ ಮರುಳಾದ ಈ ಶ್ರೀಮಂತರಿಬ್ಬರೂ ಈ ಸೋಗಿನ ಮುನಿಗಳನ್ನು ಈಗಾಗಲೇ ಸಾಕಷ್ಟು ಮೆರೆಸಿದ್ದಾರೆ.

ವಿದ್ಯಾನಂದರ ಬುಡಬುಡಿಕೆಯ, ಮಾತುಗಳು ಮತ್ತು ಮುಖಸ್ತುತಿಗೆ ಮರುಳಾದ ಲಾಕೌಟಿನ 'ಲಕ್ಷ್ಮಣ'ನ ಮಗಳೊಬ್ಬಳು ವಿದ್ಯಾನಂದರಿಗೆ ಬಹಳ ಬೇಕಾದವಳಾಗಿ ಅವರ ಬಾಲಂಗೋಸಿಯಾಗಿದ್ದಾಳೆ. ವಿದ್ಯಾನಂದರು ಬೀಡುಬಿಟ್ಟ ಕಡೆಯೇ ಇವಳಿಗೂ ವಸತಿಯ ವ್ಯವಸ್ಥೆಯಾಗುತ್ತದೆ. ವಿದ್ಯಾನಂದರು ಈಕೆಯನ್ನು ತಮ್ಮ ಆಪ್ತಕಾರ್ಯದರ್ಶಿನಿ ಯಂತೆಯೂ ಉಪಯೋಗಿಸಿಕೊಂಡು ತಮಗೆ ಪ್ರಚಾರ ಕೊಡುವ ಅನೇಕ ವ್ಯವಹಾರ ಗಳನ್ನೂ ಈಕೆಯ ಮೂಲಕ ನಡೆಸಿಕೊಂಡು ಹೋಗುತ್ತಿದ್ದಾರೆ.

ಇವರು ಕೇವಲ ಹಣವಂತರನ್ನು ಮತ್ತು ಹೆಂಗಸರನ್ನು ಮಾತ್ರ ಹೊಗಳುವುದಿಲ್ಲ. ಊರಿನಲ್ಲಿ ಪುಂಡಪೋಕರಿಗಳೆಂದು ಯಾರು ಪಟ್ಟ ಕಟ್ಟಿಸಿಕೊಂಡಿರುತ್ತಾರೋ ಅಂಥವ ರನ್ನು ಇವರು ಪತ್ತೆಮಾಡಿ ಹೊಗಳಿ ತಮ್ಮ ದುಷ್ಕೃತ್ಯಗಳಿಗಾಗಿ ಅವರನ್ನು ಉಪಯೋಗಿಸಿ ಕೊಳ್ಳುತ್ತಾರೆ. ಸಮಾಜದ ಹಣವನ್ನು ಸ್ವಾಹಾ ಮಾಡುವುದರಲ್ಲಿ ನೈಪುಣ್ಯತೆ ಯಾರಿಗೆ ಹೆಚ್ಚು ಇರುತ್ತದೆಯೋ ಅಂಥವರಿಗೆ ವಿದ್ಯಾನಂದರಿಂದ ಹೆಚ್ಚು ಹೊಗಳಿಕೆ ಸಲ್ಲುತ್ತದೆ. ಕಳ್ಳಸಾಗಾಣಿಕೆದಾರರು, ಕಳ್ಳವ್ಯಾಪಾರ ಮಾಡುವವರು, ಲಾಭಕೋರರು—ಈ ರಾಷ್ಟ್ರ ದ್ರೋಹಿಗಳಲ್ಲಿ ಬಹುಜನರು ವಿದ್ಯಾನಂದರಿಂದ ಹೊಗಳಿಕೆಯನ್ನೂ ಸನ್ಮಾನವನ್ನೂ ಪಡೆದವರಾಗಿದ್ದಾರೆ.

## ಸನ್ಮಾನದ ಮಂಕುಬೂದಿ

ವಿದ್ಯಾನಂದರು ತಮ್ಮ ಛಟ್ಟಂಗಿ ವಿದ್ಯೆಯಿಂದ ಎಲ್ಲ ಬಗೆಯ ಜನರನ್ನು ವಶೀ ಕರಣ ಮಾಡಿಕೊಂಡ ಮೇಲೆ ಅವರನ್ನು ಅಲ್ಲಿಗೇ ಬಿಡುವುದಿಲ್ಲ. ಬಹಿರಂಗ ಸಭೆ, ಸಮಾರಂಭಗಳಲ್ಲಿ ಅವರಲ್ಲಿ ಕೆಲವರನ್ನು ಸಮಾಜದ ಪರವಾಗಿ ಸನ್ಮಾನಿಸುವ ವ್ಯವಸ್ಥೆ ಮಾಡಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಈ ಜನರಿಗೆ ಸನ್ಮಾನ ಪತ್ರಗಳನ್ನು ಸಮರ್ಪಿಸ ಲಾಗುತ್ತದೆ. ಈ ಸನ್ಮಾನ ಪತ್ರದಲ್ಲಿ ಅವರನ್ನು ಸಮಾಜ ಭೂಷಣ, ಮಹಾತ್ಮ, ಧರ್ಮಾತ್ಮ, ಶ್ರಾವಕಶಿರೋಮಣಿ ಶಿರೋಮಣಿ ಎಂದೆಲ್ಲಾ ಮುಂತಾದ ವಿಶೇಷಣಗಳಿಂದ ಸ್ತುತಿಸುತ್ತಾರೆ. ಕೆರೆಯನೀರನು ಕೆರೆಗೆ ಚೆಲ್ಲಿದಂತೆ ಆ ಸನ್ಮಾನಿತರಾದವರಿಗೆ ಬಹು ಪಾಲು ಸಂದರ್ಭಗಳಲ್ಲಿ ಅವರಿಂದಲೇ ಕಸಿದುಕೊಂಡ ಹಣದಿಂದ ಖರೀದಿಸಿದ ಚಿನ್ನದ ಸರ, ಬೆಳ್ಳಿಚೊಂಬು, ಶಾಲು ಮೊದಲಾದ ಕಾಣಿಕೆಗಳನ್ನು ಅವರವರ ಅಂತಸ್ತನ್ನು ಆಧರಿಸಿ ಕೊಡುತ್ತಾರೆ. ಶ್ರೀಮಂತ ಹೆಂಗಸಾದರೆ ಅವರಿಗೆ ವಿದ್ಯಾನಂದರ ಪ್ರತಿಕೃತಿಯ ಮುದ್ರೆಯಿರುವ ಚಿನ್ನದ ಡಾಲರಿನ ಸರವೊಂದು ಸಿಗುತ್ತದೆ. ಹೀಗೆ ವಿದ್ಯಾನಂದರಿಂದ

ಸನ್ಮಾನದ ಮಂಕುಬೂದಿಯನ್ನು ಎರಚಿಸಿಕೊಂಡವರು ವಿದ್ಯಾನಂದರ ಅನಾಚಾರಗಳನ್ನು ಸಹಿಸಿಕೊಂಡು ಅವರ ಶಾಶ್ವತ ಗುಲಾಮರಾಗಿ ಬದುಕುತ್ತಾರೆ.

1981ರ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕದ ಸಮಯದಲ್ಲಿ ಈ ಹೊಗಳಿಕೆ ಮತ್ತು ಸನ್ಮಾನಗಳಿಗಾಗಿ ಭಾರಿ ವ್ಯವಸ್ಥೆಯನ್ನೇ ಮಾಡಲಾಗಿತ್ತು. ಅನೇಕ ಊರುಗಳ ಸಮಾಜದ ಮುಖಂಡರು, ವಿದ್ಯೆಯ ಅರ್ಥ ತಿಳಿಯದ ವಿದ್ವಾಂಸರು, ಅಧಿಕಾರದಲ್ಲಿರುವ ರಾಜಕಾರಣಿಗಳು, ಸರ್ಕಾರಿ ಅಧಿಕಾರಿಗಳು, ನಿವೃತ್ತ ಅಧಿಕಾರಿಗಳು ಮುಂತಾದವರೆಲ್ಲರೂ ವಿದ್ಯಾನಂದರ ಜೀವನ ರಹಸ್ಯವನ್ನು ತಿಳಿಯದೆ ಅವರಿಂದ ಅವರ ಕಡೆಯವರಿಂದ ಸನ್ಮಾನ ಮಾಡಿಸಿಕೊಂಡು ಹೆಮ್ಮೆಪಟ್ಟುಕೊಂಡರು. ಹೀಗೆ ಸನ್ಮಾನ ಮಾಡಿಸಿಕೊಂಡವರಲ್ಲಿ ಗಾಜಿನ ವಜ್ರಗಳೇ ಹೆಚ್ಚೆಂಬುದು ಎಲ್ಲರಿಗೂ ತಿಳಿದ ಸಂಗತಿ. ನಿದರ್ಶನಕ್ಕೆ ಒಮ್ಮೆ ಶ್ರವಣಬೆಳಗೊಳದಲ್ಲಿ ನಡೆದ ಸನ್ಮಾನ ಸಮಾರಂಭವೊಂದರಲ್ಲಿ ಒಬ್ಬ ನಿವೃತ್ತ ಸರ್ಕಾರೀ ಉನ್ನತಾಧಿಕಾರಿಯನ್ನು ವಿದ್ಯಾನಂದರು ಸನ್ಮಾನಿಸುತ್ತಾ ಆತ ಇಂದ್ರ ಚಂದ್ರ ಪರೋಪಕಾರಿ ಸಮಾಜಾಭಿಮಾನಿ ಎಂದೆಲ್ಲಾ ಹಾಡಿ ಹೊಗಳಿದರು. ಹೀಗೆ ಹೊಗಳಿಸಿಕೊಂಡ ಮನುಷ್ಯ[1] ತನ್ನ ಅಧಿಕಾರಾವಧಿಯಲ್ಲಿ ತನ್ನ ಕುಟುಂಬದ ಹಿತವನ್ನಷ್ಟು ಮಾಡಿಕೊಂಡವನೇ ಹೊರತು ಸಮಾಜದ ಜನರ ಕಷ್ಟಸುಖಗಳ ಕಡೆ ಮುಖ ತಿರುಗಿಸಿಯೂ ನೋಡಿದವನಲ್ಲ! ನ್ಯಾಯ ಸಮ್ಮತ ಉಪಕಾರವನ್ನು ಬಯಸಿ ಈತನ ಮನೆಯ ಮೆಟ್ಟಿಲುಗಳನ್ನು ತುಳಿದವರಲ್ಲಿ ಒಬ್ಬರಾದರೂ ನಗುಮುಖದಿಂದ ಹಿಂತಿರುಗಿ ಬಂದವರಿಲ್ಲ! ನಿಜಸಂಗತಿ ಹೀಗಿರುವಾಗ ವಿದ್ಯಾನಂದರು ಏಕೆ ಹಸಿ ಸುಳ್ಳನ್ನು ಹೇಳಿ ಆತನನ್ನು ಸನ್ಮಾನಿಸಿದರು ಎಂಬ ಪ್ರಶ್ನೆ ಹಲವರಲ್ಲಿ ಮೂಡಿತು. ಇದರ ಬಗೆಗೆ ಚೆನ್ನಾಗಿ ವಿಚಾರ ಮಾಡಿದಾಗ, ವಿದ್ಯಾನಂದರು ಪಾರ್ಶ್ವಕೀರ್ತಿಗಳ ವೇಷದಲ್ಲಿದ್ದಾಗ ಆ ಅಧಿಕಾರಿಯ ಮನೆಯಲ್ಲಿ ಬಹುದಿನಗಳ ಕಾಲ ತಂಗಿದ್ದರೆಂಬುದು ತಿಳಿದುಬಂತು!

ಬೆಂಗಳೂರಿನಲ್ಲಿ ವಾಸವಾಗಿರುವ ಕರ್ನಾಟಕದ ಪ್ರಸಿದ್ಧ ಜೈನವಿದ್ವಾಂಸರೊಬ್ಬರು 'ಏಲಾಚಾರ್ಯ' ಪದವಿ ಪಡೆದುದು ಅಕ್ರಮವೆಂದು ಸೂಚಿಸುವ ಒಂದು ಲೇಖನ ಬರೆದು ಪ್ರಕಟಿಸಿದರು. ಸರಿ ವಿದ್ಯಾನಂದರ ವಕ್ರದೃಷ್ಟಿ ಈ ಲೇಖಕರ ಮೇಲೆ ಬಿತ್ತು. ಆದರೆ ಈ ವಿದ್ವಾಂಸರನ್ನು ಉಪೇಕ್ಷೆಮಾಡಿ ಅರಗಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಈ ವಿದ್ವಾಂಸರು ಒಮ್ಮೆ ಮಸ್ತಕಾಭಿಷೇಕ ವೀಕ್ಷಿಸಲು ಶ್ರವಣಬೆಳಗೊಳಕ್ಕೆ ಹೋಗಿದ್ದಾಗ ವಿದ್ಯಾನಂದರ ಸನ್ಮಾನ ತಂತ್ರಕ್ಕೆ ಒಳಗಾದರು. ಒಂದು ಸಾವಿರ ರೂಪಾಯಿ ಕಾಣಿಕೆ ಮತ್ತು ಒಂದು ಶಾಲು ಇವರಿಗೆ ಸಿಕ್ಕಿತು. ಈ ಪ್ರಸಂಗವನ್ನು ಕುರಿತು ಇವರು ತಮ್ಮ

---

1. ಈ ಮನುಷ್ಯ ವಿದ್ಯಾನಂದರನ್ನು ಸಮರ್ಥಿಸಿ ತಾ. 22-12-1980ರಲ್ಲಿ ಈ ಕೃತಿಯ ಲೇಖಕರಿಗೆ ಪತ್ರವೊಂದನ್ನು ಬರೆದಿದ್ದಾನೆ.

ಸ್ನೇಹಿತರೊಬ್ಬರ ಬಳಿ ಹೇಳುತ್ತಾ "ಬರುವ ಹಣವನ್ನು ಏಕೆ ಬಿಡಬೇಕೆಂದು ತೆಗೆದು ಕೊಂಡೆ" ಎಂದು ತಮ್ಮ ವರ್ತನೆಯನ್ನು ಸಮರ್ಥಿಸಿಕೊಂಡರು

ಸಮಾಜದ ಕೆಲವು ಜನರಿಗೆ ಸಲ್ಲುವ ಈ ಹೊಗಳಿಕೆ ಸನ್ಮಾನ ಸಮಾಜ ಸೇವಕರಿಗೆ ಕೊಡುವ ಪ್ರೋತ್ಸಾಹ ಎಂದು ವಿದ್ಯಾನಂದರು ಹೇಳಬಹುದು. ಇದು ಹೊರನೋಟಕ್ಕೆ ಸರಿಯೆಂದು ಕಂಡರೂ ಇದರ ಒಳಗಿನ ಉದ್ದೇಶವೇ ಬೇರೆಯಾಗಿದೆ. ಸಮಾಜದ ವಿವಿಧ ರಂಗಗಳ ಆಯಕಟ್ಟಿನ ಸ್ಥಾನಗಳಲ್ಲಿರುವ ಪ್ರಮುಖ ಜನರ ಮೇಲೆ ತಮ್ಮ ಹತೋಟಿ ಸಾಧಿಸುವ ಕುತಂತ್ರ ಇದಾಗಿದೆ. ಈ ಮೂಲಕ ತಮ್ಮ ಕಪಟಾಚಾರಗಳನ್ನು ಅಡೆತಡೆಯಿಲ್ಲದಂತೆ ನಡೆಸಿಕೊಂಡು ಹೋಗುವುದು ವಿದ್ಯಾನಂದರ ಕಾರ್ಯತಂತ್ರ ವಾಗಿದೆ. ಇದಕ್ಕಾಗಿ ಅವರು ತಮ್ಮದೇ ಆದ ವ್ಯವಸ್ಥಿತವಾದ ವಂಚನೆಯ ರಾಷ್ಟ್ರ ವ್ಯಾಪೀ ಜಾಲವೊಂದನ್ನು ನಿರ್ಮಿಸಿಕೊಂಡು ಅದರ ಆಧಿಪತ್ಯವನ್ನು ಹೊಂದಿದ್ದಾರೆ.

ಅನೇಕ ಜನರು ಇವರ ಜೀವನ ರಹಸ್ಯಗಳನ್ನು ತಿಳಿದುಕೊಂಡಿದ್ದರೂ ಸ್ವಲಾಭದ ಉದ್ದೇಶದಿಂದ ಇವರೊಂದಿಗೆ ಸಹಕರಿಸುತ್ತಾರೆ. ಅನೇಕರು ಈ ರಹಸ್ಯ ತಿಳಿಯದೆ ಸಹಕಾರ ನೀಡುತ್ತಾರೆ. ಇಂಥವರಲ್ಲಿ ಅನೇಕರಿಗೆ ವಿದ್ಯಾನಂದರ ಜೀವನ ರಹಸ್ಯ ಕ್ರಮೇಣ ತಿಳಿದು ತಮಗೆ ನಂಬಿಕೆ ದ್ರೋಹವಾದಾಗ ಅವರು ವಿದ್ಯಾನಂದರನ್ನು ವಿರೋಧಿಸಲು ಹೋಗದೆ ಅವರ ಸಂಪರ್ಕವನ್ನು ಕಡಿದುಕೊಂಡು ತಟಸ್ಥರಾಗಿ ಬಿಡು ತ್ತಾರೆ. ಇಂಥವರು ಸಾಕಷ್ಟು ಜನರು ಸಿಗುತ್ತಾರೆ. ವಿದ್ಯಾನಂದರ ನಿಜರೂಪ ತಿಳಿದಾಗ ಅದನ್ನು ಸರ್ವಶಕ್ತಿಯಿಂದ ಪ್ರತಿಭಟಿಸಲು ಹೋಗುವವರು ಬೆರಳೆಣಿಕೆಗೆ ಸಿಗುವಷ್ಟು ಜನರು ಮಾತ್ರ. ವಿದ್ಯಾನಂದರ ಪೂರ್ವಜೀವನದ ಪಾರ್ಶ್ವಕೀರ್ತಿ ಅವತಾರ ದಲ್ಲಿ ಶ್ಲಾಘ್ಯವಾದ ಪ್ರತಿಭಟನೆ ತೋರಿಸಿದ. ಅಶೋಕದಾದಾ ಪಾಟೀಲ್, ಜಂಬು ಕುಮಾರ್ ಪಾರ್ಶ್ವನಾಥ ಶಿರಟಿ, ಪಿ. ಹೆಚ್. ಗುಂಜಾಳ್, ಮತ್ತು ಗುಳಕೊಪ್ಪದ ಪದ್ಮ ರಾಜಯ್ಯ ಇವರೆಲ್ಲರ ಪರಿಚಯ ಈಗಾಗಲೇ ಆಗಿದೆ. ದಿಗಂಬರ ಅವತಾರದಲ್ಲಿ ಇಂತಹ ಪ್ರತಿಭಟನೆ ತೋರಿದವರ ಪರಿಚಯ ಈ ಪುಸ್ತಕದ 25ನೇ ಅಧ್ಯಾಯದಲ್ಲಿದೆ.

## ಸ್ವಪ್ರಚಾರದ ಧೌಲು

ಮುನಿಗಳಾದವರು ತಮಗೆ ಸತ್ಕಾರ, ಪುರಸ್ಕಾರ, ಪೂಜೆ ಸನ್ಮಾನಗಳು ಆಗಲಿ ಎಂದು ಮನಸ್ಸಿನಲ್ಲಿಯೂ ಬಯಸಬಾರದು ಎಂದು ಜೈನಗ್ರಂಥಗಳು ಹೇಳುತ್ತವೆ. ಈ ವಿಚಾರದಲ್ಲಿ ವಿದ್ಯಾನಂದರು ಬಯಸುವುದಿರಲಿ ತಮ್ಮ ಅನೇಕ ಸತ್ಕಾರ ಪುರಸ್ಕಾರಗಳ ವ್ಯವಸ್ಥೆಯನ್ನು ಸ್ವತಃ ತಾವೇ ಯೋಜಿಸಿ ಅದನ್ನು ತಮ್ಮ ದಳ್ಳಾಳಿಗಳ ಮೂಲಕ ನೆರವೇರಿಸಿಕೊಂಡಿರುವುದು ಈಗ ರಹಸ್ಯವಾಗೇನೂ ಉಳಿದಿಲ್ಲ ! ವಿದ್ಯಾನಂದರ ಈ ರಹಸ್ಯ ವ್ಯಾಪಾರವನ್ನು ಶ್ರವಣಬೆಳಗೊಳದ ಜೈನಮಠದ ಸ್ವಾಮಿಗಳಾದ ಚಾರುಕೀರ್ತಿ ಭಟ್ಟಾರಕರು ತಾ. 26-8-1979ರಂದು ಮೈಸೂರಿನ ಶ್ರೀ ಎಸ್. ಪಿ. ಶಾಂತರಾಜ

ರಿಗೆ ಬರೆದ ಪತ್ರ[1]ವೊಂದರಲ್ಲಿ ಬಹಿರಂಗಪಡಿಸಿದ್ದಾರೆ. ಎಸ್. ಪಿ. ಶಾಂತರಾಜರು ವಿದ್ಯಾನಂದರ 'ದಕ್ಷಿಣ ಪಥ ವಿಹಾರ ಸ್ವಾಗತ ಸಮಿತಿ'ಗೆ 25,000ರೂಪಾಯಿಗಳನ್ನು ಶ್ರವಣಬೆಳಗೊಳದ ಎಸ್. ಡಿ. ಜೆ. ಎಂ. ಐ ಕಮಿಟಿಯು ಅಕ್ರಮವಾಗಿ ನೀಡುವುದನ್ನು ವಿರೋಧಿಸಿದವರಲ್ಲಿ ಒಬ್ಬ ಸದಸ್ಯರು. ವಿದ್ಯಾನಂದರ ಕೈಗೊಂಬೆಯಾಗಿ ಚಾರುಕೀರ್ತಿಗಳು ಬರೆದ ಈ ಪತ್ರದಲ್ಲಿ ಶಾಂತರಾಜರ ವಿರೋಧವನ್ನು ಹಿಮ್ಮೆಟ್ಟಿಸಲು ಪ್ರಯತ್ನಿಸಿದ್ದಾರೆ. ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳಿ ಎಂದು ಒತ್ತಾಯಪಡಿಸುವಾಗ ವಿದ್ಯಾನಂದರ ರಹಸ್ಯ ಚಾರುಕೀರ್ತಿಗಳಿಂದ ಪ್ರಮಾದವಶಾತ್ ಬಯಲಾಗಿದೆ. ಆ ಪತ್ರಭಾಗ ಹೀಗಿದೆ :

"ನೀವು ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳದಿದ್ದಲ್ಲಿ ನಾವು ಕೆಲವು ಅನೈತಿಕ ಹಾಗೂ ನತದೃಷ್ಟಕರವಾದ ಸಂದರ್ಭಗಳನ್ನು ಪೂಜ್ಯ ಮುನಿಶ್ರೀಜಿಯವರ ಸಮ್ಮುಖದಲ್ಲಿ ಎದುರಿಸಬೇಕಾಗುತ್ತದೆ. ನಾವು ಅವರ ಬಳಿ ಹೋದಾಗ ಅವರು ನಮ್ಮನ್ನು ನಿಮ್ಮ ಆಕ್ಷೇಪಣೆಗಳ ಬಗೆಗೆ ಖಂಡಿತವಾಗಿ ಕೇಳುತ್ತಾರಾದ್ದರಿಂದ ನಾವು ಅದನ್ನು ಅವರಿಗೆ ವಿವರವಾಗಿ ತಿಳಿಸುವ ದೊಡ್ಡ ಹೊಣೆಯನ್ನು ಹೊರಬೇಕಾಗುತ್ತದೆಯಲ್ಲದೆ, ಅವರನ್ನೊಪ್ಪಿಸಲು ಕಠಿಣ ಹೋರಾಟವನ್ನು ನಡೆಸಬೇಕಾಗುತ್ತದೆ. ನಾವು ಈ ರೀತಿಯ ಸನ್ನಿವೇಶಗಳನ್ನು ಪೂಜ್ಯ ಮುನಿಶ್ರೀ ವಿದ್ಯಾನಂದಜಿಯವರ ಸಮ್ಮುಖದಲ್ಲಿ ನಿರೀಕ್ಷಿಸಬೇಕೆಂದು ನೀವು ಇಷ್ಟಪಡುವಿರಾ ?"

ಈ ಮಾತುಗಳು ವಿದ್ಯಾನಂದರು ತಮ್ಮ ಸ್ವಾಗತ ಸಮಾರಂಭಗಳನ್ನು ತಾವೇ ಏರ್ಪಡಿಸಿಕೊಳ್ಳುತ್ತಾರೆ ಎಂಬುದನ್ನು ರುಜುವಾತುಪಡಿಸುತ್ತವೆ. ಅಲ್ಲದೆ ಚಾರುಕೀರ್ತಿಗಳು ವಿದ್ಯಾನಂದರ ಗುಣದೋಷಗಳನ್ನು ವಿಚಾರ ಮಾಡದೆ ಶತಾಯಗತಾಯ ಅವರ ಆಸೆಗಳನ್ನು ನೆರವೇರಿಸಲು ಇರುವ ಒಬ್ಬ ತತ್ವಹೀನ ಮಧ್ಯವರ್ತಿ ಎಂಬುದನ್ನು ಸಾರುತ್ತವೆ.

ಇದುವರೆಗೆ ವಿದ್ಯಾನಂದರಿಗೆ ನಡೆದಿರುವ ಸ್ವಾಗತ ಸಮಾರಂಭಗಳು, ಮೆರವಣಿಗೆಗಳು—ಇವುಗಳಲ್ಲಿ ಬಹುತೇಕ ವಿದ್ಯಾನಂದರೇ ಸ್ವಯಂ ಏರ್ಪಡಿಸಿಕೊಂಡಿರುವ ಸಮಾರಂಭ ಮತ್ತು ಮೆರವಣಿಗೆಗಳಾಗಿವೆ. ಹೀಗೆ ವಿದ್ಯಾನಂದರ ನಾಟಕ ಮಂಡಳಿ ಜನರನ್ನು ನಿರಂತರವಾಗಿ ವಂಚಿಸುತ್ತಾ ಊರೂರುಗಳಿಗೆ ಮುಂದುವರೆಯುತ್ತದೆ.

---

1. ಈ ಪತ್ರ ಇದೇ ಲೇಖಕರ 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ ?' ಪುಸ್ತಕದಲ್ಲಿ ಪ್ರಕಟವಾಗಿದೆ.

ಸಾಮಾನ್ಯವಾಗಿ ವಿದ್ಯಾನಂದರು ತಮ್ಮ ಸಮಾರಂಭಗಳಲ್ಲಿ ಬಹಿರಂಗ ಸಭೆಗಳಲ್ಲಿ ಸ್ವಪ್ರಶಂಸೆಯ ಮಾತುಗಳನ್ನು ಆಡುವುದನ್ನು ಗಮನಿಸಬಹುದು. "ದೆಹಲಿಯಲ್ಲಿ 50 ಸಾವಿರ ಜನರು ನನ್ನ ಭಾಷಣ ಕೇಳಲು ಬಂದಿದ್ದರು. ಗ್ವಾಲಿಯರ್‌ನಲ್ಲಿ ನನ್ನ ಭಾಷಣ ಇದೆಯೆಂದು ತಿಳಿದು ಸರ್ಕಾರಿ ಆಫೀಸುಗಳ ಕೆಲಸದ ವೇಳೆಯನ್ನೇ ಬದಲಾಯಿಸಿದ್ದರು. ನ್ಯಾಯಾಲಯಗಳಿಗೆ ರಜೆ ಕೊಟ್ಟಿದ್ದರು." ಮುಂತಾದ ಆತ್ಮ ಪ್ರತ್ಯಯದ ಮಾತುಗಳು ನಿರಂತರವಾಗಿ ಹೊರಡುತ್ತಿರುತ್ತವೆ ಇದು ಮುನಿಧರ್ಮಕ್ಕೆ ವಿರುದ್ಧ ಎಂಬುದರ ಕಡೆಗೆ ಅವರ ಲಕ್ಷ್ಯವೇ ಇರುವುದಿಲ್ಲ !

ವಿದ್ಯಾನಂದರು ತಾವು ಭಾಷಣ ಮಾಡುವ ಸಭೆಗಳಲ್ಲಿ ತಮ್ಮ ಪರಿಚಯವನ್ನು ಜನರಿಗೆ ಮಾಡಿಕೊಡಲು ಬಾಡಿಗೆ ವಿದ್ವಾಂಸರುಗಳನ್ನೂ ಸಹ ನೇಮಿಸಿಕೊಳ್ಳುತ್ತಾರೆ. ಇವರು ವಿದ್ಯಾನಂದರನ್ನು ಬಣ್ಣಕಟ್ಟಿ ಹೊಗಳಿ ಜನರಿಗೆ ತಪ್ಪು ಮಾಹಿತಿಗಳನ್ನೊದಗಿಸು ತ್ತಾರೆ. 1970 ರಲ್ಲಿ ಅದೂ ಬೇಸಿಗೆ ಕಾಲದಲ್ಲಿ ವಿದ್ಯಾನಂದರು ಹಿಮಾಲಯದ ಬದ್ರೀನಾಥಕ್ಕೆ ಹೋಗಿ ಬಂದುದನ್ನು ಈ ಭಟ್ಟಂಗಿಗಳು ಅದೊಂದು ಮಹಾಸಾಧನೆ ಯೆಂಬಂತೆ ಬಣ್ಣಿಸುತ್ತಾರೆ. ಬಹುಶಃ ಗೌರಿಶಂಕರವನ್ನು ಹತ್ತಿಬಂದ ತೇನ್‌ಸಿಂಗ್ ಸಹ ಇಷ್ಟೊಂದು ಪ್ರಚಾರವನ್ನು ಮಾಡಿಸಿಕೊಳ್ಳಲಿಲ್ಲ ! ಜೈನಧರ್ಮದಲ್ಲಿ ಹೇಳಿರುವ ಮುನಿ ಧರ್ಮವನ್ನು ಈ ಮುನಿ ಕಾಲಕಸವಾಗಿ ಕಂಡು ನಾಟಕದ ಮುನಿಯಾಗಿ ಜನರನ್ನು ವಂಚಿಸುತ್ತಿದ್ದಾನೆ ಎಂಬುದು ಬಾಡಿಗೆಯ ಪರಿಚಯಕಾರರಿಗೆ ಗೊತ್ತಿದ್ದರೂ ಹೇಳುವು ದಿಲ್ಲ ! ಮಾರಾಟವಾದ ನಾಲಿಗೆ ಸತ್ಯ ಹೇಳಲು ಸಾಧ್ಯವೆ ?

ಅಧ್ಯಾಯ : ಇಪ್ಪತ್ತು

# ಅಕ್ರಮವಾಗಿ 'ಏಲಾಚಾರ್ಯ' ಪದವಿ ಪಡೆದ ಕುತಂತ್ರ

ವಿದ್ಯಾನಂದರು ತಾ. 17-11-1978ರಂದು ದೆಹಲಿಯಲ್ಲಿ 'ಏಲಾಚಾರ್ಯ' ಎಂದು ಬೇರೆ ಕರೆಸಿಕೊಂಡರು. ಈ ತಾರೀಖಿನಿಂದ ಇವರ ಏಲಾಚಾರ್ಯ ಅವತಾರ ಪ್ರಾರಂಭವಾಯಿತು.

ಉಪಾಧ್ಯಾಯ ಮುನಿಯಾಗಿದ್ದವರಿಗೆ ಆಚಾರ್ಯ ಪದವಿಯನ್ನು ನಿಜವಾಗಿ ಯಾರು ಕೊಡಬೇಕು ? ಆ ಪದವಿಯನ್ನು ಪಡೆಯುವ ಶಾಸ್ತ್ರ ಸಮ್ಮತ ಕ್ರಮ

ಯಾವುದು ? ಅದರಲ್ಲೂ ಏಲಾಚಾರ್ಯ ಅಂದರೇನು ? ಆಚಾರ್ಯ ಪದವಿಯನ್ನು ಪಡೆಯಲು ಬೇಕಾದ ಕಳಂಕರಹಿತವಾದ ವ್ಯಕ್ತಿತ್ವ ವಿದ್ಯಾನಂದರಿಗೆ ಇದೆಯೆ ? ಅವರು ಈ ಪದವಿಯನ್ನು ಪಡೆಯಲು ಏನಾದರೂ ಪಿತೂರಿ ಕುತಂತ್ರಗಳನ್ನು ನಡೆಸಿದರೆ ? ಮುಂತಾದ ವಿಚಾರಗಳ ಒಗೆಗೆ ಸತ್ಯ ಸಂಗತಿಗಳನ್ನು ತಿಳಿದುಕೊಳ್ಳಲು ನಿಸ್ಪಹಾಯಕರಾದ ಜನರು, ವಿದ್ಯಾನಂದರು ಏಲಾಚಾರ್ಯ ಎಂದು ಕರೆಸಿಕೊಂಡಾಗ ಜೈಕಾರ ಹಾಕಿಬಿಟ್ಟರು.

ಜೀವನದುದ್ದಕ್ಕೂ ವೇಷಾಂತರಗಳಲ್ಲಿ ದುಷ್ಕೃತ್ಯಗಳನ್ನು ಬಿಡದಂತೆ ಮಾಡಿಕೊಂಡು ಬಂದು ಭಂಡತನ, ಕ್ರೌರ್ಯಗಳನ್ನು ನಿರ್ಲಜ್ಜವಾಗಿ ಪ್ರದರ್ಶನ ಮಾಡಿದ ಕರಾಳ ಕೃತ್ಯಗಳ ಸುರೇಂದ್ರ ಉಪಾಧ್ಯೆ ತನ್ನ ಐವತ್ತೊಂದನೇ ವರ್ಷದಲ್ಲಿ ತಂತ್ರಾತಿ ಕುತಂತ್ರಮಾಡಿ ಅಕ್ರಮವಾಗಿ 'ಏಲಾಚಾರ್ಯ' ಪದವಿ ಪಡೆದ ಅತ್ಯಂತ ದೊಡ್ಡ ಜನವಂಚನೆಯ ಪ್ರಕರಣ ದಿಗಂಬರ ಜೈನ ಮುನಿಗಳ ಆಚಾರ್ಯ ಪರಂಪರೆಯಲ್ಲಿಯೇ ಇನ್ನೊಂದು ಸಿಗುವುದಿಲ್ಲ ! ಮೋಸಗಾರಿಕೆಯ ಕಲೆಯಲ್ಲಿ ನಿಷ್ಣಾತನಾದ ಮನುಷ್ಯ ಆಚಾರ್ಯ ನೆನೆಸಿಕೊಳ್ಳುವುದೇನು ಮಹಾ ! ಆತ ತೀರ್ಥಂಕರನೆನಿಸಿಕೊಳ್ಳಲೂ ಹಿಂದೆ ಮುಂದೆ ನೋಡುವುದಿಲ್ಲ ಎಂಬುದನ್ನು ಈ ಪ್ರಸಂಗ ನಿರೂಪಿಸುತ್ತದೆ. ಈ ಮಹಾ ವಂಚನೆಯನ್ನು ವಿರೋಧಿಸಿಬಂದ ಪ್ರತಿಭಟನೆಗಳನ್ನು ಸಮರ್ಥವಾಗಿ ಎದುರಿಸಲು ಸಾಧ್ಯವಾಗದೆ, ಕದ್ದು ಬಸಿರಾದವಳ ಸಂಕಟವನ್ನೂ ಬವಣೆಯನ್ನೂ ಅಪಮಾನವನ್ನೂ ವಿದ್ಯಾನಂದರು ಈಗಲೂ ಅನುಭವಿಸುತ್ತಿದ್ದಾರೆ ! ಆದರೆ ತಾನು ಮಹಾಪತಿವ್ರತೆ ಎಂದು ಹೇಳಿಕೊಳ್ಳುವ ಭಂಡತನದ ಮನೋವೃತ್ತಿಯನ್ನು ಮಾತ್ರ ಅವರು ಎಂದಿಗೂ ಬಿಡುವವರಲ್ಲ !

## ಆಚಾರ್ಯ ಪದವಿ ನೀಡುವ ಅಧಿಕಾರ

ಜೈನಧರ್ಮದ ಪ್ರಕಾರ ವೈರಾಗ್ಯಪರರಾಗಿ ಗೃಹತ್ಯಾಗ ಮಾಡಿದ ಸಾಧುಗಳಿಗೆ ಸಾಧನೆಯ ಹಂತಗಳುಂಟು. ಮೊದಲು ಬ್ರಹ್ಮಚಾರಿ. ನಂತರ ಕಾಷಾಯ ವಸ್ತ್ರಧರಿಸಿದ ಕ್ಷುಲ್ಲಕ[1] ಸಾಧು. ಅನಂತರ ಒಂದು ಲಂಗೋಟಿ ಮಾತ್ರ ಧರಿಸಿದ ಐಲಕ[2] ಸಾಧು. ಮುಂದೆ ದಿಗಂಬರ ಮುನಿ. ದಿಗಂಬರ ಮುನಿಯ ಮುಂದಿನ ಹಂತ ಉಪಾಧ್ಯಾಯ ಮುನಿ. ನಂತರ ಆಚಾರ್ಯಪದವಿ ಪಡೆದ ಮುನಿ. ಇದಾದ ಮೇಲೆ ತೀರ್ಥಂಕರ ಪದವಿ. ಕಡೆಯಲ್ಲಿ ಮೋಕ್ಷಾವಸ್ಥೆಯಾದ ಸಿದ್ಧ ಪದವಿ.

ಜೈನಶಾಸ್ತ್ರ ಗ್ರಂಥಗಳಲ್ಲಿ ಆಚಾರ್ಯರ ಗುಣಸ್ವರೂಪ[3]ವನ್ನೂ ಯೋಗ್ಯತೆಯನ್ನೂ ತೀರ್ಥಂಕರವಾಣಿಗೆ ಅನುಗುಣವಾಗಿ ಸ್ಪಷ್ಟವಾಗಿ ವಿವರಿಸಲಾಗಿದೆ. ಆಚಾರ್ಯ

---

1, 2.—ಕ್ಷುಲ್ಲಕ-ಐಲಕ ಭೇದಗಳು ಜೈನಧರ್ಮದ ಪ್ರಾಚೀನ ಗ್ರಂಥಗಳಲ್ಲಿ ಕಂಡುಬರುವುದಿಲ್ಲ. ದಿಗಂಬರ ಮುನಿಧರ್ಮದ ಪ್ರಸ್ತಾಪ ಮಾತ್ರ ಸಿಗುತ್ತದೆ.

3.—ಈ ಪುಸ್ತಕದ ಹದಿನಾಲ್ಕನೇ ಅಧ್ಯಾಯ ನೋಡಿ.

ನಾಗಿರುವ ಗುರುವು ಮೂವತ್ತಾರು ಗುಣಗಳನ್ನು ಹೊಂದಿರುವ ಮುನಿಗೆ ಸಮಸ್ತ ಸಂಘದ ಸಾಕ್ಷಿಯಾಗಿ ಆಚಾರ್ಯ ಪದವಿಯನ್ನು ಕೊಡಬಹುದು : "ಸಮಸ್ತ ಸಂಘದ ಸಾಕ್ಷಿಯಾಗಿ ಗುರುವು ಇಂಥ ಪುರುಷರಿಗೇನೇ ಆಚಾರ್ಯ ಪದವನ್ನು ಕೊಡುತ್ತಾನೆ. ಈ ಗುಣಗಳಿಲ್ಲದವರಿಗೆ ಆಚಾರ್ಯ ಪದವನ್ನು ಕೊಟ್ಟರೆ ಧರ್ಮತೀರ್ಥದ ಲೋಪವಾಗುತ್ತದೆ. ಮಿಥ್ಯಾ ಮಾರ್ಗದ ಪ್ರವೃತ್ತಿಯು ಉಂಟಾಗುತ್ತದೆ, ಹೆಚ್ಚುತ್ತದೆ. ಸಮಸ್ತ ಸಂಘವು ಸ್ವೇಚ್ಛಾಚಾರಿಯಾಗುತ್ತದೆ ಅಲ್ಲದೆ ಸೂತ್ರ ಮತ್ತು ಆಚಾರಗಳ ಪರಂಪರೆಯು ಇಲ್ಲದಂತಾಗುತ್ತದೆ."[1]

ಮೇಲಿನ ಶಾಸ್ತ್ರಸಮ್ಮತ ಮಾತುಗಳಂತೆ ತಮ್ಮ ಕೈ ಕೆಳಗಿನ ಮುನಿಗಳಿಗೆ ಆಚಾರ್ಯ ಪದವಿಯನ್ನು ಕೊಡುವ ಅಧಿಕಾರ ಸಾಧನೆಯ ಮುಂಚೂಣಿಯಲ್ಲಿರುವ ಆಚಾರ್ಯ ಪುರುಷರಿಗೆ ಮಾತ್ರ ಇರುತ್ತದೆ. ಆಚಾರ್ಯರಲ್ಲದ ಮುನಿಗಳು ಅಥವಾ ಕ್ಷುಲ್ಲಕ ಸಾಧುಗಳು ಅಥವಾ ಭಟ್ಟಾರಕ ಸ್ವಾಮಿಗಳು ಅಥವಾ ಗೃಹಸ್ಥರು ಆಚಾರ್ಯ ಪದವಿಯನ್ನು ದಿಗಂಬರ ಮುನಿಗಳಾದವರಿಗೆ ಕೊಡಬಹುದು ಎಂಬುದನ್ನು ಊಹಿಸಲೂ ಸಹ ಸಾಧ್ಯವಿಲ್ಲ ! ಒಂದು ಪಕ್ಷ ಭಟ್ಟಾರಕರು ಅಥವಾ ಗೃಹಸ್ಥರೇನಾದರೂ ಆಚಾರ್ಯ ಪದವಿಯನ್ನು ತಮ್ಮ ಗುರುಗಳಾದ ದಿಗಂಬರ ಮುನಿಗಳಿಗೆ ಕೊಟ್ಟಿರುವ ಪ್ರಸಂಗವೇನಾದರೂ ಇದ್ದರೆ ಅದು ನಿಶ್ಚಿತವಾಗಿಯೂ ಧರ್ಮದ್ರೋಹದ ಕೃತ್ಯವಾಗುತ್ತದೆ. ಜೈನ ಧರ್ಮಕ್ಕೆ ಎಸಗಿದ ಘೋರ ಅಪಚಾರವಾಗುತ್ತದೆ.

## ಆಚಾರ್ಯ ಪದವಿಯ ಮೇಲೆ ಕಣ್ಣು

ವಿದ್ಯಾನಂದರು 1963ರಲ್ಲಿ ದಿಗಂಬರರಾದ ನಂತರ 1974ರಲ್ಲಿ ದೆಹಲಿಯಲ್ಲಿಯೇ ಗುರು ದೇಶಭೂಷಣರಿಂದ 'ಉಪಧ್ಯಾಯ' ಪದವಿಯನ್ನು ಪಡೆದರೆಂದು ಹೇಳಲಾಗುತ್ತಿದೆ. ಈ ಪದವಿಯನ್ನು ದೇಶಭೂಷಣರೇ ಮನಃಪೂರ್ವಕವಾಗಿ ಕೊಟ್ಟರೇ ಅಥವಾ ವಿದ್ಯಾನಂದರೇನಾದರೂ ಒಳಸಂಚು ಮಾಡಿ ಇನ್ನೊಮ್ಮೆ ದೇಶಭೂಷಣರನ್ನು ವಂಚಿಸಿದ್ದಾರೆಯೇ ಎಂಬುದು ಪರಿಶೀಲನಾರ್ಹ. ದೇಶಭೂಷಣರನ್ನು ಸಂದಿಗ್ಧ ಸ್ಥಿತಿಗೆ ಸಿಲುಕಿಸಿ ಈ ಪದವಿಯನ್ನು ಪಡೆದಿರುವ ಸಾಧ್ಯತೆಯೂ ಇದೆ. ಏಕೆಂದರೆ 1981ರ ಮಹಾಮಸ್ತಕಾಭಿಷೇಕ ಸಮಯದಲ್ಲಿ ವಿದ್ಯಾನಂದರು ಒಳಸಂಚು ಮಾಡುವುದರಮೂಲಕ ದೇಶಭೂಷಣರನ್ನು ಸಂದಿಗ್ಧ ಸ್ಥಿತಿಗೆ ಸಿಲುಕಿಸಿ ಅವರ ಅಭಿಮುಖದಲ್ಲಿ 'ಸಿದ್ಧಾಂತ ಚಕ್ರವರ್ತಿ' ಎಂಬ ಬಿರುದನ್ನು ತಮ್ಮ ಶಿಷ್ಯರಿಂದ ಪಡೆದರು. ಅನಂತರ ಈ ಬಿರುದನ್ನು ದೇಶ ಭೂಷಣರು ಕೊಟ್ಟರು ಎಂದು ಪ್ರಚಾರ ಮಾಡಿಸಿದರು. ವಾಸ್ತವವಾದ ಸಂಗತಿಯೆಂದರೆ ವಿದ್ಯಾನಂದರು ಶ್ರವಣಬೆಳಗೊಳಕ್ಕೆ ಹೆಜ್ಜೆಯಿಡುವುದಕ್ಕೆ ಮೊದಲಿ

---

1. ಸಮಂತ ಭದ್ರಾಚಾರ್ಯರ 'ರತ್ನಕರಂಡಕ ಶ್ರಾವಕಾಚಾರ' ದ ಟೀಕೆ, ಪುಟ 346.

ನಿಂದಲೂ ಈ ಸಿದ್ಧಾಂತ ಚಕ್ರವರ್ತಿ ಎಂಬ ವಿಶೇಷಣವನ್ನು ವಿದ್ಯಾನಂದರ ಹೆಸರಿನ ಜೊತೆ ಸೇರಿಸಿ ಇವರ ಆಪ್ತ ಶಿಷ್ಯಮಂಡಳಿ ಇದನ್ನು ಪ್ರಚಾರ ಮಾಡಿತ್ತು. ದೇಶ ಭೂಷಣರು ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕವನ್ನು ಮುಗಿಸಿಕೊಂಡು ಮುಂದೆ ಕೋಥಳಿ ತಲುಪಿದ ಮೇಲೆ ಪತ್ರಿಕಾ ಪ್ರತಿನಿಧಿಯೊಬ್ಬರಿಗೆ ನೀಡಿದ ಸಂದರ್ಶನದಲ್ಲಿ 'ಸಿದ್ಧಾಂತ ಚಕ್ರವರ್ತಿ' ಬಿರುದನ್ನು ತಾವು ವಿದ್ಯಾನಂದರಿಗೆ ಕೊಟ್ಟಿಲ್ಲವೆಂಬುದನ್ನು ಸ್ಪಷ್ಟ ಪಡಿಸಿದರು. (ಸಿದ್ಧಾಂತ ಚಕ್ರವರ್ತಿ ಎಂದು ಕರೆಸಿಕೊಳ್ಳಲು ವಿದ್ಯಾನಂದರು ಮಾಡಿದ ವಂಚನೆಯ ವಿವರ ಇಪ್ಪತ್ತಮೂರನೇ ಅಧ್ಯಾಯದಲ್ಲಿದೆ)

ಅಂತೂ ಹೇಗೋ ವಿದ್ಯಾನಂದರು 1974ರಲ್ಲಿ ಉಪಾಧ್ಯಾಯ ಮುನಿಗಳೆಂದು ಕರೆಸಿಕೊಂಡರು. ಇದಾದ ಮೇಲೆ 'ಮಾರಿಯ ಕಣ್ಣು ಹೋತನ ಮೇಲೆ' ಎಂಬಂತೆ ವಿದ್ಯಾನಂದರ ಕಣ್ಣು ಆಚಾರ್ಯ ಪದವಿಯ ಮೇಲೆ ಬಿತ್ತು. 1974–75ನೇ ವರ್ಷ ದಲ್ಲಿ ನಡೆದ ಮಹಾವೀರ ತೀರ್ಥಂಕರರ 2500ನೇ ವರ್ಷದ ನಿರ್ವಾಣ ಮಹೋತ್ಸವದ ಸಂದರ್ಭದಲ್ಲಿ ವಿದ್ಯಾನಂದರು ಎಲ್ಲಾ ಮಾರ್ಗಗಳನ್ನು ಅನುಸರಿಸಿ ಸಾಕಷ್ಟು ಪ್ರಚಾರ ಗಿಟ್ಟಿಸಿಕೊಂಡರು. ಈ ಹೊತ್ತಿಗಾಗಲೇ ಇವರು ಹಿಮಾಲಯಕ್ಕೆ ಹೋಗಿ ತಪಸ್ಸು ಮಾಡಿ ಬಂದ ಬಡಾಮುನಿ ಎಂಬ ಡಂಬಾಚಾರದ ಪ್ರಚಾರ ಜನತೆಯಲ್ಲಿ ಸಾಕಷ್ಟು ಬೇರೂರಿತ್ತು. ಇದಕ್ಕೆ ವಿರುದ್ಧವಾಗಿ ಇವರ ಆಟಾಟೋಪವನ್ನು ಹತ್ತಿರದಿಂದ ಕಂಡವರು ಸಾಕಷ್ಟು ಜುಗುಪ್ಸೆ ಪಟ್ಟಿದ್ದರು. ಮಹಾವೀರ ತೀರ್ಥಂಕರರ ನಿರ್ವಾಣ ಮಹೋತ್ಸವ ಮುಗಿದ ನಾಲ್ಕೈದು ವರ್ಷಗಳಲ್ಲಿ ಅಂದರೆ 1981ರಲ್ಲಿ ಶ್ರವಣ ಬೆಳಗೊಳದ ಶ್ರೀ ಗೋಮಟೇಶ್ವರ ವಿಗ್ರಹ ಪ್ರತಿಷ್ಠಾಪನೆಯ ಸಹಸ್ರ ವರ್ಷಗಳ ಉತ್ಸವ ಒರುವುದರಲ್ಲಿತ್ತು.

ಶ್ರವಣಬೆಳಗೊಳದ ಭಟ್ಟಾರಕ ಸ್ವಾಮಿಗಳು 1971 ರಿಂದ ವಿದ್ಯಾನಂದ ರೊಂದಿಗೆ ನಿಕಟಸಂಪರ್ಕವಿಟ್ಟುಕೊಂಡು ಅವರ ಕೈಗೊಂಬೆಯಾಗಿದ್ದರು. 1975 ರಲ್ಲಿ ಮಹಾವೀರ ತೀರ್ಥಂಕರರ 250() ವರ್ಷದ ನಿರ್ವಾಣಮಹೋತ್ಸವ ಮುಗಿಯುತ್ತಿ ದ್ದಂತೆಯೇ ವಿದ್ಯಾನಂದರು ಗೋಮಟೇಶ್ವರನ ಸಹಸ್ರಾಬ್ಧಿ ಮಹೋತ್ಸವಕ್ಕೆ ತಾವೇ ನೇತಾರರಾಗಬೇಕೆಂಬುದನ್ನು ನಿರ್ಧರಿಸಿಕೊಂಡಿದ್ದರು. ಆ ಸಮಯದಲ್ಲಿ ತಮ್ಮ ದಳ್ಳಾಳಿಗಳ ನೆರವಿನಿಂದ ಸಾಧ್ಯವಾದಷ್ಟೂ ಹಣವನ್ನು ಅಲ್ಲಿ ಲೂಟಿ ಹೊಡೆಯ ಬೇಕೆಂಬುದೇ ಇವರ ನಿರ್ಧಾರಕ್ಕೆ ಪ್ರಧಾನ ಕಾರಣವಾಗಿತ್ತು. ಶ್ರವಣಬೆಳಗೊಳದ ಚಾರುಕೀರ್ತಿಗಳ ಸಖ್ಯ ಇದಕ್ಕೆ ಅತ್ಯುತ್ತಮವಾದ ಅವಕಾಶವನ್ನು ಕಲ್ಪಿಸಿತ್ತು.

1963 ರಲ್ಲಿ ಅಪಮಾನದಿಂದಾಗಿ ಕರ್ನಾಟಕವನ್ನು ತೊರೆದಿದ್ದ ವಿದ್ಯಾನಂದರು ಹದಿನೇಳುವರ್ಷಗಳ ನಂತರ ಮತ್ತೆ ಕರ್ನಾಟಕಕ್ಕೆ ಬರಲು ತೀರ್ಮಾನಿಸಿದರೂ ಕರ್ನಾಟಕ ದಲ್ಲಿ ತಮಗೆ ಮತ್ತೆ ವಿರೋಧ ವ್ಯಕ್ತಪಟ್ಟರೆ ಏನು ಗತಿ ಎಂಬ ಸಂದೇಹವೂ ಅವರ

ಗುಂಟಾಯಿತು. ಇದುವರೆಗೆ ಉತ್ತರಭಾರತದಲ್ಲಿ ಬಹುಜನರನ್ನು ಯಶಸ್ವಿಯಾಗಿ ವಂಚಿಸಿ ಅದನ್ನು ಅರಗಿಸಿಕೊಂಡಿದ್ದರು. ಈಗ ಕರ್ನಾಟಕಕ್ಕೆ ಬಂದು ಜನರನ್ನು ನಂಬಿಸುವುದು ಅಷ್ಟು ಸುಲಭವಾಗಿರಲಿಲ್ಲ ! ಇವರು ಈ ಹಿಂದೆ ಶೇಡಬಾಳ ಮತ್ತು ಹೊಂಬುಜಗಳಲ್ಲಿ ಮಾಡಿದ ಅನಾಚಾರಗಗಳನ್ನು ತಿಳಿದಿದ್ದ ಜನರು ಮಸ್ತಕಾಭಿಷೇಕದಲ್ಲಿ ಇವರ ನೇತೃತ್ವವನ್ನು ಒಪ್ಪದೇ ಇರುವು ಸಾಧ್ಯತೆಯಿತ್ತು. ಕರ್ನಾಟಕಕ್ಕೆ ಬಂದನಂತರ ಇಂಥ ಪ್ರತಿಭಟನೆಯೇನಾದರೂ ಉಂಟಾದರೆ ಅದು ವಿದ್ಯಾನಂದರು ಅದುವರೆಗೆ ಕಟ್ಟಿ ಕೊಂಡಿದ್ದ ಕೃತಕ ಪ್ರಸಿದ್ಧಿಯ ಮರಳಿನ ಸೌಧವನ್ನು ಉರುಳಿಸಿದಂತಾಗುತ್ತಿತ್ತು. ಇದನ್ನು ವಿದ್ಯಾನಂದರು ಯಾವ ಕಾಲಕ್ಕೂ ಬಯಸಿದವರಲ್ಲ. ಆದ್ದರಿಂದ ಕರ್ನಾಟಕ ದಲ್ಲಿ ಉಂಟಾಗಬಹುದಾದ ಈ ವಿರೋಧಗಳನ್ನೆಲ್ಲಾ ಅವು ಉದ್ಭವವಾಗುವುದಕ್ಕೆ ಮುಂಚೆಯೇ ಹುಟ್ಟಡಂತೆ ನೋಡಿಕೊಳ್ಳಬೇಕಾಗಿತ್ತು. ಇದಕ್ಕಾಗಿ ಅವರು ನೇರವಾದ ಸತ್ಯಮಾರ್ಗವನ್ನು ಆಯ್ಕೆಮಾಡಿಕೊಳ್ಳದೆ ಪುನಃ ತಮ್ಮ ಮಾಮೂಲಿ ಮಾರ್ಗಗಳಾದ ತಂತ್ರ ಕುತಂತ್ರ ಮತ್ತು ವ್ಯರ್ಥ ಕಸರತ್ತುಗಳ ಅಪಮಾರ್ಗಗಳನ್ನೇ ಆಯ್ಕೆಮಾಡಿ ಕೊಂಡರು.

ಗೊಮ್ಮಟನ ಸಹಸ್ರಾಬ್ಧಿ ಮಹೋತ್ಸವದಲ್ಲಿ ತಮ್ಮ ನೇತೃತ್ವಕ್ಕೆ ಯಾವ ಬಗೆಯ ಧಕ್ಕೆಯೂ ತಟ್ಟದಂತೆ ನೋಡಿಕೊಳ್ಳಲು ವಿದ್ಯಾನಂದರು ಅದಕ್ಕೆ ಪೂರ್ವಭಾವಿ ಯಾಗಿ ಎರಡು ಮುಖ್ಯ ಕುತಂತ್ರಗಳನ್ನು ಮಾಡಿದರು. ಅದರಲ್ಲಿ ಒಂದು ಕರ್ನಾಟಕದ ಬೇರೆಬೇರೆ ಭಾಗಗಳನ್ನು ಪ್ರತಿನಿಧಿಸುವ ಒಂದು ಜೈನಗೃಹಸ್ಥರ ತಂಡ ಬಂದು ತಮ್ಮನ್ನು ಶ್ರವಣಬೆಳಗೊಳಕ್ಕೆ ಆಹ್ವಾನಿಸುವ ಹಾಗೆ ಮಾಡಿದ್ದು. ವಿದ್ಯಾನಂದರು ಶ್ರವಣಬೆಳಗೊಳದ ಚಾರುಕೀರ್ತಿಗಳನ್ನು ಉಪಯೋಗಿಸಿಕೊಂಡು ಈ ಜನರು ದೆಹಲಿಗೆ ಬರುವ ಹಾಗೆ ಮಾಡಿದರು. ಈ ಒಳಸಂಚನ್ನು ತಿಳಿಯದ ಮುಗ್ಧ ಜನರು 18-11-1978 ರಂದು ದೆಹಲಿಗೆ ಹೋಗಿ ವಿದ್ಯಾನಂದರಿಗೆ ಆಹ್ವಾನ ನೀಡಿಬಂದರು. ಇನ್ನೊಂದು ಕುತಂತ್ರ ತಾ. 17-11-1978 ರಂದು ಏಲಾಚಾರ್ಯ ಪದವಿಯನ್ನು ಅಕ್ರಮವಾಗಿ ಪಡೆದದ್ದು.

1981 ರಲ್ಲಿ ಗೊಮ್ಮಟನ ಸಹಸ್ರಾಬ್ಧಿ ಮಹೋತ್ಸವದಲ್ಲಿ ಇವರು ಕೇವಲ ಉಪಾಧ್ಯಾಯ ಮುನಿಯಾಗಿದ್ದುಕೊಂಡು ಅಲ್ಲಿ ನೇತೃತ್ವವಹಿಸಲು ಇಷ್ಟಪಡಲಿಲ್ಲ. ಕಾರಣ ಆ ಸಮಯದಲ್ಲಿ ಶ್ರವಣಬೆಳಗೊಳದಲ್ಲಿ ದಿಗಂಬರ ಮುನಿಸಂಘಗಳೆಲ್ಲಾ ಬಿಡಾರ ಮಾಡಿರುತ್ತವೆ. ಹಾಗೆ ಸೇರಿರುವ ಮುನಿಗಳಲ್ಲಿ ಅನೇಕರು ಆಚಾರ್ಯರಿರುತ್ತಾರೆ. ಈ ಆಚಾರ್ಯ ಮುನಿಗಳ ಮುಂದೆ ಸಾಧನೆಯಲ್ಲಿ ಅವರಿಗಿಂತ ಹಿಂದೆಯಿರುವ ಉಪಧ್ಯಾಯ ಮುನಿ ಮಸ್ತಕಾಭಿಷೇಕದ ನೇತೃತ್ವವಹಿಸಿದರೆ ಅದು ಉಚಿತವಾಗುವುದಿಲ್ಲ. ಈ ಕ್ರಮವಿಪರ್ಯಯವನ್ನು ಕಂಡು ಅಲ್ಲಿರುವ ಮುನಿಸಂಘಗಳು ಸುಮ್ಮನಿರುತ್ತವೆಯೆ ?

ಮುನಿಗಳ ಹಿರಿತನವನ್ನು ಕಡೆಗಣಿಸಿದುದನ್ನು ಕಂಡು ಜನಗಳು ಸುಮ್ಮನಿರುತ್ತಾರೆಯೆ ? ಈ ಕಾರಣಗಳಿಂದಾಗಿ ವಿದ್ಯಾನಂದರು ನೇತೃತ್ವವಹಿಸುವುದು ತೊಡಕಿನ ಸಂಗತಿಯಾಗಿತ್ತು.

ಇನ್ನು ವಿದ್ಯಾನಂದರಿಗೆ ಉಳಿದ ಮಾರ್ಗವೆಂದರೆ 1981 ರ ಒಳಗಾಗಿ ಅವರು ಆಚಾರ್ಯರಾದರೆ ಈ ನೇತೃತ್ವವಹಿಸಿ ಹಣದೋಚಿ ಮೆರೆಯುವ ಆಸೆಯನ್ನು ಹೇಗಾದರೂ ಪೂರೈಸಿಕೊಳ್ಳಬಹುದಾಗಿತ್ತು. ಆದರೆ ವಿದ್ಯಾನಂದರಿಗೆ 'ಸಮಸ್ತ ಸಂಘದ ಸಾಕ್ಷಿ'ಯಾಗಿ ಆಚಾರ್ಯಪದವಿಯನ್ನು ಕೊಡುವ ಆಚಾರ್ಯರು ಯಾರು ? ದೇಶಭೂಷಣರ ಸಂಘವನ್ನು ಅವರ ಅನುಮತಿಯಿಲ್ಲದೆ ಬಿಟ್ಟುಬಂದುದರಿಂದ ಮತ್ತೆ ಅವರ ಹತ್ತಿರ ಹೋಗಿ ಆಚಾರ್ಯಪದವಿಯನ್ನು ಕೊಡಿ ಎಂದು ಕೇಳುವ ಮುಖ ವಿದ್ಯಾನಂದರಿಗಿರಲಿಲ್ಲ ! ಇವರ ದುಷ್ಕೃತ್ಯಗಳನ್ನೂ ಕೆಟ್ಟಚಾಳಿಗಳನ್ನೂ ತಿಳಿದ ಇತರ ಆಚಾರ್ಯರುಗಳು ಇವರಿಗೆ ಆಚಾರ್ಯ ಪದವಿಯನ್ನು ಕೊಡಲು ಯಾರೂ ಮುಂದಾಗಲಿಲ್ಲ ! ಆದರೆ ವಿದ್ಯಾನಂದರು ಮಹಾಮಸ್ತಕಾಭಿಷೇಕಕ್ಕೆ ಮುಂಚಿತವಾಗಿ ಆಚಾರ್ಯರಾಗುವ ತಮ್ಮ ದುರಾಸೆಯನ್ನು ಬಿಡಲೂ ಸಿದ್ಧರಿರಲಿಲ್ಲ.

ಇನ್ನು ಆಚಾರ್ಯರಾಗಲು ಅವರಿಗೆ ಉಳಿದ ಏಕೈಕ ಮಾರ್ಗವೆಂದರೆ ತಮ್ಮನ್ನು ತಾವೇ ಆಚಾರ್ಯರೆಂದು ಅಕ್ರಮವಾಗಿ ಘೋಷಿಸಿಕೊಳ್ಳುವುದು. ಆದರೆ ಇಂತಹ ಘೋಷಣೆಯಿಂದ ವಿದ್ಯಾನಂದರು ಅದುವರೆಗೂ ಆಡಿದ ಆಧ್ಯಾತ್ಮಿಕ ನಾಟಕ ಬಯಲಾಗಲು ಅವಕಾಶವಾಗುತ್ತಿತ್ತು. ಇವರ ಮೇಲೆ ನಂಬಿಕೆಯಿಟ್ಟಿದ್ದ ಜನರೂ ಇವರಿಂದ ದೂರಾಗಲು ಅವಕಾಶವಾಗಬಹುದಿತ್ತು. ಇವೆಲ್ಲಾ ತೊಡಕುಗಳಿಂದ ತಪ್ಪಿಸಿಕೊಳ್ಳಲು ವಿದ್ಯಾನಂದರು ಕಡೆಗೆ ಶಾಸ್ತ್ರಜ್ಞಾನ ಪೂರ್ಣ ತಿಳಿಯದ ಭಟ್ಟಾರಕಸ್ವಾಮಿಗಳೊಬ್ಬರನ್ನು ಮತ್ತು ದೆಹಲಿಯ ಆಗರ್ಭ ಶ್ರೀಮಂತರೊಬ್ಬರನ್ನು ಉಪಯೋಗಿಸಿಕೊಂಡು ಅವರ ಮುಖಂಡತ್ವದಲ್ಲಿ ಒಂದು ಸಭೆಸೇರಿಸಿ ಅಲ್ಲಿ ಆಚಾರ್ಯ ಪದವಿಯನ್ನು, ಅದರಲ್ಲೂ 'ಏಲ' ಎಂಬ ವಿಶೇಷಣ ಸೇರಿದ 'ಏಲಾಚಾರ್ಯ' ಪದವಿಯನ್ನು ಪಡೆಯುವ ಹುಚ್ಚು ಸಾಹಸಕ್ಕೆ ಕೈಹಾಕಿದರು.

ಏಲಾಚಾರ್ಯ ಎಂಬುದು ಸಮಯಸಾರ, ಪ್ರವಚನಸಾರ, ಪಂಚಾಸ್ತಿಕಾಯ ಮುಂತಾದ ಸುಪ್ರಸಿದ್ಧ ಜೈನಶಾಸ್ತ್ರಗ್ರಂಥಗಳನ್ನು ಬರೆದ ಕುಂದಕುಂದಾಚಾರ್ಯರಿಗೆ ಇದ್ದ ಇನ್ನೊಂದು ಹೆಸರಾಗಿತ್ತು. ಇವರು ಸು. ಕ್ರಿ.ಶ. ಒಂದನೆಯ ಶತಮಾನದಲ್ಲಿ ಬದುಕಿದ್ದರು. ಆ ಕುಂದಕುಂದಾಚಾರ್ಯರಿಗೆ ತಾನು ಸಮ ಎಂಬರ್ಥದಲ್ಲಿ 'ಏಲಾಚಾರ್ಯ' ಎಂದು ವಿದ್ಯಾನಂದರು ಕರೆಸಿಕೊಳ್ಳಲು ಇಷ್ಟಪಟ್ಟರು. ಇದರಲ್ಲಿ ಆಚಾರ್ಯ ಪದವಿಯು ಸಿಕ್ಕುವುದರ ಜೊತೆಗೆ ಕುಂದಕುಂದರಿಗೆ ಸಮಾನರಾದ ಆಚಾರ್ಯರು ಎಂದೂ ಸಹ ಆಗುತ್ತಿತ್ತು. ಈ ರೀತಿ ಒಂದೇ ಏಟಿಗೆ ಎರಡು ಹಕ್ಕಿಗಳನ್ನು ಉರುಳಿ

ಸಂಪ ದುರಾಶೆಯ ಕೌಶಲವನ್ನು ವಿದ್ಯಾನಂದರು ಇಲ್ಲಿ ಕಾರ್ಯರೂಪಕ್ಕೆ ತರಲು ಹೊರಟರು.

ವಿದ್ಯಾನಂದರು 1976 ರಲ್ಲಿ ದೆಹಲಿಯಲ್ಲಿಯೇ ಚಾತುರ್ಮಾಸ ಮಾಡಿದ್ದರು. 1977 ರಲ್ಲಿ ದೆಹಲಿಯ ಸಮೀಪದ ಬಡೌತ್‌ನಲ್ಲಿ ಚಾತುರ್ಮಾಸ ಮಾಡಿದ್ದರು. 1978 ರ ಚಾತುರ್ಮಾಸಕ್ಕೆ ಪುನಃ ದೆಹಲಿಯನ್ನೇ ಆರಿಸಿಕೊಂಡರು. ದೆಹಲಿಯ ಈ ಪುನರಾಯ್ಕೆ 'ಆಚಾರ್ಯ'ಪದವಿಯನ್ನು ಪಡೆಯಬೇಕೆಂಬ ತಮ್ಮ ಹಿತೂರಿಗೆ ಅನುಗುಣವಾಗಿತ್ತು. 1978 ರ ನವೆಂಬರ್ ನಲ್ಲಿ ದೆಹಲಿ ಬಿಟ್ಟು ಶ್ರವಣಬೆಳಗೊಳದ ಕಡೆ ಹೊರಡುವಾಗ ಏಲಾಚಾರ್ಯನೆನಿಸಿಕೊಂಡು ಸಾಕಷ್ಟು ಪ್ರಚಾರ ಮಾಡಿಸಿಕೊಂಡು ಹೊರಡುವ ವ್ಯವಸ್ಥೆಯನ್ನು ವಿದ್ಯಾನಂದರು ಮಾಡಿದರು. ಇದಕ್ಕಾಗಿ ತಾ. 17, 18, 19 ನವೆಂಬರ್ 1978–ಈ ಮೂರುದಿನಗಳ ಕಾಲ ವಿಶೇಷಕಾರ್ಯಕ್ರಮಗಳ ವಿರ್ಪಾಟಾಯಿತು. ತಾ 17–11–78 ರಂದು ಎಂಟುಗಂಟೆಗೆ ಏಲಾಚಾರ್ಯ ಪದವಿ ಪಡೆಯುವ 'ಏಲಾಚಾರ್ಯ ಪದಪ್ರತಿಷ್ಠಾ' ಎಂಬ ಕಾರ್ಯಕ್ರಮ, ತಾ. 18–11–78 ರಂದು ಕರ್ನಾಟಕದಿಂದ ಬಂದ ಗೃಹಸ್ಥರ ತಂಡ[1] ವಿದ್ಯಾನಂದರನ್ನು ಕರ್ನಾಟಕಕ್ಕೆ ಬನ್ನಿ ಎಂದು ಆಹ್ವಾನಿಸುವ ಕಾರ್ಯಕ್ರಮ, ತಾ. 19–11–78 ರಂದು ದಕ್ಷಿಣದ ಕಡೆಗೆ ಬೀಳ್ಕೊಡುವ ಕಾರ್ಯಕ್ರಮಗಳು ಗೊತ್ತಾದುವು. ಈ ಕಾರ್ಯಕ್ರಮಗಳನ್ನೆಲ್ಲಾ ದೆಹಲಿಯ ಕೆಲವು ಶ್ರಾವಕರು ಏರ್ಪಡಿಸಿದರು ಎಂಬುದು ಹೊರನೋಟಕ್ಕೆ ಕಾಣುವ ಸತ್ಯವಾದರೂ, ಇವು ವ್ಯವಸ್ಥೆಯಾಗಲು ವಿದ್ಯಾನಂದರ ಸೂತ್ರದಾರತ್ವದಲ್ಲಿ ಅವರ ದಳ್ಳಾಳಿಗಳು ನಡೆಸಿದ ಒಳಸಂಚು ವಾಸ್ತವವಾದ ಸತ್ಯವಾಗಿತ್ತು.

ತಾ. 17–11–78 ರಂದು ವಿದ್ಯಾನಂದರು ಆಚಾರ್ಯಪದವಿಯನ್ನು ಸ್ವೀಕರಿಸುವ ಕಾರ್ಯಕ್ರಮದ ವಿವರಗಳನ್ನು ಆ ದಿನ ಬರುವವರೆಗೂ ಅದನ್ನು ಅಸ್ಪಷ್ಟವಾಗಿಯೂ ಗೋಪ್ಯವಾಗಿಯೂ ಇಟ್ಟಿದ್ದರು. ಇದಕ್ಕೆ ಹಲವಾರು ದಿನಗಳ ಮುಂಚೆ ಗಣ್ಯರಿಗೆ ಹಾಗೂ ಅನೇಕ ಭಟ್ಟಾರಕಸ್ವಾಮಿಗಳಿಗೆ ಕಳುಹಿಸಿಕೊಟ್ಟಿದ್ದ ಆಹ್ವಾನಪತ್ರದಲ್ಲಿ ತಾ. 17–11–1978 ರಂದು "ಏಲಾಚಾರ್ಯ ಪದಪ್ರತಿಷ್ಠಾ" ಎಂಬ ಒಕ್ಕಣೆ ಮಾತ್ರವಿದೆ. ವಿದ್ಯಾನಂದರಿಗೆ ಏಲಾಚಾರ್ಯ ಪದವಿಯನ್ನು ಕೊಡುತ್ತಾರೆಂಬ ವಿಷಯವಾಗಲೀ ಅಥವಾ ವಿದ್ಯಾನಂದರಿಗೆ ಏಲಾಚಾರ್ಯ ಎಂಬ ಪದವಿಯನ್ನು ಇಂಥ ಆಚಾರ್ಯರು ಅನುಗ್ರಹಿಸುತ್ತಾರೆಂಬ ವಿಷಯವಾಗಲೀ ಅಲ್ಲಿ ಇಲ್ಲ ! 'ಏಲಾಚಾರ್ಯ ಪದಪ್ರತಿಷ್ಠಾ' ಎಂದರೆ ಏಲಾಚಾರ್ಯರ ಪಾದಗಳನ್ನು ಪ್ರತಿಷ್ಠಾಪನೆ ಮಾಡುವುದು ಎಂದು ಅರ್ಥವಾಗುತ್ತದೆ. (ಅಂದರೆ ಶಿಲೆಯಲ್ಲಿ ಕೆತ್ತಿರುವ ಏಲಾಚಾರ್ಯ ಕುಂದ

---

1. ಈ ತಂಡ ವಿದ್ಯಾನಂದರು ಮಾಡಿದ ಕುತಂತ್ರಕ್ಕೆ ಒಳಗಾಗಿ ಆ ದಿವಸ ದೆಹಲಿಗೆ ಬಂದಿತ್ತು.

ಕುಂದರ ಪಾದಗಳನ್ನು ಪ್ರತಿಷ್ಠಾಪನೆ ಮಾಡುವುದು ಎಂದೂ ಆಗಬಹುದು.) ಇದಲ್ಲದೆ ಏಲಾಚಾರ್ಯ ಪದವಿಯನ್ನು ಪ್ರತಿಷ್ಠಾಪನೆ ಮಾಡುವುದು ಎಂದೂ ಸಹ ಅರ್ಥವಾಗುತ್ತದೆ. ಈ ರೀತಿ ಆಹ್ವಾನ ಪತ್ರದಲ್ಲಿ ಕಾರ್ಯಕ್ರಮದ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಸದೆ ದ್ವಂದ್ವಾರ್ಥವುಳ್ಳ 'ಏಲಾಚಾರ್ಯಪದಪ್ರತಿಷ್ಠಾ' ಎಂಬ ಪದವನ್ನು ಉಪಯೋಗಿಸಿ ಸಂಬಂಧಪಟ್ಟವರು ಜನರನ್ನು ನಯವಾಗಿ ವಂಚಿಸಲು ಅವಕಾಶಮಾಡಿಕೊಂಡಿದ್ದರು.

## ಧರ್ಮಕ್ಕೆ ದ್ರೋಹ ಮಾಡಿ 'ಏಲಾಚಾರ್ಯ' ಪದವಿ ಪಡೆದದ್ದು

ತಾ. 17-11-1978 ರಂದು ದೆಹಲಿಯಲ್ಲಿ ವಿದ್ಯಾನಂದರ ಕುತಂತ್ರಕ್ಕೆ ಅನುಗುಣವಾಗಿ ಬೆಳಿಗ್ಗೆ 8 ಗಂಟೆಗೆ ಸಮಾರಂಭ ಆರಂಭವಾಯಿತು. ಎಲ್ಲರೂ ಕುತೂಹಲದಿಂದ ಕಾಯುತ್ತಿದ್ದ 'ಏಲಾಚಾರ್ಯ ಪದಪ್ರತಿಷ್ಠಾ' ಕಾರ್ಯಕ್ರಮವೂ ಮೊದಲಾಯಿತು. ದೆಹಲಿಯ ಆಗರ್ಭ ಶ್ರೀಮಂತರಾದ ಸುಪ್ರಸಿದ್ಧ ವಾಣಿಜ್ಯೋದ್ಯಮಿ ಪಹಡಿ ಧೀರಜ್‌ವಾಲಾ ಸುರೇಶ್‌ಚಂದ್‌ಜೈನ್‌ರವರು 'ಏಲಾಚಾರ್ಯ ಪದವಿಯನ್ನು ಸ್ವೀಕರಿಸಬೇಕೆಂದು' ವಿದ್ಯಾನಂದರಿಗೆ ಹೇಳಿ ಅವರ ಮುಂದೆ ಎರಡು ತೆಂಗಿನಕಾಯಿಗಳನ್ನು ಇಟ್ಟು ನಮಸ್ಕರಿಸಿದರು. ಇವರಾದ ಮೇಲೆ ಕೊಲ್ಲಾಪುರದ ಜೈನಮಠದ ಸ್ವಾಮಿಗಳಾದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳು ವಿದ್ಯಾನಂದರ ಮುಂದೆ ಎರಡು ತೆಂಗಿನ ಕಾಯಿಗಳನ್ನು ಇಟ್ಟು ಅಡ್ಡಬಿದ್ದು ಏಲಾಚಾರ್ಯ ಪದವಿಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು.

ತಮ್ಮ ಕುತಂತ್ರ ಇಷ್ಟು ಸುಲಭವಾಗಿ ನೆರವೇರುತ್ತಿರುವುದನ್ನು ಕಂಡು ಧೂರ್ತ ಸಂತೋಷದಲ್ಲಿ ಮುಳುಗಿದ್ದ ವಿದ್ಯಾನಂದರು 'ಏಲಾಚಾರ್ಯ' ಪದವಿಯನ್ನು ಸ್ವೀಕರಿಸಿದ ಸೂಚನೆಯ ಸಂಕೇತವಾಗಿ ಇಬ್ಬರಿಗೂ ತಮ್ಮ ಕರಾಳಹಸ್ತದಲ್ಲಿದ್ದ ಪಿಂಛದಿಂದ ಆಶೀರ್ವಾದ ಮಾಡಿದರು. ವಿದ್ಯಾನಂದರ ದಳ್ಳಾಳಿಗಳು 'ಏಲಾಚಾರ್ಯ ಮಹಾರಾಜ ಕೀ ಜೈ' ಎಂದು ಘೋಷಣೆ ಹಾಕಿದರು. ಇದೇ ಸಂದರ್ಭದಲ್ಲಿ 'ಓಂ ಣಮೋ ಏಲಾಯಿರಿಯಾಣಂ' ಎಂಬ ಒಂದು ಪ್ರಚಾರ ಬರಹ ಅಲ್ಲಿಯ ಆವರಣದಲ್ಲಿ ಕಾಣಿಸಿಕೊಂಡಿತು. ಪಂಚನಮಸ್ಕಾರ ಮಂತ್ರವನ್ನು ತಿದ್ದುವ ಈ ಪ್ರಯತ್ನವನ್ನು ಕಂಡು ಅಲ್ಲಿದ್ದ ಕೆಲವರು ಆಶ್ಚರ್ಯಪಟ್ಟರು. ಕೆಲವರು ಅಸಮಾಧಾನಗೊಂಡರು.

ಈ ಕಾರ್ಯಕ್ರಮದಲ್ಲಿ 'ಏಲಾಚಾರ್ಯ' ಪದವಿಯನ್ನು ನೀವು ಸ್ವೀಕರಿಸಬೇಕೆಂದು ವಿದ್ಯಾನಂದರನ್ನು ಸಭೆಯಲ್ಲಿ ಕೇಳಿಕೊಂಡ ಸುರೇಶ್‌ಚಂದ್ ಜೈನ್‌ರವರಿಗೆ 'ಏಲಾಚಾರ್ಯ' ಎಂಬ ಪದವಿಯ ಬಗೆಗೆ ಏನೂ ಗೊತ್ತಿರಲಿಲ್ಲ. ಗೃಹಸ್ಥರಾದ ತಾವು ಮುನಿಗಳಿಗೆ ಆಚಾರ್ಯ ಪದವಿ ಕೊಡಬಹುದೆ ಎಂಬ ಆಲೋಚನೆಯೂ ಅವರಿಗೆ ಹೊಳೆಯಲಿಲ್ಲ. ವಿದ್ಯಾನಂದರನ್ನು ಈ ರೀತಿ ಪ್ರಾರ್ಥಿಸಿಕೊಳ್ಳಿ ಎಂದು ಇವರನ್ನು

ಒಪ್ಪಿಸಿದವರು 'ಏಲಾಚಾರ್ಯ' ಪದವಿಯ ಬಗೆಗೆ ಇವರಿಗೆ ನಿಜವಾದ ವಿವರವಾದ ಮಾಹಿತಿಯನ್ನು ಒದಗಿಸಿರಲಿಲ್ಲ! ಈ ಸಮಾರಂಭದ ಹಿಂದೆ ಕುತಂತ್ರದ ಒಳಸಂಚೊಂದಿದೆ ಎಂಬುದರ ಸುಳಿವೂ ಸಹ ಇವರಿಗೆ ಅಂದು ಸಿಕ್ಕಲಿಲ್ಲ. ಈ ಬಗ್ಗೆ ಸುರೇಶ್‌ಚಂದ್ ಜೈನ್‌ರವರು ಸಂಪೂರ್ಣವಾಗಿ ಅಜ್ಞರಾಗಿರುವ ಹಾಗೆ ವಿದ್ಯಾನಂದರ ದಳ್ಳಾಳಿಗಳು ಮೊದಲಿನಿಂದಲೂ ಎಚ್ಚರವಹಿಸಿದ್ದರು. ಹೆಚ್ಚು ಕಡಿಮೆ ಇದೇ ರೀತಿಯ ಸ್ಥಿತಿಯಲ್ಲಿ ಕೊಲ್ಲಾಪುರದ ಲಕ್ಷ್ಮಿಸೇನ ಭಟ್ಟಾರಕರೂ ಇದ್ದರು. ಹೀಗೆ ಇವರಿಬ್ಬರನ್ನೂ ವಿದ್ಯಾನಂದರು ತಮ್ಮ ದಳ್ಳಾಳಿಗಳ ನೆರವಿನಿಂದ ಬಹಳ ಸುಲಭವಾಗಿ ವಂಚಿಸಿ ಧರ್ಮದ್ರೋಹ ಮಾಡಿ ಅವರಿಂದ 'ಏಲಾಚಾರ್ಯ' ಪದವಿ ಪಡೆದು ಅದನ್ನು ತಮ್ಮ ಮುಂದಿನ ಜೀವನದ ಪ್ರಚಾರಸಾಧನವನ್ನಾಗಿ ಉಪಯೋಗಿಸಿಕೊಳ್ಳಲು ಸಿದ್ಧರಾದರು. ಮುನಿಗಳಿಗಿಂತ ಸಾಧನೆಯಲ್ಲಿ ಕೆಳಗಿರುವ ಭಟ್ಟಾರಕರಿಂದ ಮತ್ತು ಗೃಹಸ್ಥರಿಂದ ಆಚಾರ್ಯ ಪದವಿ ಪಡೆಯುವುದು ಸರಿಯೆ ? ಧರ್ಮವೆ ? ಶಾಸ್ತ್ರಸಮ್ಮತವೇ ? ಎಂಬ ಆಲೋಚನೆ ಆ ಸಂದರ್ಭದಲ್ಲಿ ಬಹುಶಃ ಯಾರಿಗೂ ಬಂದಂತೆ ಕಾಣಲಿಲ್ಲ!

ವಿದ್ಯಾನಂದರಿಗೆ 'ಆಚಾರ್ಯ' ಪದವಿ ನೀಡುವುದನ್ನು ಆಹ್ವಾನ ಪತ್ರದಲ್ಲಿ ಸ್ಪಷ್ಟವಾಗಿ ಮುಂಚಿತವಾಗಿಯೇ ತಿಳಿಸಿ ಬಿಟ್ಟಿದ್ದರೆ ಮೋಲಿನ ವಂಚನೆಯ ಪ್ರಕರಣಕ್ಕೆ ಬಹುಶಃ ಅವಕಾಶವಾಗುತ್ತಿರಲಿಲ್ಲ. ಏಕೆಂದರೆ ಇದು ಜನರಲ್ಲಿ ವಿದ್ವಾಂಸರಲ್ಲಿ ಚರ್ಚೆಗೆ-ವಿಚಾರ ವಿಮರ್ಶೆಗೆ ಅವಕಾಶವಾಗಿ 'ಏಲಾಚಾರ್ಯ ಪದವಿ ಸ್ವೀಕಾರ ನಾಟಕ'ದ ವಿರುದ್ಧ ಜನಾಭಿಪ್ರಾಯವೊಂದು ಸಂಘಟಿತವಾಗಬಹುದಿತ್ತು. ಇದನ್ನೆಲ್ಲಾ ವಿದ್ಯಾನಂದರು ಮೊದಲೇ ನಿರೀಕ್ಷಿಸಿ ಅಂಥ ಯಾವ ವಿರೋಧವೂ ಇಲ್ಲದ ಸ್ಥಿತಿಯಲ್ಲಿ ಆಚಾರ್ಯ ಪದವಿ ಪಡೆಯುವುದಕ್ಕಾಗಿಯೇ 'ಏಲಾಚಾರ್ಯ ಪದಪ್ರತಿಷ್ಠಾ' ಎಂಬ ದ್ವಂದ್ವಾರ್ಥವುಳ್ಳ ಅಸ್ಪಷ್ಟ ಸೂಚನೆಯನ್ನು ಕೊಡುವ ಹಾಗೆ ಮಾಡಿ ಪದವಿ ಪಡೆಯುವ ನಾಟಕವಾಡಿ ಅದರಲ್ಲಿ ಯಶಸ್ವಿಯಾದರು.

ವಿದ್ಯಾನಂದರು ದೆಹಲಿಯನ್ನು ಬಿಟ್ಟು ದಕ್ಷಿಣದ ಕಡೆಗೆ ಹೊರಡಲು ಇನ್ನು ಎರಡು ದಿನಗಳಿವೆ ಎನ್ನುವಾಗ ಈ 'ಏಲಾಚಾರ್ಯ' ಪದವಿ ಪಡೆದುದಕ್ಕೂ ಒಂದು ಕಾರಣವಿದೆ. 1978ರಲ್ಲಿ ದೆಹಲಿಯಲ್ಲಿ ಚಾತುರ್ಮಾಸ ಆರಂಭವಾದ ಸಮಯದಲ್ಲಿಯೇ ಈ ಪದವಿಯನ್ನು ಪಡೆದಿದ್ದರೆ ಆ ಸಮಯದಲ್ಲಿ ದೆಹಲಿಯಲ್ಲಿಯೇ ಒಂದು ಸ್ಪಷ್ಟವಾದ ವಿರೋಧ ರೂಪುಗೊಳ್ಳಲು ಅವಕಾಶವಾಗುತ್ತಿತ್ತು. ಇದು ಶ್ರವಣಬೆಳಗೊಳದ ಯಾತ್ರೆಗೆ ತೊಡಕನ್ನೊಡ್ಡಬಹುದಾಗಿತ್ತು. ಇದರಿಂದಾಗಿಯೇ ವಿದ್ಯಾನಂದರು ಅಕ್ರಮವಾಗಿ ಆಚಾರ್ಯ ಪದವಿ ಪಡೆಯುವ ಸಮಾರಂಭವನ್ನು ದೆಹಲಿ ಬಿಟ್ಟು ಹೊರಡುವ ಸಂದರ್ಭದಲ್ಲಿ ಇಟ್ಟುಕೊಂಡರು! ಇವರ ಕುತಂತ್ರಕ್ಕೆ ಒಳಗಾದ ಕರ್ನಾಟಕದ ಗೃಹಸ್ಥರ ತಂಡ ತಾ. 18-11-78ರಂದು ದೆಹಲಿಗೆ ಬಂದು ಇವರನ್ನು ಕರ್ನಾಟಕಕ್ಕೆ

ಆಹ್ವಾನಿಸಿತು. ತಾ 19-11-78ರಂದು ಇವರು ದೆಹಲಿಯನ್ನು ಬಿಟ್ಟು ಹೊರಟರು. 'ಹೊಳೆ ದಾಟಿದ ಮೇಲೆ ಅಂಬಿಗ ಮಿಂಡ' ಎಂಬಂತೆ ಅನಂತರ ದೆಹಲಿಯ ಜನರಿಗೆ ಈ ವಂಚನೆಯ ಪ್ರಕರಣವೇನಾದರೂ ಗಮನಕ್ಕೆ ಬಂದರೆ ಬಂದುಕೊಳ್ಳಲಿ ನಾನು ಹೇಗಿದ್ದರೂ ದೆಹಲಿಯಲ್ಲಿರುವುದಿಲ್ಲವಲ್ಲ ಎಂಬುದು ವಿದ್ಯಾನಂದರ ಆಗಿನ ಧೋರಣೆಯಾಗಿತ್ತು.

## ಪಂಚನಮಸ್ಕಾರ ಮಂತ್ರ ತಿದ್ದುವ ಯತ್ನ

ವಿದ್ಯಾನಂದರು ದೆಹಲಿ ಬಿಡುವುದಕ್ಕೆ ಮುಂಚೆಯೇ ಇವರ ಕಪಟಾಚಾರಣೆಗಳ ವಿರುದ್ಧ ಪ್ರತಿಭಟನೆಯ ಅಲೆಯೊಂದು ದೆಹಲಿಯಲ್ಲಿ ರೂಪುಗೊಂಡಿತು. ವಿದ್ಯಾನಂದರು ಏಲಾಚಾರ್ಯ ಎನ್ನಿಸಿಕೊಂಡ ದಿವಸ ಪವಿತ್ರವಾದ ಪಂಚನಮಸ್ಕಾರ ಮಂತ್ರದಲ್ಲಿ ಒಂದು ಮಂತ್ರವಾದ 'ಣಮೋ ಆಯಿರಿಯಾಣಂ' ಎಂಬುದನ್ನು ವಿರೂಪಗೊಳಿಸಿ ಬರೆದ 'ಓಂ ಣಮೋ ಏಲಾಯಿರಿಯಾಣಂ' (ಏಲಾಚಾರ್ಯರಿಗೆ ನಮಸ್ಕಾರ) ಎಂಬ ಬರೆಹವನ್ನು ಜನರು ವಿರೋಧಿಸಿದರು. ಈ ಪ್ರದರ್ಶನದ ಬರೆಹವನ್ನು ವಿದ್ಯಾನಂದರೇ ಬರೆಸಿದ್ದರೆಂಬುದರಲ್ಲಿ ಸಂಶಯವಿರಲಿಲ್ಲ. ಈ ಪ್ರಯತ್ನ ಪಂಚನಮಸ್ಕಾರ ಮಂತ್ರವನ್ನು ತಿದ್ದುವ ಉದ್ದೇಶದಿಂದ ಕೂಡಿತ್ತು. ವಿದ್ಯಾನಂದರ ಇಂತಹ ಕಸರತ್ತುಗಳಿಗೆ ಅವಕಾಶಕೊಟ್ಟರೆ ಮುಂದೆ ಅದು 'ಓಂ ಣಮೋ ವಿದ್ಯಾನಂದ ಏಲಾಯಿರಿಯಾಣಂ' ಎಂದಾಗಬಹುದಿತ್ತು! ಇದು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ಣಮೋ ವಿದ್ಯಾನಂದ ಅರಹಂತಾಣಂ' ಎಂದೂ ಸಹ ಆಗಬಹುದಾಗಿತ್ತು. ಆದರೆ ಪ್ರಾಜ್ಞರಾದ ದೆಹಲಿಯ ಕೆಲವು ಶ್ರಾವಕರು ವಿದ್ಯಾನಂದರು ಬರೆಸಿದ್ದ 'ಓಂ ಣಮೋ ಏಲಾಯಿರಿಯಾಣಂ' ಬರೆಹವನ್ನು ಪ್ರಬಲವಾಗಿ ಪ್ರತಿಭಟಿಸಿದರು. ಈ ಪ್ರತಿಭಟನೆಯ ಪ್ರಖರತೆಯನ್ನರಿತ ವಿದ್ಯಾನಂದರು ಮುಂದೆ ಅಂತಹ ಪ್ರಯತ್ನಗಳನ್ನು ಮುಂದುವರೆಸಲಿಲ್ಲ.

## ಸುರೇಶ್‌ಚಂದ್‌ಜೈನರ ಪಶ್ಚಾತ್ತಾಪ

ವಿದ್ಯಾನಂದರ ಕುತಂತ್ರಗಳಿಗೆ ಒಳಗಾಗಿ ಅವರನ್ನು 'ಏಲಾಚಾರ್ಯ' ಪದವಿ ಸ್ವೀಕರಿಸಬೇಕೆಂದು ಕೇಳಿಕೊಂಡ ಪಹಡಿ ಧೀರಜ್‌ವಾಲಾ ಸುರೇಶ್‌ಚಂದ್‌ಜೈನರು ಆಚಾರ್ಯರತ್ನ ದೇಶಭೂಷಣ ಮುನಿಗಳ ಪರಮಭಕ್ತರು (ಇದನ್ನು ವಿದ್ಯಾನಂದರು ತಿಳಿದೇ ಅವರನ್ನು ತಮ್ಮ ಪದವಿ ಪಡೆವ ಕಾರ್ಯಕ್ಕೆ ಉಪಯೋಗಿಸಿಕೊಂಡಿದ್ದು) ಇವರು ವಿದ್ಯಾನಂದರಿಗೆ ಪದವಿಯನ್ನು ನೀಡಿದ ಕೆಲವು ದಿನಗಳ ಮೇಲೆ ತಾವು ಮಾಡಿದ್ದು ತೀರ ಅನುಚಿತವಾದ ಕಾರ್ಯವಾಯಿತೆಂದು ಇವರಿಗೆ ಅರ್ಥವಾಯಿತು. ಇದಕ್ಕಾಗಿ ಬಹಳವಾಗಿ ವ್ಯಾಕುಲಪಟ್ಟರು. ಈ ಪದವಿಯನ್ನು ತಾವು ಕೊಟ್ಟಿದ್ದರಿಂದ ವಿದ್ಯಾನಂದರನ್ನು ದೇಶಭೂಷಣರಿಗಿಂತ ದೊಡ್ಡವರೆಂದು ಮಾನ್ಯಮಾಡಿದ ಹಾಗಾಯಿತಲ್ಲ! ಎಂಬ ತೀವ್ರವಾದ ಪಶ್ಚಾತ್ತಾಪ ಇವರಿಗುಂಟಾಯಿತು. ಇದನ್ನು ಅನೇಕರ ಮುಂದೆ ಇವರು ತೋಡಿಕೊಂಡರು.

## ಗುರು ಯಾರು ? ಶಿಷ್ಯ ಯಾರು ?

ವಿದ್ಯಾನಂದರಿಗೆ ಧರ್ಮವಿರುದ್ಧವಾಗಿ ಏಲಾಚಾರ್ಯ ಪದವಿಯನ್ನು ಕೊಡು ವಲ್ಲಿ ಪಾತ್ರವಹಿಸಿದ ಇನ್ನೊಬ್ಬ ವ್ಯಕ್ತಿಗಳಾದ ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳಿಗೆ ತಾವು ವಿದ್ಯಾನಂದರು ಮತ್ತು ಅವರ ದಳ್ಳಾಳಿಂದ ಮೋಸ ಹೋಗಿರು ವುದು ಈಗಲಾದರೂ ಅರ್ಥವಾಗಿದೆಯೋ ಇಲ್ಲವೆ ? ಎಂಬುದು ತಿಳಿಯದು. ಲಕ್ಷ್ಮೀ ಸೇನಸ್ವಾಮಿಗಳು ತಾವು ಕ್ಷುಲ್ಲಕದೀಕ್ಷೆ ಪಡೆದ ಸನ್ಯಾಸಿಗಳಾಗಿದ್ದುಕೊಂಡು ದಿಗಂಬರಾ ಚಾರ್ಯರು ಮಾತ್ರ ಕೊಡುವಂತಹ ಆಚಾರ್ಯ ಪದವಿಯನ್ನು ವಿದ್ಯಾನಂದರಿಗೆ ಕೊಟ್ಟಿರುವುದು ಎಂತಹ ದೊಡ್ಡ ಧರ್ಮದ್ರೋಹದ ಕಾರ್ಯವಾಗಿದೆ ಎಂಬುದನ್ನು ಅರ್ಥಮಾಡಿಕೊಂಡಂತೆ ಕಾಣುತ್ತಿಲ್ಲ. ಇನ್ನಾದರೂ ಅವರು ಆತ್ಮಶೋಧನೆ ಮಾಡಿ ಕೊಳ್ಳುವಂತಾಗಬೇಕು. ತಾವು ವಿದ್ಯಾನಂದರಿಂದ ವಂಚನೆಗೊಳಗಾಗಿರುವುದನ್ನು ಜನರಿಗೆ ತಿಳಿಸುವಂತಾಗಬೇಕು.

ಆತ್ಮಶೋಧನೆ ಸಾಧ್ಯವಿಲ್ಲ ಎಂದು ಲಕ್ಷ್ಮೀಸೇನಸ್ವಾಮಿಗಳು ಭಾವಿಸಬಹುದಾದರೆ, ಇವರು ವಿದ್ಯಾನಂದರಿಗೆ ಏಲಾಚಾರ್ಯ ಪದವಿ ಕೊಟ್ಟ ಕೂಡಲೇ ವಿದ್ಯಾನಂದರು ಶ್ರೀ ಲಕ್ಷ್ಮೀಸೇನಭಟ್ಟಾರಕ ಸ್ವಾಮಿಗಳ ಶಿಷ್ಯರಾದಂತಾಯಿತು ! ಲಕ್ಷ್ಮೀಸೇನರು ಗುರು ವಿನ ಸ್ಥಾನದಲ್ಲಿ ನಿಂತರು. ತಾ. 17-11-78ರಿಂದ ಈ ಅವಸ್ಥೆಗಳು ಪ್ರಾರಂಭ ವಾದವು. ಲಕ್ಷ್ಮೀಸೇನರು ತಾವು ವಿದ್ಯಾನಂದರಿಗೆ ಗುರುಸ್ಥಾನದಲ್ಲಿ ನಿಂತಮೇಲೆ ಅನೇಕ ಊರುಗಳಲ್ಲಿ ಅನೇಕ ಸಂದರ್ಭಗಳಲ್ಲಿ ಶಿಷ್ಯರಾದ ವಿದ್ಯಾನಂದರನ್ನು ಕಾಣಲು ಹೋಗಿ ದ್ದಾರೆ. ಈ ಸಂದರ್ಭಗಳಲ್ಲೆಲ್ಲಾ ಇವರು ವಿದ್ಯಾನಂದರಿಗೆ ವಂದಿಸಿದ್ದಾರೆ ! ಹೀಗೆ ತಮ್ಮ ಶಿಷ್ಯರಿಗೆ ತಾವೇ ವಂದಿಸುವುದು ಸರಿಯೇ ? ಇದನ್ನಾದರೂ ಲಕ್ಷ್ಮೀಸೇನರು ವಿವರಿಸು ವಂತಾಗಬೇಕು. ಇಲ್ಲವೆ ಯಾರು ಯಾರಿಗೆ ಬೇಕಾದರೂ ದೀಕ್ಷೆ ಕೊಡಬಹುದು ಮತ್ತು ಸಾಧಕಾವಸ್ಥೆಯ ಪ್ರಗತಿಯನ್ನು ಗುರುತಿಸುವ ಪದವಿಗಳನ್ನು ಕೊಡಬಹುದು ! ಇದು ಕಲಿಯುಗ, ಎಲ್ಲರಿಗೂ ಸರ್ವತಂತ್ರ ಸ್ವತಂತ್ರವಿರುವ ಕಾಲ. ಸ್ವೇಚ್ಛಾಚಾರವೇ ಪರಮಧರ್ಮ. ತೀರ್ಥಂಕರರ ವಾಣಿ, ಶಾಸ್ತ್ರ, ಆಗಮಗಳೇನಿದ್ದರೂ ಅದು ಕೇವಲ ಪುಸ್ತಕದ ಬದನೆಕಾಯಿ ಮಾತ್ರ ಎಂಬುದು ತಮ್ಮ ಅಭಿಪ್ರಾಯವೇ ? ಎಂಬುದನ್ನಾ ನ್ನಾದರೂ ಕೊಲ್ಲಾಪುರದ ಲಕ್ಷ್ಮೀಸೇನ ಸ್ವಾಮಿಗಳು ಸ್ಪಷ್ಟಪಡಿಸುವಂತಾಗಬೇಕು. ಆಗ ಗುರು ಯಾರು ? ಶಿಷ್ಯ ಯಾರು ? ಎಂಬುದು ಜನರಿಗೆ ತಿಳಿದಂತಾಗುತ್ತದೆ.

### ಅಧ್ಯಾಯ : ಇಪ್ಪತ್ತೊಂದು

# ಉತ್ತರ ಭಾರತದಲ್ಲಿ 'ಏಲಾಚಾರ್ಯ' ಪದವಿಗೆ ಪ್ರಕಟವಾದ ವಿರೋಧ

ವಿದ್ಯಾನಂದರು ಧರ್ಮವಿರುದ್ಧವಾಗಿ ಏಲಾಚಾರ್ಯ ಪದವಿ ಪಡೆದು ದೆಹಲಿಯ ಜನರನ್ನು ವಂಚಿಸಿದ ಎರಡು ದಿನಗಳಲ್ಲಿಯೇ ಅಂದರೆ ತಾ 19-11-1978ರಂದು ದೆಹಲಿ ಬಿಟ್ಟು ಶ್ರವಣಬೆಳಗೊಳದ ಕಡೆ ಹೊರಟರು. 1981ರ ಶ್ರವಣಬೆಳಗೊಳದ ಗೋಮಟೇಶ್ವರನ ಸಹಸ್ರಾಬ್ದಿ ಮಹೋತ್ಸವದಲ್ಲಿ ನೇತೃತ್ವ ವಹಿಸಿ ಅಲ್ಲಿ ಸಿಕ್ಕಷ್ಟು ಹಣವನ್ನು ನಯವಾಗಿ ಲೂಟಿ ಹೊಡೆಯುವುದೇ ಇವರ ಪರಮಗುರಿಯಾಗಿತ್ತು.

ಈ ಸಂದರ್ಭದಲ್ಲಿ ಜನರಿಗೆ ಧರ್ಮದ ವಿಚಾರದಲ್ಲಿ ಮಾರ್ಗದರ್ಶನ ಮಾಡುವ ವಿದ್ವಾಂಸರು ಮತ್ತು ಜೈನಧರ್ಮದ ನಿಯತಕಾಲಿಕ ಪತ್ರಿಕೆಗಳು ಸುಮ್ಮನೆ ಕೂರಲಿಲ್ಲ. ವಿದ್ಯಾನಂದರು ಧರ್ಮದ್ರೋಹ ಮಾಡಿ ಅಕ್ರಮವಾಗಿ ಏಲಾಚಾರ್ಯ ಪದವಿ ಪಡೆದು ದಕ್ಕೆ ಪ್ರತಿಕ್ರಿಯೆಗಳು ಪ್ರಾರಂಭವಾದುವು. ಉತ್ತರ ಪ್ರದೇಶದ ಮಥುರಾದಿಂದ ಹೊರಡುವ 'ಭಾರತವರ್ಷೀಯ ದಿಗಂಬರ ಜೈನ ಸಂಘ'ದ ಸಾಪ್ತಾಹಿಕ ಪತ್ರಿಕೆಯಾದ 'ಜೈನಸಂದೇಶ' ಬಡೌತ್‌ನಿಂದ ಹೊರಡುವ 'ಅಖಿಲ ಭಾರತ ವರ್ಷೀಯ ದಿಗಂಬರ ಜೈನ ಶಾಸ್ತ್ರಿ ಪರಿಷತ್‌ನ ಪತ್ರಿಕೆಯಾದ 'ಧರ್ಮ–ರಕ್ಷಾ' ಮುಂತಾದ ಕೆಲವು ಜೈನ ಧರ್ಮದ ನಿಯತಕಾಲಿಕ ಪತ್ರಿಕೆಗಳು ವಿದ್ಯಾನಂದರು ಏಲಾಚಾರ್ಯ ಪದವಿ ಪಡೆಯುವುದರಲ್ಲಿ ನಡೆದಿರುವ ಅಕ್ರಮವನ್ನೂ ವಂಚನೆಯನ್ನೂ ಬಯಲು ಮಾಡಿದುವು.

'ಜೈನಸಂದೇಶ' ಪತ್ರಿಕೆಯಂತೂ ಈ ವಿಚಾರದಲ್ಲಿ ನಡೆದಿರುವ ಶಾಸ್ತ್ರವಂಚನೆಯನ್ನು ವಿದ್ವತ್ಪೂರ್ಣ ಲೇಖನಗಳ ಮೂಲಕ ಜನತೆಯ ಗಮನಕ್ಕೆ ತಂದಿತು. ಕಾಶಿಯ ಸ್ಯಾದ್ವಾದ ಮಹಾವಿದ್ಯಾಲಯದ 'ಅಧಿಷ್ಠಾತ' ರಾದ ಸಿದ್ಧಾಂತಾಚಾರ್ಯ ಪಂಡಿತ ಕೈಲಾಸಚಂದ್ರ ಶಾಸ್ತ್ರಿಯವರು ಈ ಪತ್ರಿಕೆಯ ಪ್ರಕಾಶಕ ಸಂಪಾದಕರು. ಜೈನ ಸಿದ್ಧಾಂತದಲ್ಲಿ ಇವರಿಗೆ ತಲಸ್ಪರ್ಶಿಯಾದ ಪಾಂಡಿತ್ಯವಿದೆ. ವಿಚಾರಶೀಲ ಸಂಪಾದಕೀಯ ಲೇಖನಗಳನ್ನು ಬರೆಯುವುದರಲ್ಲಿ ಇವರು ಅಗ್ರಗಣ್ಯರು.

'ಜೈನಸಂದೇಶ' ಪತ್ರಿಕೆಯಲ್ಲಿ 'ಏಲಾಚಾರ್ಯ' ಪದವಿ ಪಡೆದುದರ ವಿರುದ್ಧ ಬಂದ ಲೇಖನಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಜೈನಸಂದೇಶದ ತಾ. 26-4-1979ರ ಸಂಚಿಕೆಯಲ್ಲಿ ಪ್ರಕಟವಾದ ಕೈಲಾಸ ಚಂದ್ರಶಾಸ್ತ್ರಿಯವರ 'ಏಲಾಚಾರ್ಯ ಪದ ಕಲ್ಪನೆ' ಎಂಬ ಸಂಪಾದಕೀಯ ಲೇಖನದ ಸಂಗ್ರಹ ಹೀಗಿದೆ :

## ಏಲಾಚಾರ್ಯ ಪದ ಕಲ್ಪನೆ

ಜೈನಸಂದೇಶದ ತಾ. 4–1–1979ನೆಯ ಸಂಚಿಕೆಯಲ್ಲಿ "ಏಲಾಚಾರ್ಯ ಎಂಬ ಯಾವುದಾದರೂ ಒಂದು ಪದವಿ ಇದೆಯೇನು ? ಎಂಬ ಶಿರೋನಾಮೆಯಲ್ಲಿ ಸಂಪಾದಕೀಯ ವಿಭಾಗದಲ್ಲಿ ಒಂದು ವಿಚಾರ ಪ್ರಕಟವಾಗಿತ್ತು. ಇದಕ್ಕೆ ಪ್ರತಿಕ್ರಿಯೆ ಯಾಗಿ ತಾ. 15–3–1979ರ 'ವೀರ' ಪತ್ರಿಕೆಯಲ್ಲಿ ಕ್ಷುಲ್ಲಕ ಚಂದ್ರಭೂಷಣರು "ಏಲಾಚಾರ್ಯ ಎಂಬುದೊಂದು ಹೆಸರಲ್ಲ, ಅದೊಂದು ಪದವಿಯಾಗಿದೆ" ಎಂಬ ಲೇಖನ ಪ್ರಕಟಿಸಿದರು. ಇದರಲ್ಲಿ ಅವರು "ಏಲಾಚಾರ್ಯ ಎಂಬುವ ಈ ಪದವಿ ಯನ್ನು ಮನೋಜ್ಞವಾದ ಅನೇಕ ಗುಣಗಳ ವೈಶಿಷ್ಟ್ಯದ ಕಾರಣದಿಂದಾಗಿ ಕುಂದ ಕುಂದರಿಗೂ ಹಾಗೂ ವೀರಸೇನರ ಗುರುಗಳಿಗೂ ಕೊಡಲಾಗಿತ್ತು. ಈ ಪದವಿಯು ಖ್ಯಾತಿ ಎಷ್ಟೊಂದು ಬೆಳೆಯಿತೆಂದರೆ ಕಾಲಾನಂತರದಲ್ಲಿ ಅದೊಂದು ಹೆಸರೇ ಎಂದೂ ತಿಳಿಯಲಾಯಿತು. ವೀರಸೇನರ ಗುರುವಿನ ಏಲಾಚಾರ್ಯ ಪದವಿಯಂತೂ ಹೆಸರಿನ ರೂಪದಲ್ಲಿಯೇ ಬಳಕೆಯಾಗತೊಡಗಿತು. ಆ ಹೆಸರಿನ ಆಧಾರದ ಮೇಲೆ ಅವರ ಜನ್ಮ ಸ್ಥಾನದ ಸಮೀಪದಲ್ಲಿರುವ ಪರ್ವತದ ಹೆಸರು ಕೂಡ ಅಪಭ್ರಂಶರೂಪದಲ್ಲಿ! ಏಲೌರಾ ಎಂದಾಯಿತು. ಇದು ಇಂದು ವಿಶ್ವದ ಪ್ರಮುಖ ತೀರ್ಥಧಾಮವೂ ಕೂಡ ಆಗಿದೆ" ಎಂದು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.

ಕ್ಷುಲ್ಲಕ ಚಂದ್ರಭೂಷಣರ ಈ ಲೇಖನವನ್ನು ಓದಿ ನಮಗೆ ನಿರಾಶೆಯಾಯಿತು. ಏಕೆಂದರೆ ಕ್ಷುಲ್ಲಕರು ತಮ್ಮ ಅಭಿಪ್ರಾಯಗಳನ್ನು ವಿವರಿಸುವಾಗ ಕೇವಲ ಕಲ್ಪನೆಯ ಆಧಾರವನ್ನು ಮಾತ್ರ ತೆಗೆದುಕೊಂಡಿದ್ದಾರೆ. ಒಂದಾದರೂ ಆಧಾರಯುತವಾದ ಪ್ರಮಾಣವನ್ನು ಹಾಜರುಪಡಿಸಿಲ್ಲ! ಆಚಾರ್ಯ ಕುಂದಕುಂದರಿಗೆ ಮತ್ತು ವೀರಸೇನ ಸ್ವಾಮಿಗಳ ಗುರುಗಳಿಗೆ ಅವರ ವಿಶಿಷ್ಟ ಗುಣಗಳ ಕಾರಣದಿಂದಾಗಿ ಈ ಪದವಿಯನ್ನು ಕೊಡಲಾಗಿತ್ತು ಎಂಬುದರ ಉಲ್ಲೇಖ ಈ ಮೊದಲು ಎಲ್ಲಿ ಕಂಡು ಬರುತ್ತದೆ ? ಎಂಬುದನ್ನು ಕ್ಷುಲ್ಲಕರು ತಮ್ಮ ಲೇಖನದಲ್ಲಿ ತಿಳಿಸಿಲ್ಲ. ತಮ್ಮ ಕಲ್ಪನಾ ಸಾಮರ್ಥ್ಯ ದಿಂದ ಮಾತ್ರ ಅದನ್ನು ಬರೆದಿದ್ದಾರೆ.

ಆಚಾರ್ಯ ಇಂದ್ರನಂದಿಯು ತನ್ನ 'ಶ್ರುತಾವತಾರ' ಗ್ರಂಥದಲ್ಲಿ (ಪದ್ಯ 177) ವೀರಸೇನನಗುರು ಏಲಾಚಾರ್ಯನು ಚಿತ್ರಕೂಟದವನು ಎಂದು ತಿಳಿಸಿದ್ದಾನೆ. ಚಿತ್ರ ಕೂಟಪುರವು ಚಿತ್ತೌಡದ ಪ್ರಾಚೀನ ಹೆಸರಾಗಿದೆ. ಅದು ರಾಜಸ್ಥಾನದಲ್ಲಿದೆ. ಕ್ಷುಲ್ಲಕ

ಚಂದ್ರಭೂಷಣರು ಎಲೌರಾ ಮತ್ತು ಎಲಾಚಾರ್ಯಗಳಲ್ಲಿ ಸಾಮ್ಯತೆ ಕಂಡು ತಮ್ಮ ಕಲ್ಪನೆಯಿಂದ ಎಲೌರಾವನ್ನು ಎಲಾಚಾರ್ಯರ ಜನ್ಮಭೂಮಿ ಮತ್ತು ತಪೋಭೂಮಿಯನ್ನಾಗಿ ಮಾಡಿದ್ದಾರೆ. ಎಲೌರಾ ಮಹಾರಾಷ್ಟ್ರದಲ್ಲಿದೆ. ಈ ರೀತಿ ಕೇವಲ ಕಲ್ಪನೆಯ ಆಧಾರದಿಂದ ಯಾವುದೇ ತಥ್ಯವನ್ನು ಸ್ಥಿರಮಾಡಬಾರದು. ಇದು ಅಜ್ಞಾನಿ ಸಮಾಜದಲ್ಲಿ ಮೆಚ್ಚುಗೆ ಗಳಿಸಿದರೂ ಜ್ಞಾನಿಗಳಲ್ಲಿ ನಗೆಗೀಡಾಗುತ್ತದೆ.

ಈ ಎಲಾಚಾರ್ಯ ಪದದ ಕಡೆಗೆ ಬರೋಣ. ದಿಗಂಬರ ಜೈನ ವಾಙ್ಮಯದಲ್ಲಿ ಮುನಿ ಆಚಾರದ ಬಗೆಗೆ ಎರಡೇ ಪ್ರಾಚೀನ ಗ್ರಂಥಗಳು ಉಪಲಬ್ಧವಾಗಿವೆ. ಅವೇ 'ಭಗವತಿ ಆರಾಧನಾ' ಮತ್ತು 'ಮೂಲಾಚಾರ'. ಇವುಗಳಲ್ಲಿ ಅಥವಾ ಇವುಗಳ ಟೀಕಾಗ್ರಂಥಗಳಲ್ಲಿ ಎಲ್ಲಿಯಾಗಲೀ ಎಲಾಚಾರ್ಯ ಪದದ ವಿಚಾರ ಬರುವುದಿಲ್ಲ. ಕ್ಷುಲ್ಲಕ ಚಂದ್ರಭೂಷಣರು ತಮ್ಮ ಲೇಖನದ ಕೊನೆಯಲ್ಲಿ ಒಂದೇಒಂದು ಗಾಥೆಯನ್ನು ಉದಾಹರಿಸಿದ್ದಾರೆ. ಇದು ಯಾವ ಗ್ರಂಥದ್ದು ಎಂಬುದನ್ನು ತಿಳಿಸಿಲ್ಲ. ಈ ಗಾಥೆಯ ಕೊನೆಯ ಸಾಲಿನಲ್ಲಿ ಎಲಾಚಾರ್ಯ ಪದ ಬರುತ್ತದೆ. ಅದಕ್ಕನುಸಾರವಾಗಿ ಎಲಾಚಾರ್ಯ ಎಂದರೆ ಗಂಭೀರ, ಶೂರ, ಧರ್ಮ ಪ್ರಭಾವನಾಶೀಲ ದೂರದರ್ಶಿ ಮುಂತಾದ ಅರ್ಥಗಳುಂಟಾಗುತ್ತವೆ. ನಾವು ಈ ಗಾಥೆಯನ್ನು ಗ್ರಂಥಗಳಲ್ಲಿ ಶೋಧಿಸಿ ಹುಡುಕಿದಾಗ ಮೂಲಾಚಾರದ ಸಮಾಚಾರಾಧಿಕಾರದಲ್ಲಿ ಈ ಗಾಥೆ 159 ಹಾಗೂ 184ನೇ ಗಾಥೆಗೆ ಹೊಂದುತ್ತದೆ. ಆದರೆ ಎರಡು ಗಾಥೆಗಳಲ್ಲಿಯೂ ಕಡೆಯ ಸಾಲು ಭಿನ್ನವಾಗುತ್ತದೆ. ವಿವಾದವಿರುವುದು ಇಲ್ಲಿಯೇ. 184ನೇ ಗಾಥೆಯ ಕಡೆಯ ಸಾಲು "ಅಜ್ಜಾಣಂ ಗಣಧರೋ ಹೋದಿ" ಎಂದು ಮುಗಿಯುತ್ತದೆ.

ಕ್ಷುಲ್ಲಕರು ತಮ್ಮ ಹೇಳಿಕೆಯ ಸಮರ್ಥನೆಗೋಸ್ಕರ ಈ ಗಾಥೆಯ ಕಡೆಯ ಸಾಲನ್ನು ಬದಲಿ ಮಾಡಿರುವರೋ ? ಏನು ? ಇದನ್ನು ಕ್ಷುಲ್ಲಕರೇ ಪ್ರಮಾಣ ಪೂರ್ವಕವಾಗಿ ಸ್ಪಷ್ಟಪಡಿಸಲಿ.

ಮೂಲಾಚಾರ ಗ್ರಂಥದಲ್ಲಿ ಯಾವ ಪ್ರಸಂಗದಿಂದ ಈ ಗಾಥೆ ಬಂದಿದೆಯೋ ಅದರಲ್ಲಿ 'ಆಚಾರ್ಯ, ಉಪಾಧ್ಯಾಯ, ಪ್ರವರ್ತಕ, ಸ್ಥಾವರ, ಮತ್ತು ಗಣಧರ— ಈ ಐದು ಸಂಗತಿಗಳು ಎಲ್ಲಿ ಇಲ್ಲವೋ ಅಲ್ಲಿ ಸಾಧುವಿಗೆ ವಾಸದ ವ್ಯವಸ್ಥೆ ಮಾಡಬಾರದೆಂದು ಹೇಳಿದೆ. ಇದೇ ಪ್ರಸಂಗದಲ್ಲಿ ಆಚಾರ್ಯರ ಗುಣವರ್ಣನೆಯಲ್ಲಿ ಉಕ್ತ ಗಾಥೆ ಬರುತ್ತದೆ. ಅಲ್ಲಿ 'ಎಲಾಚಾರ್ಯ'ರ ಯಾವ ಪ್ರಸ್ತಾಪವೂ ಇಲ್ಲ.

ಆಚಾರ್ಯರ ಭೇದಗಳನ್ನು ಹೇಳುವಾಗ ಎಲಾಚಾರ್ಯ ವಿಶಿಷ್ಟಪದವಾಚಿಯಾಗಿದೆ ಎಂಬ ಕ್ಷುಲ್ಲಕರ ಹೇಳಿಕೆ ಕೂಡ ನಿರಾಧಾರವಾಗಿದೆ, ಜೈನೇಂದ್ರಕೋಶದಲ್ಲಿ ಆಚಾರ್ಯರ ಭೇದಗಳಲ್ಲಿ ಬಾಲಾಚಾರ್ಯ ಹಾಗು ಎಲಾಚಾರ್ಯ ಇವು ಎರಡು

ಭೇದಗಳೆಂದು ಹೇಳಿದೆ. ಆದರೆ ವಾಸ್ತವವಾಗಿ ಇವೆರಡೂ ಒಂದೇ ಆಗಿವೆ. ಅಪರಾಜಿತ ಸೂರಿಯು ಭ. ಆ. ಗಾಥೆ 275 (278)ರ ಟೀಕೆಯಲ್ಲಿ ಅನುದಿಶದ ಅರ್ಥವನ್ನು ಬಾಲಾಚಾರ್ಯ ಎಂದು ಮಾಡಿದ್ದಾರೆ, ಮತ್ತು ಆಶಾಧರರು ಏಲಾಚಾರ್ಯ ಎಂದು ಮಾಡಿದ್ದಾರೆ. ಬಾಲ ಮತ್ತು ಏಲ ಇವೆರಡೂ ಶಬ್ದಗಳು ಏಕಾರ್ಥಕವಾಗಿರಬೇಕು.

ಸಂಘದ ಆಚಾರ್ಯರು ಯಾವಾಗ ಸಮಾಧಿ ಮರಣದ ಸಲುವಾಗಿ ಪರಸಂಘಕ್ಕೆ ಹೋಗುವಾಗ ತಮ್ಮ ಭಾರವನ್ನು ತಮ್ಮ ಯಾವ ಯೋಗ್ಯ ಶಿಷ್ಯರ ಮೇಲೆ ಒಪ್ಪಿಸುತ್ತಾರೆಯೋ ಅವನಿಗೆ ಬಾಲಾಚಾರ್ಯ ಅಥವಾ ಏಲಾಚಾರ್ಯ ಎಂದು ಹೇಳುತ್ತಾರೆ. ಇವುಗಳ ಅರ್ಥ ಲಘು ಆಚಾರ್ಯ, ಚಿಕ್ಕ ಆಚಾರ್ಯ ಎಂದಾಗುತ್ತದೆ. ನಂತರ ಯಾವಾಗ ಆತನನ್ನು ಆಚಾರ್ಯ ಪದವಿಯಲ್ಲಿ ಪ್ರತಿಷ್ಠಿತನನ್ನಾಗಿ ಮಾಡುವರೋ ಆಗ ಅವನು ಬಾಲಾಚಾರ್ಯ ಅಥವಾ ಏಲಾಚಾರ್ಯ ಎಂದಾಗದೆ ಆಚಾರ್ಯ ಎಂದಾಗುತ್ತಾನೆ. ಒಂದುವೇಳೆ ಏಲಾಚಾರ್ಯ ಎಂಬ ಪದವೊಂದು ಇದ್ದದ್ದೇ ಆದರೆ ಅದು ಸರ್ವೋಚ್ಚ ಪದವೂ ಅಲ್ಲ ಮತ್ತು ಚಿರಸ್ಥಾಯಿಯಾದ ಪದವೂ ಅಲ್ಲ. ಎಂದು ನಾವು ಇದರಿಂದಾಗಿ ಬರೆದಿದ್ದೆವು.

ಮುನಿ ವಿದ್ಯಾನಂದರು ಬಾಲಾಚಾರ್ಯ ಅಥವಾ ಏಲಾಚಾರ್ಯರಾಗಲು ಇಂತಹ ಯಾವ ಪರಿಸ್ಥಿತಿ ಪ್ರಾಪ್ತವಾಗಿಬಿಟ್ಟಿತ್ತು, ಅದರ ಅವಶ್ಯಕತೆಯಿತ್ತು, ಎಂದು ನಾವು ಕ್ಷುಲ್ಲಕ ಚಂದ್ರಭೂಷಣರನ್ನು ಕೇಳಬಹುದೆ ? ವಿದ್ಯಾನಂದರದಂತೂ ಯಾವ ಸಂಘವೂ ಇಲ್ಲ. ಅವರು ಏಕವಿಹಾರಿಯಾಗಿದ್ದಾರೆ. ಅವರ ಗುರುಗಳಾದ ದೇಶಭೂಷಣರು ವರ್ತಮಾನ ಕಾಲದಲ್ಲಿ ಇದ್ದಾರೆ. ಇಂತಹ ಸಂದರ್ಭದಲ್ಲಿ ಈ ಏಲಾಚಾರ್ಯ ಪದವಿ ಆಗಮಕ್ಕೆ ಹೋದುತ್ತದೆಯೇ ? ಆಚಾರ್ಯ ಮತ್ತು ಅದರ ನಡುವಿನ ಆಚಾರ್ಯಪದವಿ ಕೊಡುವ ಏಕಮಾತ್ರ ಅಧಿಕಾರ ಗುರುಗಳಿಗಿದೆ. ಗುರುಗಳು ನಿವೃತ್ತರಾದ ಮೇಲೆಯೇ ಅವರ ಆಚಾರ್ಯಪದವಿ ಗುರುಗಳ ಮೂಲಕ ಕೊಡಲಾಗುತ್ತದೆ. ಈಗ ಈ ಆಚಾರ್ಯಪದವಿ ಜನಗಳ ಕೈಯಲ್ಲಿ ಬಂದುಬಿಟ್ಟಿದೆ. ಇದರಿಂದಾಗಿ ಅಪರಿಚಿತ ಸಮಾಜ ತನ್ನದೇ ಆದ ಶಾಸ್ತ್ರವಿಧಿಯಿಂದ ಯಾರನ್ನು ಬೇಕಾದರೂ ಆಚಾರ್ಯನನ್ನಾಗಿ ಮಾಡುತ್ತದೆ. ಇದರಿಂದಾಗಿ ದಿಗಂಬರ ಜೈನ ತ್ಯಾಗಮಾರ್ಗವೂ ಕೂಡ ವಿಶೃಂಖಲಿತವಾಗುತ್ತಾ ಹೋಗುತ್ತದೆ.

— ಏಲಾಚಾರ್ಯ ಪದದ ಬಗೆಗೆ ಮೇಲಿನಂತೆ ವಿದ್ವತ್ಪೂರ್ಣವಾದ ವಿಚಾರಾರ್ಹವಾದ ಸಂಪಾದಕೀಯ ಲೇಖನ ಬರೆದ ಕೈಲಾಸ ಚಂದ್ರಶಾಸ್ತ್ರಿಗಳು ಅದೇ ಸಂಪಾದಕೀಯದಲ್ಲಿ ಮುಂದುವರೆದು ಇಡೀ ಒಂದು ಸಮಾಜಕ್ಕೆ ಒಬ್ಬನೇ ಆಚಾರ್ಯನಿರುವ 'ಒಂದು ಒಳ್ಳೆಯ ಪರಂಪರೆ'ಯನ್ನು ಓದುಗರ ಗಮನಕ್ಕೆ ತರುತ್ತಾರೆ. ಅದರ ಸಂಗ್ರಹ ಹೀಗಿದೆ;

## ಒಂದು ಒಳ್ಳೆಯ ಪರಂಪರೆ

'ಶ್ರಮಣ ಸಂಘದಲ್ಲಿ ಆಚಾರ್ಯನು ಸ್ವತಃ ತನ್ನ ಉತ್ತರಾಧಿಕಾರಿಯನ್ನು ಆರಿಸುತ್ತಾನೆ. ಇದೇ ಆಗಮ ಪರಂಪರೆಯಾಗಿದೆ. ಇದರಿಂದಲೇ ಆಚಾರ್ಯ ಪರಂಪರೆ ಪ್ರತಿಷ್ಠಿತವಾಗುತ್ತದೆ. ಮತ್ತು ಆಚಾರ್ಯ ಪದವಿಯ ಮೇಲೆ ಕಣ್ಣಿಡುವ ಸಾಧುಗಳಿಂದ ಪರ್ಗ ದೂಷಿತವಾಗುವುದಿಲ್ಲ' ಎಂದು ನಾವು ಒಂದು ಸಂಪಾದಕೀಯದಲ್ಲಿ ಬರೆದಿದ್ದೆವು.

ಶ್ವೇತಾಂಬರ ಸಂಪ್ರದಾಯದ ತೇರಾಪಂಥದಲ್ಲಿ ಈಗಲೂ ಕೂಡ ಒಬ್ಬನೇ ಆಚಾರ್ಯನ ಪರಂಪರೆಯಿದೆ. ಬಹಳ ವರ್ಷಗಳ ಹಿಂದೆ ಒಂದುಸಾರಿ ಹಾಂಸಿಯಲ್ಲಿ ನಾವು ಆಚಾರ್ಯ ತುಲಸಿಯವರೊಂದಿಗೆ ಸಂಭಾಷಿಸುವ ಸಂದರ್ಭ ಒದಗಿತ್ತು. ಆ ಸಮಯದಲ್ಲಿ ಜೈನಧರ್ಮ ಪುಸ್ತಕದಲ್ಲಿ ತೇರಾಪಂಥದ ವಿಚಾರವಾಗಿ ಬರೆದಿರುವುದನ್ನು ನಾವು ಚರ್ಚಿಸಿದೆವು. ತೇರಾಪಂಥದಲ್ಲಿ ಒಬ್ಬನೇ ಆಚಾರ್ಯನ ಶಾಸನದಲ್ಲಿ ಸಮಸ್ತ ಸಾಧು, ಸಾಧ್ವಿಯರು ಸಂಚರಿಸುತ್ತಾರೆ. ಎಂಬುದು ಆಗ ನಮಗೆ ತಿಳಿದು ಬಂತು. ಆ ಕಾಲದಲ್ಲಿ ಅವರ ಸಂಖ್ಯೆ ನಮ್ಮ ನೆನಪಿನ ಆಧಾರದ ಮೇಲೆ ಬಹುಶಃ 600 ಇದ್ದಿತು ಇದು ನಮಗೆ ಬಹಳ ಆಶ್ಚರ್ಯಕರವಾಗಿ ಕಂಡುಬಂತು. ಆಚಾರ್ಯ ತುಲಸಿಯವರು ತಮ್ಮ ಜೀವಿತ ಕಾಲದಲ್ಲಿಯೇ ಮುನಿ ನಥಮಲರನ್ನು ತಮ್ಮ ಉತ್ತರಾಧಿಕಾರಿಯೆಂದು ಘೋಷಣೆ ಮಾಡಿದ್ದಾರೆಂದು ಇತ್ತೀಚೆಗೆ ನಮಗೆ ತಿಳಿಯಿತು. ಮುನಿ ನಥಮಲರು 'ಯುವಾಚಾರ್ಯ ಮಹಾಪ್ರಜ್ಞ' ಎಂಬ ಪದವಿಯಿಂದ ಸನ್ಮಾನಿತರಾಗಿದ್ದಾರೆ. ಇದೊಂದು ಒಳ್ಳೆಯ ಪರಂಪರೆಯಾಗಿದೆ. ಮುನಿ ನಥಮಲರು ನಮಗೆ ತುಂಬಾ ಸುಪರಿಚಿತರಾಗಿದ್ದಾರೆ. ಅವರ ವಿದ್ವತ್ತು ನಿರ್ವಿವಾದವಾಗಿದೆ. ಅವರ ಚಿಂತನ ಮತ್ತು ಲೇಖನ ಶೈಲಿ ಉತ್ತಮವಾಗಿದೆ. ಅವರ ಅನೇಕ ಕೃತಿಗಳು ಬೆಳಕಿಗೆ ಬಂದಿವೆ. ತಮ್ಮ ಆಚಾರವನ್ನು ಕೂಡ ಅವರು ನಿಷ್ಠೆಯಿಂದ ಪಾಲನೆ ಮಾಡುತ್ತಾರೆ. ಅವರು ಯೋಗ್ಯ ಗುರುವಿನ ಯೋಗ್ಯ ಶಿಷ್ಯರೆಂದು ಪ್ರಮಾಣಿತರಾಗುವರೆಂದು ನಮಗೆ ಪೂರ್ಣ ಭರವಸೆಯಿದೆ. ಆಚಾರ್ಯ ತುಲಸಿಯವರು ತೇರಾಪಂಥ ಸಂಪ್ರದಾಯಕ್ಕೆ ಕೊಟ್ಟಿರುವ ಕೊಡುಗೆಯನ್ನು ಎಲ್ಲರೂ ತಿಳಿದಿದ್ದಾರೆ. ಜೈನಶಬ್ದ ಕಿವಿಗೆ ಬಿದ್ದ ಕೂಡಲೇ ಇವನು ತುಲಸೀವಾಣಿಯ ಸಂಪ್ರದಾಯದ ವ್ಯಕ್ತಿ ಎನ್ನುವವರೆಗೆ ಜನರು ತುಲಸಿಯವರನ್ನು ಅರಿತುಕೊಂಡಿದ್ದಾರೆ.

ಮುನಿವಿದ್ಯಾನಂದರು ದಿಗಂಬರ ಸಂಪ್ರದಾಯದಲ್ಲಿ, ಸಂಪ್ರದಾಯದ ನಡುವೆ ತಮ್ಮದೇ ಆದ ಯಾವ ಒಂದು ಸೌಮ್ಯ ವಾತಾವರಣವನ್ನು ಮಾಡಿದ್ದಾರೋ ಅದರಲ್ಲಿ 'ಯುವಾಚಾರ್ಯ ಮಹಾಪ್ರಾಜ್ಞ'ದ ವೃದ್ಧಿಯನ್ನು ಮಾಡುವರೆಂಬ ಪೂರ್ಣ ಆಶಯ ನಮಗಿದೆ! ತಮ್ಮ ಸಂಪ್ರದಾಯದ ಹಿತಸಾಧನೆ ಮಾಡುತ್ತಾ ಎಲ್ಲರನ್ನೂ

ಸಂಪ್ರದಾಯಗಳಿಂದ ಸೌಮ್ಯಸಂಬಂಧ ಇಟ್ಟುಕೊಳ್ಳಲಾಗುತ್ತದೆ. ಕೊನೆಗೆ ನಾವೆಲ್ಲರೂ ಭಗವಾನ್ ಮಹಾವೀರನ ಸಂತಾನವಲ್ಲವೇ! ಇದೇನು ಕಡಿಮೆ ಆಳವಾಗಿರುವ ಸಂಬಂಧವೇ ? 'ಯಾಪಾಚಾರ್ಯ ಮಹಾಪ್ರಾಜ್ಞ'ಕ್ಕೆ ಪ್ರತಿಯಾಗಿ ನಾವುನಮ್ಮ ಆದರ ಭಾವವನ್ನು ಪ್ರಕಟ ಮಾಡುತ್ತೇವೆ.

—ಕೈಲಾಶ ಚಂದ್ರಶಾಸ್ತ್ರಿ

ಜೈನಸಂದೇಶದ ತಾ. 26-4-79ರ ಸಂಚಿಕೆಯಲ್ಲಿಯೇ "ಏಲಾಚಾರ್ಯ ಪದದ ಸಂಬಂಧದಲ್ಲಿ" ಎಂಬ ಇನ್ನೊಂದು ಲೇಖನ ಪ್ರಕಟವಾಗಿದೆ. ಕೇಕಡಿ (ಅಜಮೇರ್) ಯ ಕೆ. ಪಂ. ರತನಲಾಲಜಿ ಕಟಾರಿಯ ಎಂಬ ಪ್ರಬುದ್ಧ ಚಿಂತಕ ವಿದ್ವಾಂಸರು ಏಲಾಚಾರ್ಯ ಪದಕ್ಕೆ ಸಂಬಂಧಿಸಿದಂತೆ ಶೋಧನಾತ್ಮಕ ಪತ್ರವೊಂದನ್ನು ಸಂಪಾದಕರಿಗೆ ಬರೆದಿದ್ದರು. ಪತ್ರದಲ್ಲಿನ ಏಲಾಚಾರ್ಯ ಪದಕ್ಕೆ ಸಂಬಂಧಪಟ್ಟ ಭಾಗವನ್ನು ಪತ್ರಿಕೆ ಯಲ್ಲಿ ಪ್ರಕಟಿಸಲಾಗಿದೆ. ಆ ಲೇಖನದ ಸಂಗ್ರಹ ಹೀಗಿದೆ :

## ಏಲಾಚಾರ್ಯ ಪದದ ಸಂಬಂಧದಲ್ಲಿ

ವಿಜಯೋದಯಾ ಟೀಕೆಯಲ್ಲಿ ಪುಟ 266ರಲ್ಲಿ ಅನುದಿಶದ ಅರ್ಥವನ್ನು ಬಾಲಾಚಾರ್ಯ ಎಂದು ಮಾಡಲಾಗಿದೆ. ಆದರೆ ಆಶಾಧರನು ಎರಡು ಸ್ಥಳಗಳಲ್ಲಿ ಏಲಾಚಾರ್ಯ ಎಂದು ಮಾಡಿದ್ದಾನೆ. ಪುಟ 106ರಲ್ಲಿಯೂ ಕೂಡ ಆಶಾಧರನು ದಿಶಾ = ಏಲಾಚಾರ್ಯ ಎಂದು ಅರ್ಥೈಸಿದ್ದಾನೆ. ವಿಜಯೋದಯಾ ಟೀಕೆಯಲ್ಲಿ ಎಲ್ಲೆಲ್ಲಿ ಆಶಾಧರನು ಏಲಾಚಾರ್ಯ ಎಂದು ಅರ್ಥ ಮಾಡಿದ್ದಾನೆಯೋ ಅಲ್ಲೆಲ್ಲಾ ಹಿಂದಿ ಅನುವಾದಿತನು ಅದರ ಅರ್ಥವನ್ನು ಬಾಲಾಚಾರ್ಯ ಎಂದೇ ಮಾಡಿದ್ದಾನೆ. ವಿಜಯೋದಯಾದಲ್ಲಿ ಎಲ್ಲಿಯೂ ಕೂಡ ಏಲಾಚಾರ್ಯ ಶಬ್ದ ಬಂದಿಲ್ಲ. ಬಾಲಾಚಾರ್ಯ ಎಂದೇ ಬಂದಿದೆ. ಆದರೆ ಆಶಾಧರನು ಮೂಲಾರಾಧನ ದರ್ಪಣ ಹಾಗೂ ಅನಗಾರ ಧರ್ಮಾಮೃತದ ಟೀಕೆಗಳಲ್ಲಿ ಎಲ್ಲಿಯೂ ಕೂಡ ಬಾಲಾಚಾರ್ಯ ಶಬ್ದವನ್ನು ಕೊಟ್ಟಿಲ್ಲ. ಏಲಾಚಾರ್ಯ ಶಬ್ದವನ್ನೇ ಉಪಯೋಗಿಸಿದ್ದಾನೆ. ಇದರ ಫಲಿತಾಂಶವೇನೆಂದರೆ ದಿಶಾ—ಅನುದಿಶಾದ ಅರ್ಥವನ್ನು ಬಾಲಾಚಾರ್ಯ—ಏಲಾಚಾರ್ಯ ಎಂದು ಮಾಡಲಾಗಿದೆ. ಅವುಗಳಲ್ಲಿ ಬಾಲ ಮತ್ತು ಏಲಶಬ್ದ ಏಕಾರ್ಥಕ (ಪರ್ಯಾಯವಾಚಿ)ಗಳಾಗಿವೆ.

ಯಾವಾಗಲಾದರೂ ಆಚಾರ್ಯನೊಬ್ಬನು ಸಮಾಧಿ ಗ್ರಹಣ ಮಾಡಿದರೆ ಆತನು ತನ್ನ ಯೋಗ್ಯನಾದ ಶಿಷ್ಯನಿಗೆ ಆಚಾರ್ಯ ಪದವಿ ನೀಡುತ್ತಾನೆ. ಸಮಾಧಿಯ ಕಾಲ 12 ವರ್ಷಗಳವರೆಗೂ ಇರುತ್ತದೆ. ಇಷ್ಟು ದೀರ್ಘಕಾಲದವರೆಗೆ ಆ ಆಚಾರ್ಯನು ಜೀವಂತನಾಗಿರುವಾಗ ಅವರ ಶಿಷ್ಯ (ಸ್ಥಾಪಿತ ಆಚಾರ್ಯ) ಏಲಾಚಾರ್ಯ ಅಥವಾ ಬಾಲಾಚಾರ್ಯ ಅನ್ನಿಸಿಕೊಳ್ಳುತ್ತಾನೆ. ತನ್ನ ಗುರುವಿನ ಎದುರಿಗೆ ಆಚಾರ್ಯತ್ವದ

ದೃಷ್ಟಿಯಿಂದ ಇನ್ನೂ ಅವನು ಬಾಲಕ (ಕುಮಾರ–ಏಲ)ನೇ ಆಗಿರುವುದರಿಂದ ಈ ಬಾಲಾಚಾರ್ಯ ಎಂಬ ಹೆಸರು ಸಾರ್ಥಕವಾಗಿದೆ. ಇದರಂತೆ ಕುಂದ ಕುಂದ ಮುನಿಗಳಿಗೂ ಕೂಡ ಅವರ ಗುರುಗಳು ಸಮಾಧಿ ತೆಗೆದುಕೊಳ್ಳುವ ಸಮಯದಲ್ಲಿ ಈ ಪದವಿ ಕೊಟ್ಟಿರಬಹುದು ಮತ್ತು ಅವರು ಬಹಳ ವರ್ಷಗಳವರೆಗೆ ಸಮಾಧಿಯಲ್ಲಿದ್ದಿರ ಬಹುದು ಇದರಿಂದಾಗಿ ಏಲಾಚಾರ್ಯ ಪದ ಕುಂದಕುಂದರಿಗೆ ರೂಢಿಯ ಹೆಸರಾಗಿರ ಬಹುದು ಎಂಬುದು ಪ್ರತೀತವಾಗುತ್ತದೆ.

ಏಲಾಚಾರ್ಯ, ಗೃಧ್ರಪಿಚ್ಛ, ವಕ್ರಗ್ರೀವ ಇವೆಲ್ಲವೂ ಕುಂದಕುಂದರಿಗಿದ್ದ ಹೆಸರುಗಳಲ್ಲ. ಕುಂದ ಕುಂದವೂ ಕೂಡ ಅವರ ಹೆಸರಲ್ಲ. ಕೊಂಡ ಕುಂದ ಎಂಬ ಊರಿನ ಹೆಸರಿನ ಆಧಾರದಿಂದ ಕುಂದ ಕುಂದ ಬಂದಿದೆ. ದಕ್ಷಿಣ ಭಾರತದಲ್ಲಿ ಊರಿನ ಹೆಸರನ್ನು ತಮ್ಮ ಹೆಸರಿನ ಮೊದಲು ಉಪಯೋಗಿಸುತ್ತಾರೆ. ನಿದರ್ಶನಕ್ಕೆ ಸರ್ವಪಲ್ಲಿ ರಾಧಾಕೃಷ್ಣನ್ ಎಂಬುದರಲ್ಲಿ ವ್ಯಕ್ತಿಯ ಹೆಸರು ರಾಧಾಕೃಷ್ಣ. ಆದರೆ ಸರ್ವಪಲ್ಲಿ ಎಂಬುದು ಊರಿನ ಹೆಸರಾಗಿದೆ. ಇದೇ ರೀತಿಯಲ್ಲಿ ಕೊಂಡ ಕುಂದ ಪದ್ಮನಂದಿ ಎಂಬ ಪೂರ್ಣ ಹೆಸರಿನಲ್ಲಿ ಪ್ರಾರಂಭದ ಅರ್ಧಭಾಗ ವ್ಯಕ್ತಿಯ ಹೆಸರಿನಂತೆ ಉಪಯೋಗವಾಗಿ ಪ್ರಸಿದ್ಧವಾಯಿತು. ಕುಂದ ಕುಂದರ ನಿಜವಾದ ಹೆಸರು ಪದ್ಮನಂದಿ ಎಂಬುದು. ಧವಳ ಗ್ರಂಥ ರಚಿಸಿದ ವೀರಸೇನನ ಗುರುವಿನ ಹೆಸರಾದ ಏಲಾಚಾರ್ಯ ಎಂಬುದೂ ಸಹ ಇದೇ ರೀತಿ ಬಂದಿರಬಹುದು. ಅವರ ನಿಜವಾದ ಹೆಸರು ಬೇರೆಯೇ ಇರ ಬಹುದು. ಹೆಚ್ಚು ಗೌರವ ಸೂಚಿಸುವ ದೃಷ್ಟಿಯಿಂದ ಗುರು ಜನರ ಹೆಸರನ್ನು ಹೇಳಲು ಹೋಗುವುದಿಲ್ಲ. ಇದೊಂದು ಪದ್ಧತಿಯಾಗಿದೆ. ಇದರಿಂದಲೇ ಪದ್ಮನಂದಿಗೆ, ಏಲಾ ಚಾರ್ಯ, ಗೃಧ್ರಪಿಚ್ಛ, ವಕ್ರಗ್ರೀವ ಮುಂತಾದ ಗುಣನಾಮಗಳು ಪ್ರಸಿದ್ಧವಾದುವು. ಪದವಿ ಸೂಚಕ ಪದಗಳನ್ನು ವ್ಯಕ್ತಿಗಳ ಹೆಸರಿನ ಸ್ಥಾನದಲ್ಲಿ ಇಂದೂ ಕೂಡ ಉಪ ಯೋಗಿಸುತ್ತಾರೆ. ಉದಾಹರಣೆಗೆ ಡಾಕ್ಟರರೇ, ಶಾಸ್ತ್ರಿಗಳೇ, ಪಂಡಿತರೇ, ವರ್ಣಿ ಯವರೇ, ಬ್ರಹ್ಮಚಾರಿಗಳೇ ಇತ್ಯಾದಿ.

ಜೈನ ಶಬ್ದಾರ್ಣವ ಭಾಗ–2ರಲ್ಲಿ ಜ್ವಾಲಾಮಾಲಿನಿ ಕಲ್ಪದ ಕರ್ತೃವಿನ ಹೆಸರನ್ನು ಏಲಾಚಾರ್ಯ ಭಟ್ಟಾರಕ ಎಂದು ಕೊಟ್ಟಿದೆ. ಈ ಹೆಸರೂ ಸಹ ಮೇಲೆ ಹೇಳಿರುವ ರೀತಿಯಲ್ಲಿಯೇ ಬಂದಿರಬಹುದು. ಇಂತಹ ಪರಿಸ್ಥಿತಿಯಲ್ಲಿ ಕುಂದ ಕುಂದರ ನಂತರ (ಒಂದು ಸಾವಿರ ವರ್ಷದ ನಂತರ) ವೀರಸೇನರ ಗುರುವಿನ ನಂತರ (ಒಂದು ಸಾವಿರ ವರ್ಷದ ನಂತರ) ವಿದ್ಯಾನಂದರಿಗೆ ಈ ಏಲಾಚಾರ್ಯ ಪದವಿಯನ್ನು ಕೊಡಲಾಗಿದೆ ಎಂದು ತೋರಿಸುತ್ತಿರುವುದು ಸಮಂಜಸವಲ್ಲ. ವಿದ್ಯಾನಂದರ ಗುರು ದೇಶಭೂಷಣ ಮಹಾರಾಜರು ಸಮಾಧಿಯನ್ನು ಕೂಡಾ ತೆಗೆದುಕೊಂಡಿಲ್ಲ ಮತ್ತು ವಿದ್ಯಾನಂದರಿಗೆ ಈ ಪದವಿಯನ್ನು ಕೂಡ ಕೊಟ್ಟಿಲ್ಲ. ಹೀಗಿರುವಾಗ ಅವರು ಹೇಗೆ ಏಲಾಚಾರ್ಯರಾದರು,

ಮತ್ತು ಜನರು 'ಣಮೋ ಏಲಾಯಿರಿಯಾಣಂ' ಎಂಬ ಈ ಆರನೆಯ ಹೊಸಾ ಪದವನ್ನು ಹೇಗೆ ಸೃಷ್ಟಿ ಮಾಡಿದರು. ? ವಸ್ತುತಃ ಇದೆಲ್ಲಾ ಆಕ್ಷೇಪಾರ್ಹವಾಗಿದೆ, ಇದರ ಬಗ್ಗೆ ಇನ್ನಷ್ಟು ವಿಸ್ತಾರವಾದ ವಿವೇಚನೆ ನಡೆಯಬೇಕು. ಆಗ ಅದು ಸ್ವೇಚ್ಛಾ ಪ್ರವೃತಿಗೆ ಅಂಕುಶವಾಗಬಲ್ಲುದು. ತಾವು ಸಾಹಸಮಾಡಿ ಈ ವಿಷಯದ ಮೇಲೆ ಬರೆದುದಕ್ಕಾಗಿ ಶುಭಾಶಯಗಳು.

ಭಗವತಿ ಆರಾಧನಾ ಭಾಗ-2, ಪುಟ 608ರಲ್ಲಿ ವಿಜಯೋದಯಾ ಟೀಕೆಯು 'ಬಾಲವತ್ಸಂ ಏಲಕಂ ಶುನೋವಾನೋಲ್ಲಘಯೇತ್' ಎಂಬುದರ ಅರ್ಥ ನನ್ನ ತಿಳುವಳಿಕೆಯ ಪ್ರಕಾರ, ಚಿಕ್ಕಮಕ್ಕಳು, ಶಿಶು, ಹಾಗೂ ನಾಯಿಗಳನ್ನು ದಾಟಿ ಹೋಗಬಾರದು ಎಂದಾಗುತ್ತದೆ. ಇಲ್ಲಿ ವತ್ಸದ ಅರ್ಥ ಮಗು ಎಂದಾಗುತ್ತದೆ. ಏಲಕದ ಅರ್ಥ ಬಾಲ-ಲಘು ಶಿಶು ಎಂದಾಗುತ್ತದೆ. (ಮೇಲೆ ಬಾಲಾಚಾರ್ಯ-ಏಲಾಚಾರ್ಯದಲ್ಲಿ ಎರಡನ್ನೂ ಏಕಾರ್ಥಕವೆಂದು ಪ್ರಕಟಿಸಿರುವ ಹಾಗೆ)

ಇವೆಲ್ಲವುಗಳಿಂದ ಮತ್ತೊಂದು ಹೊಸ ರಹಸ್ಯೋದ್ಘಾಟನೆಯಾಗುತ್ತದೆ. ಅದು ಹೀಗಿದೆ :- ಏಲಶಬ್ದಕ್ಕೆ ಸ್ವಾರ್ಥದ ಅರ್ಥದಲ್ಲಿ 'ಕ' ಪ್ರತ್ಯಯ ಸೇರಿಸುವುದರಿಂದ ಏಲಕ ಆಗುತ್ತದೆ. ಬಾಲ ಮತ್ತು ಬಾಲಕ ಹೇಗೆ ಏಕಾರ್ಥಕಗಳಾಗಿವೆಯೋ ಹಾಗೆಯೇ ಏಲ ಮತ್ತು ಏಲಕಗಳೂ ಕೂಡ ಏಕಾರ್ಥಕಗಳಾಗಿವೆ. ಅನೇಕಾಂತದಲ್ಲಿ ಪಂಡಿತ ಜುಗಲ ಕಿಶೋರ ಮುಕ್ತಾರರು 'ಏಲಕ ಪದ ಕಲ್ಪನೆ' ಹೆಸರಿನ ಒಂದು ಲೇಖನ ಬರೆದಿದ್ದರು. ಅದರಲ್ಲಿ ಅಚೇಲಕದಿಂದ ಏಲಕದ ನಿರ್ಮಾಣವಾಗಿರುವ ಮಾತನ್ನು ಹೇಳಿದ್ದರು. ಅದನ್ನೇ ಪಂಡಿತ ಹೀರಾಲಾಲ ಸಿದ್ಧಾಂತ ಶಾಸ್ತ್ರಿಯವರು ವಸುನಂದಿಯ ಶ್ರಾವಕಾಚಾರದ ಪ್ರಸ್ತಾವನೆಯಲ್ಲಿ ಸ್ವೀಕರಿಸಿದ್ದರು. ಆದರೆ ಇದು ನನ್ನ ದೃಷ್ಟಿಯಲ್ಲಿ ದಿಗಂಬರ ಆಮ್ನಾಯದ ರೀತ್ಯ ಆಕ್ಷೇಪಾರ್ಹವಾಗಿದೆ, ಅಚೇಲಕತ್ವವು ನಗ್ನತ್ವದ ಏಕ ಮಾತ್ರ ಪ್ರತಿಷ್ಠಾಪನೆಯಾಗಿದೆ. ಅದು ಈ ಅರ್ಥದಿಂದ ಖಂಡವಸ್ತ್ರದ ವಾಚಕವೂ ಕೂಡ ಆಗಿಬಿಟ್ಟಿದೆ,

ಆದರೆ ನಾನು ಚೇಲಕ (ಚಲ್ಲಯ ರೂವಂ ಕಾವ್ವಣ) ಚೇಲಖಂಡಧರದಿಂದ ಏಲಕದ ಉತ್ಪತ್ತಿಯಾಗಿದೆ ಎಂದು ತಿಳಿದುಕೊಂಡಿದ್ದೆನು. ಈಗ ವಿಜಯೋದಯಾದ 'ಬಾಲವತ್ಸಂ ಏಲಕ' ಮತ್ತು ಆಶಾಧರರ ಬಾಲದ ಜಾಗದಲ್ಲಿ ಏಲ ಪ್ರಯೋಗದಿಂದ ಏಲದ ಅರ್ಥ ಬಾಲ-ಲಘು, ಕ್ಷುಲ್ಲಕ, ಕುಮಾರ ಎಂಬುದು ಸಿದ್ಧವಾಗುತ್ತದೆ. ಈ ರೀತಿಯಾಗಿ ಕ್ಷುಲ್ಲಕ ಏಲಕ ಕೂಡ ಏಕಾರ್ಥಕವಾಗಿವೆ, ಬಾಲ, ಲಘು ಎಂಬ ಅರ್ಥದಲ್ಲಿ ಏಲ (ಏಲಕ) ಶಬ್ದವು, ಕಡಿಮೆಯೆಂದರೆ ಒಂದು ಸಾವಿರ ವರ್ಷದಷ್ಟು ಪ್ರಾಚೀನ ಎಂಬುದು ಸಿದ್ಧವಾಗುತ್ತದೆ. ವಿಜಯೋದಯಾದಲ್ಲಿ 'ಬಾಲವತ್ಸಂ ಏಲಕ' ಎಂದು ಬರೆದಿರುವುದೇ ಇದಕ್ಕೆ ಆಧಾರವಾಗಿದೆ. ಯಾರು ಮುನಿಗಳಿಗಿಂತಲೂ ಸಾಧನೆಯಲ್ಲಿ

ಚಿಕ್ಕವರಾಗಿರುತ್ತಾರೋ ಅವರಿಗೆ ಕ್ಷುಲ್ಲಕ-ಏಲಕ ಅನ್ನುತ್ತಾರೆ. ಬಹಳ ಕಾಲದಿಂದ ಏಲಕ ಶಬ್ದದ ಯಾವುದೂ ಸರಿಯಾದ ನಿಷ್ಪತ್ತಿ ಸಿಗುತ್ತಿರಲಿಲ್ಲವೋ ಅದು ಈಗ ಸುಸಂಗತವಾಗಿ ಬಿಟ್ಟಿದೆ. ಇದರಿಂದ ನನಗೆ ತುಂಬಾ ಪ್ರಸನ್ನತೆಯುಂಟಾಗಿದೆ, ತಮ್ಮ ಏಲಾಚಾರ್ಯ ಚರ್ಚೆ ಇದರಲ್ಲಿ ನಿಮಿತ್ತ ಕಾರಣವಾಗಿದೆ. ಆದ್ದರಿಂದ ಇದಕ್ಕಾಗಿ ತಾವೂ ಕೂಡ ಧನ್ಯರಾಗಿದ್ದೀರಿ.

—ಕೆ. ಪಂ. ರತನಲಾಲಜಿ ಕಟಾರಿಯ

ಜೈನ ಸಂದೇಶದ ತಾ॥ 18–5–1979ರ ಸಂಚಿಕೆಯಲ್ಲಿ ಡಾ॥ ದೇವೇಂದ್ರಕುಮಾರ ಶಾಸ್ತ್ರಿ ಎಂಬುವರು 'ಏಲಾಚಾರ್ಯ' ಶಬ್ದದ ಬಗ್ಗೆ ಮತ್ತಷ್ಟು ವಿವರ ಪೂರ್ಣವಾದ ಪ್ರೌಢಲೇಖನವನ್ನು ಬರೆದರು. ಅದರ ಶೀರ್ಷಿಕೆ 'ಏಲಾಚಾರ್ಯ ಶಬ್ದ ಮೀಮಾಂಸೆ' ಎಂದಿದೆ. ಅದರ ಸಂಗ್ರಹ ಹೀಗಿದೆ :

## ಏಲಾಚಾರ್ಯ ಶಬ್ದ ಮೀಮಾಂಸೆ

ಉಪಾಧ್ಯಾಯ ಮುನಿಶ್ರೀ ವಿದ್ಯಾನಂದರು 'ಏಲಾಚಾರ್ಯ' ಪದದಿಂದ ವಿಭೂಷಿತರಾದಂದಿನಿಂದ ಈ ಶಬ್ದದ ಕಡೆಗೆ ಜನರೆಲ್ಲರ ಗಮನ ಹರಿದಿದೆ. ಜೈನ ಸಮಾಜದ ಬೌದ್ಧಿಕ ವರ್ಗ ಇದನ್ನು ಚೆನ್ನಾಗಿ ತಿಳಿದುಗೊಂಡಿದೆ. ಯಾರು 'ಏಲಾಚಾರ್ಯ ಎಂಬ ಹೆಸರನ್ನು ಎಂದೂ ಕೇಳಿಲ್ಲವೋ ಅವರೂ ಇದರ ವಿಷಯದಲ್ಲಿ ಚರ್ಚೆ ಮಾಡಿದ್ದಾರೆ. ಇದು ಯಾವ ಪದವಿ ಎಂದು ಕೆಲವು ಜನರು ಕೇಳಿದ್ದಾರೆ. 'ಏಲಾಚಾರ್ಯ ಅಂದರೇನು ಎಂದು ನೆನ್ನೆಯೇ ನನ್ನ ಮುದ್ದುಮಗಳೂ ಸಹ ಕೇಳಿದ್ದಾಳೆ.

'ಏಲಾಚಾರ್ಯ' ಶಬ್ದ ಪ್ರಾಕೃತ ಹಾಗೂ ಸಂಸ್ಕೃತ ಈ ಎರಡೂ ಭಾಷೆಗಳಲ್ಲಿ ರಚಿತವಾಗಿರುವ ಜಿನಾಗಮಗಳಲ್ಲಿ ಪ್ರಯೋಗವಾಗಿರುವುದು ನಿಶ್ಚಿತವಾಗಿದೆ. ಮೂಲ ಗ್ರಂಥಗಳಲ್ಲಿ ಉಕ್ತವಾದ ಏಲಾಚಾರ್ಯದ ಭಾಗಗಳು ಈ ರೀತಿ ಇವೆ

1. ಏಲಾಯರಿಯಸ್ಸ (ಭೇದಪಿಂಡ, ಗಾಹೆ–251)
2. ಏಲಾಇರಿಯೋ (ಧವಳ ಟೀಕೆ ಪುಸ್ತಕ 16· ಅಂತ್ಯಪ್ರಶಸ್ತಿ, ಗಾಹೆ–21)
3. ಏಲಾಇರಿಯ ಪಸಾಏಣ (ಕಸಾಯ ಪಾಹುಡ–ಭಾಗ–4, ಪುಟ-169)
4. ಏಲಾಇರಿಯ ವಚ್ಛಯಸ್ಸ (ಜಯಧವಳ ಪ್ರ. ಪುಟ 1953)
5. ಜೇಪ್ಪಮೇಲಾ ಇರಿಯವಚ್ಛವೊ (ಕಷಾಯ ಪಾಹುಡ ಭಾಗ-1, ಪುಟ-81)
6. ಶ್ರೀಮಾನೇಲಾಚಾರ್ಯ (ಇಂದ್ರನಂದಿಯ ಶ್ರುತಾವತಾರ ಶ್ಲೋಕ— 177, 178)

ಇವುಗಳಲ್ಲದೆ 'ಕಷಾಯ ಪಾಹುಡ' ದಲ್ಲಿ ಏಲಾಯಿರಿಯ ಶಬ್ದ ಎಷ್ಟೋ ಸ್ಥಾನ ಗಳಲ್ಲಿ ಸಿಗುತ್ತದೆ.

ಮೇಲಿನ ಉಕ್ತವಾದ ಎಲ್ಲಾ ಪ್ರಸಂಗಗಳನ್ನು ಧ್ಯಾನಪೂರ್ವಕವಾಗಿ ಗಮನಿಸುವು ದಾದರೆ 'ಭೇದಪಿಂಡ'ವನ್ನು ಬಿಟ್ಟು ಉಳಿದ ಎಲ್ಲಾ ಸ್ಥಳಗಳಲ್ಲಿ 'ಏಲಾಇರಿಯ' ಶಬ್ದ ಅಭಿಧಾನವಾಚಕವಾಗಿ ಬಂದಿದೆ. ವೀರಸೇನನ ಗುರುವಿನ ಹೆಸರು ಏಲಾಚಾರ್ಯ ಎಂದಿತ್ತು. ಅವರು ಚಿತ್ತೌಡ (ರಾಜಾಸ್ಥಾನ)ದಲ್ಲಿ ವಾಸಿಸುತ್ತಿದ್ದರು. ಜೈನಾಗಮ ಸಾಹಿತ್ಯದಲ್ಲಿ ಏಲಾಚಾರ್ಯ ಹೆಸರಿನ ಅನ್ಯ ವಿದ್ವಾಂಸರ ಉಲ್ಲೇಖವೂ ಕೂಡ ಪ್ರಾಪ್ತ ವಾಗಿದೆ. ಪಂಡಿತ ಪರಮಾನಂದ ಶಾಸ್ತ್ರಿಗಳು 'ಜೈನಧರ್ಮದ ಪ್ರಾಚೀನ ಇತಿಹಾಸ ಭಾಗ-2ರಲ್ಲಿ ಸೂರಸ್ಥಗಣದ ವಿದ್ವಾಂಸ ರವಿನಂದಿ ಆಚಾರ್ಯನ ಶಿಷ್ಯ ಮತ್ತು ತಪಸ್ವಿ ಏಲಾಚಾರ್ಯನ ಪರಿಚಯ ಕೊಟ್ಟಿದ್ದಾರೆ. ಅದೇ ಗ್ರಂಥದಲ್ಲಿ ಕೌಂಡಕುಂದಾನ್ವಯದ ಭಟ್ಟಾರಕ ಕುಮಾರನಂದಿಯ ಶಿಷ್ಯ ಏಲವಾಚಾರ್ಯನ ಉಲ್ಲೇಖವಿದೆ. ವರ್ಧಮಾನ ಗುರುಗಳು ಈ ಎಲವಾಚಾರ್ಯನ ಶಿಷ್ಯರಾಗಿದ್ದರು. 'ಏಲಾಚಾರ್ಯ' ಮತ್ತು 'ಏಲವಾಚಾರ್ಯ' ಒಂದೇ ವ್ಯಕ್ತಿಯ ಹೆಸರಾಗಿದ್ದಿರಬಹುದು, ಅದು ಉಚ್ಚಾರಣೆಯ ಭೇದದಿಂದಾಗಿ ಭಿನ್ನವಾಗಿರುವ ಸಂಭವವಿದೆ.

ಏಲಾಚಾರ್ಯ ಶಬ್ದದ ಅರ್ಥದ ವಿಚಾರ ಮಾಡೋಣ. ಏಲಾಚಾರ್ಯ ಪ್ರಾಕೃತ ಏಲಾಇರಿಯ ಶಬ್ದದ ರೂಪಾಂತರವಾಗಿದೆ. ಪ್ರಾಕೃತ ಮತ್ತು ಸಂಸ್ಕೃತ ಎರಡೂ ಶಬ್ದಗಳು ಎರಡೆರಡು ಶಬ್ದಗಳಿಂದ ಕೂಡಿದ ಪದಗಳಾಗಿವೆ.

1. ಏಲ + ಆಇರಿಯ = ಏಲಾಇರಿಯ
2. ಏಲ + ಆಚಾರ್ಯ = ಏಲಾಚಾರ್ಯ

ಇವೆರಡೂ ಶಬ್ದಗಳಲ್ಲಿ ಏಲ ಎಂಬುದು ಮೂಲ ಶಬ್ದವಾಗಿದೆ. ಆಚಾರ್ಯ ಶಬ್ದ ಸಾಮಾನ್ಯಾರ್ಥದಲ್ಲಿಯೂ ವಿಶಿಷ್ಟಾರ್ಥದಲ್ಲಿಯೂ ಪ್ರಯೋಗವಾಗುತ್ತದೆ ಜೈನ ಶಾಸ್ತ್ರಗಳಲ್ಲಿ ಬರುವ ಶಾಸ್ತ್ರಾಚಾರ್ಯ, ಸಿದ್ಧಾಂತಾಚಾರ್ಯ ಇಂತಹ ಕಡೆಗಳಲ್ಲೆಲ್ಲಾ ಇದು ಸಾಮಾನ್ಯ ಅರ್ಥದಲ್ಲಿಯೇ ಪ್ರಯೋಗವಾಗುತ್ತದೆ. ಮೂವತ್ತಾರು ಗುಣ ಗಳನ್ನು ಧರಿಸಿದ ಜೈನ ದಿಗಂಬರ ಸಾಧುವನ್ನು ಆಚಾರ್ಯ ಎಂದು ಕರೆದಾಗ ಈ ಆಚಾರ್ಯ ಹೆಸರು ವಿಶಿಷ್ಟಾರ್ಥದಲ್ಲಿ ಪ್ರಯೋಗವಾಗುತ್ತದೆ. ಜಿನಾಗಮದಲ್ಲಿ ಆಚಾರ್ಯಪರಮೇಷ್ಠಿಯ ಯಾವುದೇ ಭೇದವರ್ಣನೆಯೂ ಸಿಗುವುದಿಲ್ಲ. ಯಾರು ಐದು ಪ್ರಕಾರದ ಆಚಾರಗಳನ್ನು ಪಾಲನೆ ಮಾಡುವರೋ ಅಂಥವರಿಗೆ ಸಾಧು ಆಚಾರ್ಯರೆಂದು ಹೇಳುತ್ತಾರೆ. ಹನ್ನೆರಡು ಪ್ರಕಾರದ ತಪಗಳು, ಆರು ಆವಶ್ಯಕ ಗಳು, ಐದು ಪ್ರಕಾರದ ಆಚಾರ, ಹತ್ತು ಪ್ರಕಾರದ ಧರ್ಮ, ಮತ್ತು ಮೂರು ಗುಪ್ತಿ

ಗಳು—ಇವು ಆಚಾರ್ಯರ ಮೂವತ್ತಾರು ಗುಣಗಳು. ಇವುಗಳನ್ನು ಪಾಲನೆ ಮಾಡುವವನು ಆಚಾರ್ಯ.

'ಏಲ' ಶಬ್ದದ ವಿಚಾರ ಮಾಡೋಣ. ಏಲಶಬ್ದ ಪ್ರಾಕೃತ ಭಾಷೆಯಿಂದೋ ಅಥವಾ ಸಂಸ್ಕೃತ ಭಾಷೆಯಿಂದೋ ಎಂಬುದು ವಿಚಾರಣೀಯ. ಪ್ರಾಕೃತದ ಶಬ್ದ ಕೋಶದಲ್ಲಿ ಏಲ ಶಬ್ದದ ಒಂದೇ ಅರ್ಥ ಕಂಡುಬರುತ್ತದೆ. ಅದು ಹೀಗಿದೆ :

ಏಲೋ ಕುಸಲೆ ಏಕ್ಕೊಣೇಹಪರೇ ಚಂದಣಮ್ಮಿ ಏಬರ್ಕಂಗ
ಏತ್ತೊಪ್ಪಂ ಏಅಪ್ಪಹುದಿ ಅ ಪವಿಸಂತಮ್ಮಿ ಏವಾಣೊ

—ದೇಶೀನಾಮಮಾಲಾ 1144

'ಪಾಇಅಸದ್ದಮಹಣ್ಣವ'ದಲ್ಲಿ ಏಲ ಶಬ್ದದ ಎರಡು ಬೇರೆಬೇರೆ ಅರ್ಥಗಳಿವೆ 1) ಮೃಗದ ಒಂದು ಜಾತಿ. 2) ಟಗರು. ಈ ಎರಡೂ ಅರ್ಥ ಸಂಸ್ಕೃತದಿಂದ ಹುಟ್ಟಿಬಂದಿದ್ದು ಎಂದು ಪ್ರತೀತಿಯಾಗುತ್ತದೆ. ಪ್ರಾಕೃತದಲ್ಲಿ ಇದೊಂದು ಕುಶಲತೆಯ ವಾಚಕವಾಗಿದೆ. ಬೇರೆಶಬ್ದದಲ್ಲಿ ಕುಶಲ ಆಚಾರ್ಯಕ್ಕೆ ಏಲಾಇರಿಯ ಅಥವಾ ಏಲಾಚಾರ್ಯ ಎಂದು ಹೇಳಲಾಗುತ್ತಿತ್ತು. ಈ ಶಬ್ದ ಭಾರತೀಯ ಆರ್ಯಭಾಷೆಗಳ ವಿಕಾಸ ಕ್ರಮದಲ್ಲಿ ಪ್ರಯೋಗವಾಗುತ್ತಿರಲಿಲ್ಲ. ಹಾಗಾದರೆ ಇದು ಯಾವ ಪ್ರಾಚೀನ ಪರಂಪರೆಯಿಂದ ಬಂದ ಶಬ್ದವಾಗಿರಬಹುದು ?

ಈ ಶಬ್ದದ ರಚನೆಯು ಪ್ರವೃತ್ತಿ ಅದು ಪ್ರಾಕೃತವಾಗಿರಲಿ ಅಥವಾ ಸಂಸ್ಕೃತವಾಗಿರಲಿ ಎರಡರಲ್ಲೂ ಸಮಾನ ರೂಪದಿಂದ ಒಂದೇ ರೂಪರಚನೆಯಲ್ಲಿ ಇದರ ಪ್ರಚಲನೆ ಇರುತ್ತದೆ. ಹೇಗೆಂದರೆ ಏಲಾಚಾರ್ಯ, ಬಾಲಾಚಾರ್ಯ, ಕಾಲಕಾಚಾರ್ಯ ಮುಂತಾದವುಗಳು.

ಏಲ ಶಬ್ದಕ್ಕೆ 'ಯ' ಸ್ವಾರ್ಥಕ ಪ್ರತ್ಯಯ ಸೇರಿ ಪ್ರಾಕೃತದಲ್ಲಿ 'ಏಲಯ' ಮತ್ತು ಸಂಸ್ಕೃತದಲ್ಲಿ 'ಕ' ಸ್ವಾರ್ಥಕ ಪ್ರತ್ಯಯಸೇರಿ 'ಏಲಕ' ಶಬ್ದ ರಚನೆಯಾಗಿವೆ. ಜೈನ ಶಾಸ್ತ್ರಗಳಲ್ಲಿ 'ಏಲಕ' ಮತ್ತು 'ಕ್ಷುಲ್ಲಕ' ಎರಡೂ ಶಬ್ದಗಳು 'ಬಾಲ' ಅಥವಾ 'ಲಘು' ಅರ್ಥದಲ್ಲಿ ಪ್ರಯೋಗವಾಗುತ್ತವೆ.

ಕೇವಲ ಏಲಾಚಾರ್ಯ, ಬಾಲಾಚಾರ್ಯ ಅಷ್ಟೇ ಅಲ್ಲ ಹೇಲಾಚಾರ್ಯ, ಕೂವಿಲಾಚಾರ್ಯ, ಗೊಲ್ಲಾಚಾರ್ಯ, ತುಂಬಲೂರಾಚಾರ್ಯ, ತೋರಣಾಚಾರ್ಯ, ಉಗ್ರಾದಿತ್ಯಾಚಾರ್ಯ ಮತ್ತು ಮಹಾವೀರಾಚಾರ್ಯ ಎಂಬ ಹೆಸರುಗಳೂ ಕೂಡ ಜೈನಸಾಹಿತ್ಯದಲ್ಲಿ ಸಿಗುತ್ತವೆ. ಕೆಲವು ಹೆಸರುಗಳನ್ನು ಅಭಿಧಾನದ ಕಾರಣ ಆಯಾ ಸ್ಥಳಗಳಲ್ಲಿ ವಸತಿ ಮಾಡುವ ವ್ಯಕ್ತಿಗಳಿಗೆ ಅವನು ಅಲ್ಲಿಯವನು ಎಂದು ಕರೆಯಲಾಗುತ್ತದೆ. ಹೇಗೆಂದರೆ ಕೌಂಡಕುಂದ (ಕೌಂಡಕುಂಡಲ) ಸ್ಥಾನದ ನಿವಾಸಿಯಾಗಿದ್ದ ಕಾರಣ

ದಿಂದ ಕುಂದಕುಂದರಿಗೆ 'ಕೌಂಡಕುಂದಾಚಾರ್ಯ'ನೆಂದು ಕರೆಯಲಾಗುತ್ತಿತ್ತು. ಇದೇ ರೀತಿಯಾಗಿ ವೀರಸೇನನ ಗುರುವೂ ಕೂಡ ಯಾವುದೋ 'ಏಲ' ಗ್ರಾಮದ ನಿವಾಸಿ ಯಾಗಿದ್ದು ಆ ಕಾರಣದಿಂದಾಗಿ ಅವನ ಹೆಸರು ಏಲಾಚಾರ್ಯ ಎಂದು ಬಿದ್ದಿರಬಹುದು.

ಪಂಚಪರಮೇಷ್ಠಿ ಪದಗಳಲ್ಲಿ 'ಆಚಾರ್ಯ' ಹೇಗೆ ಒಂದು ಪದವಿಯಾಗಿದೆಯೋ ಹಾಗೆಯೇ ಏಲಾಚಾರ್ಯ ಸಹ ಯಾವುದಾದರೂ ಒಂದು ಪದವಿಯಾಗಿದೆಯೋ ? ನಾನು ಈ ಲೇಖನ ಬರೆಯುತ್ತಿರುವಾಗ ಗುರುವರ್ಯರಾದ ಸಿದ್ಧಾಂತಾಚಾರ್ಯ ಪಂಡಿತ ಕೈಲಾಸಚಂದ್ರರವರ 'ಏಲಾಚಾರ್ಯಪದ ಕಲ್ಪನೆ' ಲೇಖನ ನನಗೆ ನೋಡಲು ಸಿಕ್ಕಿತು. ಈ ಲೇಖನದಲ್ಲಿ ಎಷ್ಟೋ ಮಹತ್ವ ಪೂರ್ಣ ವಿಷಯಗಳ ಉಲ್ಲೇಖ ಮಾಡಲಾಗಿದೆ.

ಕುಂದ ಕುಂದರು ಮತ್ತು ವೀರಸೇನಸ್ವಾಮಿಯ ಗುರುಗಳಿಗೆ ಅವರ ವಿಶಿಷ್ಟ ಗುಣಗಳ ಕಾರಣದಿಂದಾಗಿ ಏಲಾಚಾರ್ಯ ಪದವಿಯನ್ನು ಕೊಡಲಾಗಿತ್ತು ಎಂಬುದಕ್ಕೆ ಲಿಖಿತ ಆಧಾರ ಎಲ್ಲಿದೆ ಎಂದು ಕೈಲಾಸಚಂದ್ರ ಶಾಸ್ತ್ರಿಗಳು ಪ್ರಶ್ನಿಸಿರುವುದು ಸರಿ ಯಾಗಿದೆ. ಹಾಗೆಯೇ ಏಲಾಚಾರ್ಯ ಮತ್ತು ಬಾಲಾಚಾರ್ಯ ಸಮಾನಾರ್ಥದಲ್ಲಿ ಪ್ರಯೋಗವಾಗಿವೆ ಎಂದು ಅವರು ಹೇಳಿರುವುದೂ ವಾಸ್ತವವಾಗಿದೆ. ಮತ್ತೆ, ಯಾರಾದರೂ ಆಚಾರ್ಯರು ಸಮಾಧಿಗ್ರಹಣ ಮಾಡಿದರೆ ಅವರು ತಮಗೆ ಯೋಗ್ಯ ನಾದ ಶಿಷ್ಯನನ್ನು ಆಚಾರ್ಯನನ್ನಾಗಿ ಮಾಡುತ್ತಾರೆ. ಈ ಸಮಾಧಿಯ ಕಾಲ 12 ವರ್ಷಗಳವರೆಗೆ ಇರುತ್ತದೆ. ಇಷ್ಟು ದೀರ್ಘಕಾಲದವರೆಗೆ ಒಂದುವೇಳೆ ಆಚಾರ್ಯ ಜೀವಂತವಿದ್ದುದಾದರೆ ಅವರ ಮುಖಾಂತರ ಸ್ಥಾಪಿತನಾದ ಆಚಾರ್ಯ ಏಲಾಚಾರ್ಯ ಅಥವಾ ಬಾಲಾಚಾರ್ಯ ಎಂದೆನಿಸಿಕೊಳ್ಳುತ್ತಾನೆ—ಎಂದೆಲ್ಲಾ ಕೈಲಾಸಚಂದ್ರಶಾಸ್ತ್ರಿ ಗಳು ಹೇಳಿರುವುದೂ ಕೂಡ ಸಮಂಜಸವಾಗಿದೆ.

ಏಲಾಚಾರ್ಯ ಪದದ ಸಂಬಂಧದಲ್ಲಿ 'ಭಗವತಿ ಆರಾಧನಾ' ಮತ್ತು ಮೂಲಾ ಚಾರ ಗ್ರಂಥಗಳಲ್ಲಿ ಮುಖ್ಯ ರೂಪದಿಂದ ವಿವರಣೆ ಸಿಗುತ್ತದೆ. ಕೆಳಗಿನ ಉದ್ಧೃತ ಭಾಗಗಳ ಆಧಾರದಿಂದ ಇದರ ಸಂಕ್ಷಿಪ್ತವಾದ ಪ್ರಸ್ತಾಪವಿದೆ.

ಅನುಗುರೋಃ ಪಶ್ಚಾತ್ ದಿಶತಿ ವಿದತ್ತೊ

ಚರಣಕ್ರಮು ಮಿತ್ಯನುದಿಕ್ ಏಲಾಚಾರ್ಯ ಸ್ತಸ್ಯೈವಿಧಿನಾ।

—ಮೂಲಾರಾಧನಾ ಭಾ-1, ಗಾಹೆ 177 ರಟೀಕೆ

**ಅರ್ಥ** : ಗುರುಗಳ ನಂತರ ಚರಿತ್ರದ ಕ್ರಮವುಮುನಿಯೆಂದೂ ಅಯರ್ಾಧಿಕ ನೆಂದೂ ಯಾವ ಮುನಿಗೆ ಅನ್ನುತ್ತಾರೆಯೋ ಆ ಮುನಿಗೆ ಅನುದಿಶ ಅರ್ಥಾತ್ ಏಲಾಚಾರ್ಯನೆಂದು ಹೇಳುತ್ತಾರೆ.

ಅನುದಿಶದ ಅರ್ಥವೇನು ? ಇದನ್ನೂ ಕೂಡ ಅದೇ ಗ್ರಂಥದಿಂದ ತಿಳಿದು ಕೊಳ್ಳಬೇಕು. ಅಲ್ಲಿ ಹೇಳಿದ್ದಾರೆ :

ಕಾಲಂ ಸಂಭಾವಿತ್ತಾ ಸವ್ವಗಣಮಣುದಿಸಂ ಚ ವಾಹರಿಯ।

ಸೋಮತಿಹಿಕರಣಕ್ಖತ ವಿಲಗ್ಗೇ ಮಂಗಲೋಗಾಸೇ॥

—ಮೂಲಾರಾಧನೆ, ಗಾಥೆ—273.

ಈ ಗಾಥೆಯ ವಿಜಯೋದಯಾ ಟೀಕೆಯಲ್ಲಿ ಹೀಗೆ ಬರೆದಿದೆ :

''ಸೌವ್ವಗಣಂ ಸರ್ವಗಣಂ ಅಣುದಿಸಂಚ ಬಾಲಾಚಾರ್ಯ ಚ। ವಾಹರಿಯ ಬ್ಯಾಹೃತ್ಯ। (ಪುಟ 492)

**ಅರ್ಥ** : ಉದ್ಯತ ಆಚಾರ್ಯನು ಸಲ್ಲೇಖನದ ಸಲುವಾಗಿ ತನ್ನ ಉಳಿದ ಆಯುಸ್ಸಿನ ವಿಚಾರ ಮಾಡಿ ತನ್ನ ಶಿಷ್ಯ ಸಮುದಾಯದಿಂದ ತನ್ನ ಸ್ಥಾನದಲ್ಲಿ ಯಾರ ಸ್ಥಾಪನೆ ಮಾಡಿದೆಯೋ ಅಂತಹ ಬಾಲ ಆಚಾರ್ಯನನ್ನು ಕರೆದು ಸೌಮ್ಯತಿಥಿ, ಕರಣ, ನಕ್ಷತ್ರ ಮತ್ತು ಲಗ್ನದ ಸಮಯದಲ್ಲಿ ಶುಭಪ್ರದೇಶದಲ್ಲಿ, ಬಾಲಾಚಾರ್ಯನಿಗೆ ತಮ್ಮ ಗಣ ವಿಸರ್ಜಿತ ಮಾಡಿಬಿಡುತ್ತಾರೆ.

ಈ ಪ್ರಕರಣದಲ್ಲಿ ಬಾಲಾಚಾರ್ಯ ಯಾವುದೇ ಪದವಿಯಲ್ಲ. ಹೇಗೆಂದರೆ, ಬಾಲಾಚಾರ್ಯ ಯುವಾಚಾರ್ಯ ವೃದ್ಧಾಚಾರ್ಯ ಇವೆಲ್ಲಾ ಅವಸ್ಥೆಯಲ್ಲಿ ಸಂಬಂಧ ವಿಡುವ ಕಾರಣದಿಂದಾಗಿ ಪ್ರಯೋಗವಾಗಿರುವ ಶಬ್ದಗಳಾಗಿವೆ. ನಿಜವಾದ ಪದವಿ ''ಆಚಾರ್ಯ'' ಎಂಬುದೇ ಆಗಿದೆ. 'ಬಾಲ' ಶಬ್ದ ಸ್ಥಿತಿಯ ವಾಚಕವಾಗಿದೆ. ಗಣದ ಪರಿಪಾಠಿಯನ್ನು ನಡೆಸುವುದರ ಸಲುವಾಗಿ ಈ ವಿಧಿಯ ನಿರ್ದೇಶ ಮಾಡಲಾಗಿದೆ.

ಭಗವತಿ ಆರಾಧನೆಯ ಗಾಥೆ 285ರ ಮೂಲಾರಾಧನಾ ಟೀಕೆಯಲ್ಲಿ 'ದಿಸಂ'ದ ಅರ್ಥವನ್ನು 'ಏಲಾಚಾರ್ಯ' ಎಂದು ಮಾಡಲಾಗಿದೆ. ಆದರೆ ವಿಜಯೋದಯಾದಲ್ಲಿ 'ದಿಸಂ ಆಚಾರ್ಯ' ಎಂದು ಹೇಳಿ ಆಚಾರ್ಯ ಅರ್ಥವನ್ನು ಮಾಡಲಾಗಿದೆ. ವಾಸ್ತವ ವಾಗಿ ಶಬ್ದರಚನೆಯ ದೃಷ್ಟಿಯಿಂದಾಗಿ, ಶಬ್ದದಿಂದಾಗಿ, ಇಲ್ಲವೆ ಅರ್ಥದಿಂದಾಗಿಯೇ ನಾದರೂ ಪ್ರಾಕೃತದ 'ಏಲ' ಶಬ್ದ ಸಂಸ್ಕೃತ 'ಬಾಲ'ದ ವಾಚಕವಾಗಿದೆಯೇ ? ಎರಡರ ಮೂಲಭಾವನೆಯಲ್ಲಿ ಇದೂ ಕೂಡ 'ಅಜ್ಞಾನತೆ'ಯ ಭಾವನೆ ಅಡಗಿಕೊಂಡಿದೆ. ಆಗಮ ದಲ್ಲಿ ಬಾಲ ಆಚಾರ್ಯ ಅಷ್ಟೇ ಅಲ್ಲ, ಜ್ಞಾನಬಾಲ, ಮತ್ತು ಚಾರಿತ್ರಬಾಲ ಎಂಬುದರ ವಿವರಣೆಯೂ ಸಿಗುತ್ತದೆ. ಈ ಅಭಿಪ್ರಾಯದ ಸಮರ್ಥನೆ ಕೆಳಗಿನ ಗಾಥೆಯಿಂದ ಆಗುತ್ತದೆ.

ಆಗಮದೊ ಜೋ ಬಾಲೋ ಪರಿಯಾಪಣ ಪ ಹವೇಜ್ಜ ಜೋ ಬಾಲೋ।

ತಸ್ಸ ಸಗಂ ದುಚ್ಚರಿಯಂ ಆಲೋಚೇದ್ಯಣಬಾಲವದೀ॥

—ಮೂಲಾರಾಧನಾ ಗಾಥೆ—598

**ಅರ್ಥ :** ಯಾವ ಮುನಿ ಆಗಮದಿಂದಾಗಿ ಬಾಲನಾಗಿದ್ದಾನೆಯೋ ಅರ್ಥಾತ್ ಯಾರಿಗೆ ಆಗಮದ ಜ್ಞಾನವಿಲ್ಲವೋ ಮತ್ತು ಚಾರಿತ್ರಬಾಲನಿದ್ದಾನೆಯೋ ಅರ್ಥಾತ್ ಚಾರಿತ್ರಕೂಡ ಯಾರದು ಶ್ರೇಷ್ಠವಿಲ್ಲವೋ ಅವನಿಗೆ ಬಾಲ ಅನ್ನುತ್ತಾರೆ. ಇಂತಹ ಮುನಿಯ ಬಳಿ ಹೋಗಿ ಯಾವನು ಅಲ್ಪಜ್ಞಾನಿ ಮುನಿ ತನ್ನ ದೋಷಗಳ ಆಲೋಚನೆ ಮಾಡುತ್ತಾನೆ ?

ಯಥಾರ್ಥದಲ್ಲಿ ಪ್ರಾಕೃತದ 'ಏಲ' ಮತ್ತು ಸಂಸ್ಕೃತದ 'ಏಲಕ' ಅಥವಾ 'ಏಲಾ' ಅಥವ 'ಐಲಕ'ಶಬ್ದಗಳಲ್ಲಿ ಅರ್ಥಭೇದಗಳುಂಟಾಗಿದ್ದರೂ ಕೂಡ ಮೂಲಭಾವನೆಯಲ್ಲಿ ಯಾವ ಅಂತರವೂ ಇಲ್ಲ. ಸಂಸ್ಕೃತದಲ್ಲಿ 'ಏಲಾ' ಎಂದು ಇಲಾಯಚಿಕ್ಕೆ ಹೇಳುತ್ತಾರೆ. ಈ ಅರ್ಥ ಅದರ ಲಘು ಆಕಾರದ ಕಾರಣ ಪ್ರಸಿದ್ಧವಾಗಿದೆ

ಪಾಕೃತ 'ಏಲ' ಮತ್ತು ಸಂಸ್ಕೃತದ 'ಬಾಲ' ಶಬ್ದಗಳು ಸಮಾನಾರ್ಥಕಗಳೆಂದು ಈ ಮೊದಲೆ ಹೇಳಿಯಾಗಿದೆ ಇದರಿಂದಾಗಿ 'ಭಗವತಿ ಆರಾಧನಾ'ದಲ್ಲಿ 'ಏಲಾಚಾರ್ಯ'ಕ್ಕೆ ಯಾವುದು ಬಾಲಾಚಾರ್ಯ ಅರ್ಥವನ್ನು ಅಲ್ಲಲ್ಲಿ ಮಾಡಲಾಗಿದೆಯೋ ಅದು ಉಚಿತವಾಗಿದೆ. ಬಾಲ ಶಬ್ದದೊಂದಿಗೆ ಸೇರಿರುವ ಅನೇಕ ಹೆಸರುಗಳು ಜಿನಾಗಮದಲ್ಲಿ ನೋಡಲು ಸಿಗುತ್ತವೆ ಹೇಗೆಂದರೆ ಬಾಲಕ್ರಿಯಾ, ಬಾಲತಪ, ಬಾಲವ್ರತ, ಜ್ಞಾನಬಾಲ, ಚಾರಿತ್ರಬಾಲ ಇತ್ಯಾದಿ ಈ ಪ್ರಕಾರವಾಗಿ ಬಾಲಾಚಾರ್ಯ ಮತ್ತು ಏಲಾಚಾರ್ಯ ಶಬ್ದಗಳನ್ನು ಕೂಡ ತಿಳಿದುಕೊಳ್ಳಬೇಕು

ಈ ನನ್ನ ಅಧ್ಯಯನದಿಂದ ಓದುಗರಿಗೆ ಸಮಾಧಾನವಾಗುವುದೋ ಇಲ್ಲವೋ ನನಗೆ ತಿಳಿಯದು. ಆದರೆ ನನ್ನ ಮುದ್ದು ಮಗಳು ಪದೇ ಪದೇ ಕೇಳುತ್ತಾ ಹೋದಾಗ ನಾನು ಇದರ ಅರ್ಥವನ್ನು 'ಬಚಕಾನಾ ಆಚಾರ್ಯ' (ಮಕ್ಕಳ ಆಚಾರ್ಯ) ಎಂದು ಹೇಳಿದೆ ಕ್ಷಣಹೊತ್ತು ಆಕೆ ಮುಖಮುಚ್ಚಿ ಯೋಚಿಸುತ್ತಿದ್ದು ನಂತರ ಕೇಳಿದಳು. ಬಚಕಾನಾ ಎಂದು ಮಕ್ಕಳಿಗೆ ಹೇಳುತ್ತಾರೆಯೋ ? ನಾನು ಮೆಲ್ಲಗೆ 'ಹಾಂ' ಎಂದಾಗ ಅವಳು—ಸರಿ ! ವಿದ್ಯಾನಂದರು ಚಿಕ್ಕ ಆಚಾರ್ಯರು ಮತ್ತು ವಿದ್ಯಾಸಾಗರರು ದೊಡ್ಡ ಆಚಾರ್ಯರು ಎಂದು ಹೇಳಿದಳು.

ಮಕ್ಕಳ ಮಾತುಗಳು ಮಕ್ಕಳಂತೆಯೇ ಇರುತ್ತವೆ. 'ಏಲಾಚಾರ್ಯ' ಎಂಬ ಯಾವ ಪದವಿಯೂ ಇಲ್ಲ ಮತ್ತು ಇದಕ್ಕೆ ವಿಶಿಷ್ಟ ಅಥವಾ ಗಂಭೀರ ಎಂಬ ಯಾವ ಅರ್ಥವೂ ಇಲ್ಲ ಎಂಬುದು ಸುಸಂಗತವಾಗಿದೆ. ಆದ್ದರಿಂದ ಓದುಗರು 'ಏಲಾಚಾರ್ಯ' ಶಬ್ದವನ್ನು ವಿಶೇಷಣದ ರೂಪದಲ್ಲಿಯೇ ಗ್ರಹಿಸಬೇಕು. ಹೇಗೆಂದರೆ ಉಗ್ರಾಚಾರ್ಯದಲ್ಲಿ 'ಉಗ್ರ' ಒಂದು ವಿಶೇಷಣವಾಗಿದೆ. ವೃದ್ಧಾಚಾರ್ಯದಲ್ಲಿ 'ವೃದ್ಧ' ವಿಶೇಷಣವಾಗಿದೆ. ಹಾಗೆಯೇ ಏಲಾಚಾರ್ಯದಲ್ಲಿ 'ಏಲಕ' (ಲಘು) ವಿಶೇಷಣವಾಗಿದೆ. ಶ್ರದ್ಧಾವಂತ ಸಿದ್ಧಾಂತಾಚಾರ್ಯ ಪಂಡಿತ ಕೈಲಾಸಚಂದ್ರರ. ಈ ಬಗ್ಗೆ ಮಾಡಿರುವ ನಿರ್ಧಾ

ರವೂ ಸಹ ಸಾಧಾರವುಳ್ಳದ್ದು ಮತ್ತು ಪ್ರಾಮಾಣಿಕವಾದದ್ದೂ ಆಗಿದೆ ಎಂಬು ದನ್ನು ಈ ಅಧ್ಯಯನ ದೃಢಪಡಿಸುತ್ತದೆ. ಅದೇನೆಂದರೆ 'ಏಲ'ದ ಅರ್ಥ ಬಾಲ, ಲಘು, ಕ್ಷುಲ್ಲಕ, ಕುಮಾರ ಎಂದಾಗುತ್ತದೆ. ಕ್ಷುಲ್ಲಕ ಮತ್ತು ಏಲಕ ಏಕಾರ್ಥಕವಾಗಿವೆ.

—ಡಾ|| ದೇವೇಂದ್ರಕುಮಾರಶಾಸ್ತ್ರಿ

ಜೈನಸಂದೇಶ ಪತ್ರಿಕೆಯಲ್ಲಿ 'ಏಲಾಚಾರ್ಯ' ಶಬ್ದದ ವಿಚಾರವಾಗಿ ಮೇಲಿನ ಮೂರು ಜನ ವಿದ್ವಾಂಸರ ಬಹು ಮಹತ್ವಪೂರ್ಣವಾದ ಲೇಖನಗಳು ಪ್ರಕಟವಾದ ಮೇಲೆ ಮುಂದೆ ಸುಮಾರು ಆರು ತಿಂಗಳ ನಂತರ ಕೈಲಾಸಚಂದ್ರಶಾಸ್ತ್ರಿಗಳು ಜೈನ ಸಂದೇಶದ ತಾ. 8-11-1979ರ ಸಂಚಿಕೆಯಲ್ಲಿ 'ಪಿಂಛ ಮತ್ತು ಕಮಂಡಲ' ಎಂಬ ಶಿರೋನಾಮೆಯಲ್ಲಿ ಒಂದು ಸಂಪಾದಕೀಯ ಲೇಖನ ಬರೆದರು. ಈ ಲೇಖನ 'ಏಲಾಚಾರ್ಯ' ಶಬ್ದದ ಚರ್ಚೆಗೆ ನೇರವಾಗಿ ಸಂಬಂಧಿಸಿದ್ದಲ್ಲ. ಪಿಂಛ ಮತ್ತು ಕಮಂಡಲಗಳನ್ನು ಹಿಡಿದ ಕೆಲವರಿಂದ ಅವುಗಳ ಮರ್ಯಾದೆಯ ರಕ್ಷಣೆಯಾಗುತ್ತಿಲ್ಲ ಎಂಬ ವಿಷಯ ಈ ಲೇಖನದಲ್ಲಿ ಪ್ರಸ್ತಾಪವಾಗಿದೆ. ಅದರಲ್ಲೂ ದಕ್ಷಿಣಭಾರತದ ಒಂದಿಬ್ಬರು ಭಟ್ಟಾರಕರನ್ನು ಗಮನದಲ್ಲಿಟ್ಟುಕೊಂಡು ಈ ಸಂಪಾದಕೀಯವನ್ನು ಬರೆದಿ ದ್ದಾರೆ. ದಕ್ಷಿಣಭಾರತದ ಶ್ರವಣಬೆಳಗೊಳ ಮತ್ತು ಮೂಡಬಿದರೆಯ ಭಟ್ಟಾರಕ ರೊಂದಿಗೆ ವಿದ್ಯಾನಂದರು ವಿಶೇಷ ಸಂಪರ್ಕವಿಟ್ಟುಕೊಂಡಿರುವ ಹಿನ್ನೆಲೆಯಲ್ಲಿ ಈ ಲೇಖನವನ್ನು ಇಲ್ಲಿ ಗಮನಿಸಬೇಕಾದ್ದು ಅಗತ್ಯ. ಅದರ ಸಂಗ್ರಹ ಹೀಗಿದೆ :

## ಪಿಂಛ ಮತ್ತು ಕಮಂಡಲ

ದಿಗಂಬರ ಜೈನಸಾಧುಗಳಿಗೆ ಎರಡೇ ಉಪಕರಣಗಳಿರುತ್ತವೆ, ಪಿಂಛ ಮತ್ತು ಕಮಂಡಲ. ಪಿಂಛವನ್ನು ಜೀವಸಂರಕ್ಷಣೆಯ ಉದ್ದೇಶಕ್ಕೂ, ಕಮಂಡಲವನ್ನು ಶೌಚದ ಉದ್ದೇಶಕ್ಕೂ ಬಳಸುತ್ತಾರೆ. ಇವೆರಡೂ ಅತ್ಯಂತ ನಿಷ್ಪರಿಗ್ರಹದ ಚಿನ್ಹೆಗಳಾಗಿವೆ. ಕ್ಷುದ್ರಾತಿಕ್ಷುದ್ರ ಜಂತುವಿಗೂ ಕೂಡ ತೊಂದರೆಯಾಗದಿರಲೆಂದು ಮುನಿಗಣದ ಚಿತ್ತದಲ್ಲಿ ಕರುಣೆಯ ಸಾಗರ ಹರಿಯುತ್ತಿರುತ್ತದೆ. ಆದ್ದರಿಂದ ಮುನಿಗಳು ಬಿಸಿಲಿನಿಂದ ನೆರಳಿಗೂ, ನೆರಳಿನಿಂದ ಬಿಸಿಲಿಗೂ ಬಂದಾಗಲೂ ಕೂಡ ಪಿಂಛದಿಂದ ಶರೀರದ ಪರಿಮಾರ್ಜನೆ ಮಾಡಿಯೇ ಹೋಗುತ್ತಾರೆ. ಏನಾದರೂ ಎತ್ತಿದರೆ ಅಥವಾ ಇಟ್ಟರೆ ಪಿಂಛದಿಂದ ಪರಿಮಾರ್ಜನೆ ಮಾಡಿಯೇ ಇಡುತ್ತಾರೆ.

ಒಂದು ಪಕ್ಷ ಅಂತರಂಗದಲ್ಲಿ ರಾಗ ಮತ್ತು ದ್ವೇಷದ ವಾಸನೆಯ ಪ್ರಕೋಪ ವಿದ್ದು, ಬಹಿರಂಗದಲ್ಲಿ ಪಿಂಛದಿಂದ ಕ್ಷುದ್ರಜಂತುಗಳ ರಕ್ಷಣೆಯ ನಾಟಕವಾಡುತ್ತಿದ್ದರೆ ಅದು ಸರಿಯಲ್ಲ. ಜೀವರಕ್ಷಣೆಯ ನಿಜವಾದ ಉಪಕರಣ ಅವನ ಪರಿಶುದ್ಧವಾದ ಅಂತಃಕರಣವಾಗುತ್ತದೆ ಆಚಾರ್ಯ ಸಮಂತಭದ್ರರು ತಮ್ಮ ಸ್ವಯಂಭೂ ಸ್ತೋತ್ರ

ದಲ್ಲಿ ಭಗವಾನ್ ನಮಿನಾಥನ ಸ್ತವನದಲ್ಲಿ "ಜಗತ್ತಿನಲ್ಲಿ ಪ್ರಾಣಿಗಳ ಅಹಿಂಸೆಯನ್ನು ಪರಮಬ್ರಹ್ಮನ ಸ್ವರೂಪವೆಂದು ತಿಳಿಯಲಾಗಿದೆ. ಯಾವ ಆಶ್ರಮ ವಿಧಿಯಲ್ಲಿ ಅಣು ಮಾತ್ರರೂಪದಲ್ಲಾದರೂ ಪ್ರಾರಂಭ ಹಿಂಸೆಯಾಗುತ್ತದೆಯೋ ಅಲ್ಲಿ ಅಹಿಂಸೆಯಿಲ್ಲ. ಹೇ ನಮಿಭಗವಂತನೆ ಪರಮ ಅಹಿಂಸಕರಾದ ತಾವು ಅಂತರಂಗ ಮತ್ತು ಬಹಿರಂಗ ಈ ಎರಡೂ ರೀತಿಯ ಪರಿಗ್ರಹಗಳ ತ್ಯಾಗ ಮಾಡಿದ್ದೀರಿ. ಯಾವುದೇ ರೀತಿಯ ವಿಕಾರ, ರೂಪ, ವೇಷ, ಮತ್ತು ಪರಿಗ್ರಹಗಳನ್ನು ನೀವು ಧಾರಣೆ ಮಾಡಿಲ್ಲ" ಎಂದು ಸ್ತುತಿಸಿದ್ದಾರೆ.

ಹನ್ನೊಂದನೆಯ ಉದ್ದಿಷ್ಟತ್ಯಾಗ ಪ್ರತಿಮೆಯಿಂದ ಮಾತ್ರ ಮೇಲಿನ ಎರಡು ಉಪಕರಣಗಳ ಮರ್ಯಾದೆಯ ರಕ್ಷಣೆಯಾಗುತ್ತದೆ. ಕಾಲಕ್ರಮದಲ್ಲಿ ಈ ಪ್ರತಿಮೆಯ ಎರಡು ಭೇದಗಳಾದವು ಅವೇ ಕ್ಷುಲ್ಲಕ ಮತ್ತು ಐಲಕ ರತ್ನಕರಂಡಕ ಶ್ರಾವಕಾಚಾರದಲ್ಲಂತೂ ಎರಡು ಭೇದಗಳಿಲ್ಲ ಯಾವನು ಭಿಕ್ಷ ರೂಪದಿಂದ ಊಟ ಮಾಡುತ್ತಾನೋ ಮತ್ತು ಖಂಡವಸ್ತ್ರ ಧರಿಸುತ್ತಾನೋ ಅವನ ಒಂದು ಮಾತ್ರ ಭೇದವಿದೆ. ನಮ್ಮ ವಿಚಾರದಲ್ಲಿ ಈ ವಸ್ತ್ರಖಂಡ ನಗ್ನತೆಯನ್ನು ಮುಚ್ಚುವುದರ ಸಲುವಾಗಿಯೋ ಇರುತ್ತಿರಬಹುದು. ಇವನ್ನು ತ್ಯಾಗ ಮಾಡಿದ ಮೇಲೆಯೋ ದಿಗಂಬರ ಮುದ್ರೆಯ ರೂಪ ಬರುತ್ತದೆ ಹನ್ನೊಂದನೆಯ ಪ್ರತಿಮೆ ಮತ್ತು ಮುನಿಯ ಬಾಹ್ಯ ರೂಪದಲ್ಲಿ ಕೇವಲ ಇಷ್ಟೇ ಅಂತರ ಕಂಡು ಬರುತ್ತದೆ.

ಇತ್ತೀಚಿಗೆ ಯಾರು ಭಟ್ಟಾರಕರಿದ್ದಾರೋ ಅವರೂ ಕೂಡ ಈ ಎರಡು ಉಪಕರಣಗಳನ್ನು ಧಾರಣ ಮಾಡುತ್ತಾರೆ ಅವುಗಳಿಂದ ಅವರ ಸನ್ಯಾಸತ್ವ ವ್ಯಕ್ತವಾಗುತ್ತದೆ. ನಮ್ಮ ಅಭಿಪ್ರಾಯದಲ್ಲಂತೂ ಇವೆರಡೂ ಅವರ ಪ್ರತಿಷ್ಠೆ ಶೋಭೆಯ ಚಿನ್ಹೆಗಳೆಂದು ಮಾತ್ರ ಪ್ರತೀತಿಯಾಗುತ್ತದೆ ಭಟ್ಟಾರಕರಾಗುವುದಕ್ಕೋಸ್ಕರ ಕ್ಷುಲ್ಲಕರ ಎರಡೂ ಉಪಕರಣಗಳು ಇರುತ್ತವೆ. ಆದರೆ ಬಟ್ಟಾರಕ ಗಣ ಕ್ಷುಲ್ಲಕ ದೀಕ್ಷೆ ಪಡೆದಿದ್ದರೂ ಸಹ ಯಥಾರ್ಥದಲ್ಲಿ ಅವರು ಕ್ಷುಲ್ಲಕರಾಗಲಾರರು ಅವರಂತೂ ಶುದ್ಧ ಮಠಾಧೀಶರಾಗುತ್ತಾರೆ ಅಪವಾದ ರೂಪದಿಂದ ಯಾರಾದರೂ ವ್ರತಾದಿಪಾಲನೆಗಳನ್ನು ಮಾಡುತ್ತಿರಬಹುದು ಪ್ರತಿಮೆಗಳ ಮರ್ಯಾದೆಯ ದೃಷ್ಟಿಯಿಂದ ಎಲ್ಲಾ ಪ್ರತಿಮೆಗಳ ಪಾಲನೆಯಾಗಬೇಕಾದುದು ಅಗತ್ಯವಾಗಿದೆ. ತ್ರಿಕಾಲ ಸಾಮಾಯಿಕ ಮಾಡಬೇಕು. ಅಷ್ಟಮಿ ಚತುರ್ದಶಿಗಳಲ್ಲಿ ಉಪವಾಸ ಮಾಡಬೇಕು ಇತ್ಯಾದಿ. ಭಟ್ಟಾರಕ ಗಣ ಹೀಗೆ ಮಾಡುತ್ತಾರೆಂದು ನಾವು ತಿಳಿದಿಲ್ಲ. ಯಥಾರ್ಥದಲ್ಲಿ ಶಾಸನದ ರಕ್ಷಣೆಯೋ ಅವರ ಮುಖ್ಯ ಕಾರ್ಯವಾಗಿರತ್ತದೆ. ಮೊದಲು ದಿಗಂಬರ ಮುನಿಯೇ ಬಸದಿಗಳಲ್ಲಿ ಇದ್ದುಕೊಂಡು ತಮ್ಮ ನಿಮಿತ್ತ ದಾನಾದಿಗಳನ್ನು ಪಡೆಯುತ್ತಿದ್ದುದರಿಂದ ಭಟ್ಟಾರಕರೆಂದು ಅನ್ನಿಸಿಕೊಳ್ಳತೊಡಗಿದ್ದರು. ಮೊದಲಂತೂ ಎಲ್ಲರೂ ಮುನಿಗಳೇ ಇರುತ್ತಿ

ದ್ದರು. ನಂತರ ವಸ್ತ್ರಧಾರಣ ಮಾಡತೊಡಗಿದರು. ಶಿಥಿಲಾಚಾರ ಹೆಚ್ಚುತ್ತಿರುವ ಈ ಕಾಲದಲ್ಲೂ ಉತ್ತರ ಭಾರತದಲ್ಲಿ ಭಟ್ಟಾರಕ ಪರಂಪರೆಯೇ ಲೋಪವಾಗಿ ಹೋಗಿದೆ. ಕೇವಲ ದಕ್ಷಿಣ ಭಾರತ ಮತ್ತು ಗುಜರಾತಿನಲ್ಲಿ ಮಾತ್ರ ಈ ಪರಂಪರೆ ಜೀವಂತವಾಗಿದೆ.

ಧರ್ಮದ ಸಿದ್ಧಾಂತದ ಸಂಬಂಧದಲ್ಲಿ ಉತ್ತರಭಾರತ ಎಷ್ಟು ಪ್ರಬುದ್ಧವಾಗಿದೆಯೋ ಅಷ್ಟು ದಕ್ಷಿಣಭಾರತ ಆಗಿಲ್ಲ. ಇವತ್ತಿಗೂ ಕೂಡ ಅದರ ಕ್ರಿಯಾಕಾಂಡದ ಮೇಲೆ ಹಿಂದೂ ಧರ್ಮದ ಪ್ರಭಾವವಿದೆ. ಸ್ವಾಧ್ಯಾಯದ ಪ್ರಚಾರವೂ ಆಗಿಲ್ಲ ಮತ್ತು ಸ್ವತಃ ಪೂಜೆ ಮಾಡುವ ಪ್ರಚಾರವೂ ಆಗಿಲ್ಲ. ಪುರೋಹಿತರೇ ಇವುಗಳನ್ನೆಲ್ಲಾ ಮಾಡುತ್ತಾರೆ. ಶ್ರಾವಕರಂತೂ ಹಣ ಕೊಟ್ಟೇ ತಮ್ಮನ್ನು ಕೃತಕೃತ್ಯರಾದೆವೆಂದು ತಿಳಿಯುತ್ತಾರೆ. ಭಟ್ಟಾರಕ ಗಣ ಈ ಕಡೆ ತಮ್ಮ ಗಮನ ಹರಿಸಬೇಕು. ಜನರನ್ನು ಅಜ್ಞಾನಿಗಳನ್ನಾಗಿಟ್ಟು ತಮ್ಮ ಪಾದಪೂಜೆ ಮಾಡಿಸಿಕೊಳ್ಳುತ್ತಿರುವುದರಲ್ಲಿಯೇ ಯಾರ ಕಲ್ಯಾಣವೂ ಇಲ್ಲ. ಲೌಕಿಕ ಪ್ರತಿಷ್ಠೆಯ ಪ್ರಲೋಭನೆಯಲ್ಲಿ ಬೀಳಿಸಿ ಪರಮಾರ್ಥವನ್ನು ಮರೆಯಿಸುವುದರಿಂದ ಭಟ್ಟಾರಕ ಪದಪಿಂಡ ಪ್ರತಿಷ್ಠೆ ಬೆಳೆಯುವುದಿಲ್ಲ. ತಮ್ಮ ಶ್ರಾವಕರು ಶ್ರಾವಕೋಚಿತ ಕ್ರಿಯೆಗಳಲ್ಲಿ ತೊಡಗುವಂತೆ ಮಾಡಬೇಕು. ಉತ್ತರಭಾರತದಿಂದ ಹಣ ತೆಗೆದುಕೊಂಡು ಹೋಗಿ ತಮ್ಮ ತಮ್ಮ ಮಠಗಳನ್ನು ಸಂಪನ್ನ ಮಾಡುವುದರ ಜೊತೆಗೆ ತಮ್ಮ ಶ್ರಾವಕರಲ್ಲಿ ಧಾರ್ಮಿಕ ಜಾಗೃತಿಯನ್ನುಂಟು ಮಾಡುವ ಆವಶ್ಯಕತೆಯಿದೆ.

ಯಾವ ಕಾರಣಕ್ಕಾಗಿ ಭಟ್ಟಾರಕಗಣದ ಪೂಜೆಯಾಗುತ್ತದೆಯೋ ಆ ಕಾರಣಕ್ಕೋಸ್ಕರ ಅವರು ಪಿಂಛ ಮತ್ತು ಕಮಂಡಲದ ಮರ್ಯಾದೆಯ ರಕ್ಷಣೆಯನ್ನು ಮಾಡಬೇಕು. ಒಂದು ವೇಳೆ ಭಟ್ಟಾರಕಗಣ ಅತ್ಯಂತ ಪವಿತ್ರವಾದ ಇವೆರಡು ಉಪಕರಣಗಳನ್ನು ಗ್ರಹಣಮಾಡದೆ ಕೇವಲ ಸಪ್ತಮ ಶ್ರಾವಕರಾಗಿಯೇ ಇದ್ದದ್ದಾದರೆ ಧರ್ಮದ ಮರ್ಯಾದೆಯ ರಕ್ಷಣೆ ವಿಶೇಷವಾಗಿ ಆಗಬಲ್ಲುದು ಎಂಬುದು ನಮ್ಮ ನಿಮ್ಮ ಅಭಿಪ್ರಾಯವಾಗಿದೆ. ಭಟ್ಟಾರಕ ಪದದಲ್ಲಿದ್ದುಕೊಂಡು ಏಳು ಪ್ರತಿಮೆಗಳು ಒಳ್ಳೆಯ ರೀತಿಯಲ್ಲಿ ಫಲ ನೀಡಬಲ್ಲುವು. ಆರಂಭತ್ಯಾಗ, ಪರಿಗ್ರಹತ್ಯಾಗ ಮುಂತಾದವುಗಳು ಫಲಿಸಲಾರವು. ಪಿಂಛ ಮತ್ತು ಕಮಂಡಲಗಳ ಮರ್ಯಾದೆ ನಮ್ಮ ದೃಷ್ಟಿಯಲ್ಲಿ ಬಹಳ ಉನ್ನತವಾದುದಾಗಿದೆ. ಯಾರು ಅವುಗಳನ್ನು ಧಾರಣೆ ಮಾಡಿ ಆ ಮರ್ಯಾದೆಯ ರಕ್ಷಣೆ ಮಾಡುವುದಿಲ್ಲವೋ ಅಂಥವರು ಪಾಪದ ಭಾಗಿಗಳಾಗಬಾರದು !

ಪಿಂಛ ಮತ್ತು ಕಮಂಡಲಧಾರಿಗಳ ವಿದೇಶಯಾತ್ರೆಯ ಬಗ್ಗೆಯೂ ನಮ್ಮ ಆಕ್ಷೇಪವಿದೆ. ಸಪ್ತಮ ಪ್ರತಿಮಾಧಾರಿ ಆನಂದದಿಂದ ಹೋಗಬಹುದು. ಇತ್ತೀಚೆಗೆ ವಿದೇಶಗಳಲ್ಲಿಯೂ ಕೂಡ ಜೈನರಿರುತ್ತಾರೆ. ಆದರೆ ಅವರು ಎಲ್ಲಿಯವರೆಗೆ ಜೈನ

ರಾಗಿದ್ದಾರೆ ಎಂಬುದನ್ನು ಯಾರು ತಿಳಿದ ಕೊಂಡಿದ್ದಾರೆ ನಾವು ನಮ್ಮ ದೇಶದಲ್ಲಿ ಜೈನರ ಸ್ಥಿತಿಯನ್ನು ನೋಡುತ್ತಿದ್ದೇವೆ, ಮತ್ತು ಕೇಳುತ್ತಿದ್ದೇವೆ. ಜೈನರ ಮನೆಗಳಲ್ಲೂ ಮದ್ಯಮಾಂಸಗಳ ಆಹಾರ ನಡೆಯುತೊಡಗಿದೆಯೆಂಬುದಂತೂ ತಲೆಬಿಸಿಮಾಡುವಂತದಾಗಿದೆ. ಇಲ್ಲಿಯೇ ಈ ಸ್ಥಿತಿಯಿರುವಾಗ ಇನ್ನು ಮದ್ಯ-ಮಾಂಸಗಳೇ ಹೆಚ್ಚಾಗಿರುವ ವಿದೇಶಗಳಲ್ಲಿ ಜೈನರು ಎಲ್ಲಿಯವರೆಗೆ ಶುದ್ಧರೂ ನಿರಾಮಿಷ ಭೋಜನ ಮಾಡುವವರೂ ಆಗಿರಬಲ್ಲರು ?

ವಿದೇಶಗಳಲ್ಲಿಯೂ ಕೂಡ ಧರ್ಮ ಪ್ರಚಾರದ ಅವಶ್ಯಕತೆಯಿದೆ. ಆದರೆ ಅಲ್ಲಿಗೆ ಹೋಗುವವರ ಒಂದು ಮರ್ಯಾದೆಯೂ ಸಹ ಇರಬೇಕಾಗುತ್ತದೆ. ನಮ್ಮ ದೃಷ್ಟಿಯಿಂದ ಅಲ್ಲಿ ಪಿಂಛ ಮತ್ತು ಕಮಂಡಲಗಳ ಮರ್ಯಾದೆಯು ರಕ್ಷಣೆಯಾಗುತ್ತಿರುವುದಿಲ್ಲ. ಆದ್ದರಿಂದ ಪಿಂಛ ಮತ್ತು ಕಮಂಡಲಧಾರಿಗಳ ಮೇಲೆ ಪ್ರತಿಬಂಧವಿರಬೇಕು. ವಿದೇಶ ಯಾತ್ರೆಯದೂ ಕೂಡ ತನ್ನದೇ ಆದ ಒಂದು ಆಕರ್ಷಣೆಯನ್ನು ಹೊಂದಿದೆ. ಅದು ಧರ್ಮ ಪ್ರಚಾರದ ಆಕರ್ಷಣೆಗಿಂತಲೂ ಹೆಚ್ಚು ವಿಶೇಷವಾದ ಆಕರ್ಷಣೆಯುಳ್ಳದ್ದಾಗಿದೆಯೆಂದು ನಾವು ತಿಳಿದಿದ್ದೇವೆ. ಆದ್ದರಿಂದ ಧರ್ಮಪ್ರಚಾರದ ಹೆಸರಿನ ಮೇಲೆ ವಿದೇಶಯಾತ್ರೆಯ ಸೌಭಾಗ್ಯ ಪ್ರಾಪ್ತವಾದರೆ ಹೇಳುವುದಾದರೂ ಏನಿದೆ ? ಆದರೆ ಈ ದೃಷ್ಟಿಯಿಂದ ಇದು ಉಚಿತವಲ್ಲ. ಇಂದು ದಕ್ಷಿಣಭಾರತದ ಕ್ಷೇತ್ರಗಳ ಭಟ್ಟಾರಕರಲ್ಲಿ ಇಂಗ್ಲಿಷ್ ಓದು ಬರಹ ಕಲಿತ ಸುಸಂಸ್ಕೃತ ವಿದ್ವಾಂಸ ಯುವಕರಿದ್ದಾರೆ ಅವರಲ್ಲಿ ಯುವಕೋಚಿತ ಉತ್ಸಾಹ ಇರುವುದು ಸ್ವಾಭಾವಿಕವಾಗಿದೆ. ಶಾಸ್ತ್ರಕಾರರು ಈ ರೀತಿ ಹೇಳಿದ್ದಾರೆ—

ಯೌವನ, ಧನಸಂಪತ್ತು, ಪ್ರಭುತ್ವ ಮತ್ತು ಅವಿವೇಕತೆ ಈ ನಾಲ್ಕರಲ್ಲಿ ಒಂದೊಂದೂ ಕೂಡ ಅನರ್ಥದ ಸಲುವಾಗಿ ಆಗುತ್ತದೆ. ಒಂದು ವೇಳೆ ನಾಲ್ಕೂ ಏರ್ಪಟ್ಟರೆ ಹೇಳಬಹುದಾದರೂ ಏನು ? ನಮ್ಮ ಯುವಕ ಭಟ್ಟಾರಕರಲ್ಲಿ ಯೌವನವಿದೆ, ಧನಸಂಪತ್ತಿದೆ. ಪ್ರಭುತ್ವವೂ ಕೂಡ ಇದೆ. ಆದರೆ ನಾವು ಅವರನ್ನು ಅವಿವೇಕಿಗಳೆಂದು ಭಾವಿಸಲಾರೆವು ಆದ್ದರಿಂದ ಅವರು ತಮ್ಮ ವಿವೇಕದಿಂದ ಪ್ರಸಿದ್ಧರಾಗಿ ಜಿನಶಾಸನದ ರಕ್ಷಣೆಯು ಜೊತೆಗೆ ಆತ್ಮರಕ್ಷಣೆಯನ್ನೂ ಸಹ ಮಾಡಬೇಕು. ಆಗ ಭಟ್ಟಾರಕ ಪದದ ಗರಿಮೆ ಸ್ಥಿರವಾಗಿರಬಲ್ಲದು.

—ಕೈಲಾಸಚಂದ್ರಶಾಸ್ತ್ರಿ

ಸಿದ್ಧಾಂತಾಚಾರ್ಯ ಕೈಲಾಸಚಂದ್ರಶಾಸ್ತ್ರಿಗಳು ಹೀಗೆ ತಮ್ಮ ಪತ್ರಿಕೆಯಲ್ಲಿ ವಿದ್ಯಾನಂದರು ಕ್ರಮಹೀನವಾಗಿ ಏಲಾಚಾರ್ಯರಾದುದನ್ನೂ ಮತ್ತು ಭಟ್ಟಾರಕರಲ್ಲಿ ಕೆಲವರು ಪಿಂಛ ಮತ್ತು ಕಮಂಡಲಗಳ ಮರ್ಯಾದೆಯ ರಕ್ಷಣೆ ಮಾಡದೆ ಇರುವುದನ್ನೂ

ಟೀಕಿಸಿ ಬರೆದ ಲೇಖನಗಳನ್ನು ಪ್ರಕಟಿಸಿದಾಗ ಆ ಪತ್ರಿಕೆಯ ಓದುಗರಿಗೆ ನಿಜಸಂಗತಿಗಳು ತಿಳಿದು ಬಂದುವು. ವಿದ್ಯಾನಂದರು ಏಲಾಚಾರ್ಯರೆಂದು ಕರೆಸಿಕೊಂಡುದರ ರಹಸ್ಯ ಬಟ್ಟಬಯಲಾಯಿತು. ಏಲಾಚಾರ್ಯಪದದ ಸ್ಪಷ್ಟವಾದ ಅರ್ಥ ಜನರಿಗೆ ತಿಳಿಯಿತು, ಭಟ್ಟಾರಕಸ್ವಾಮಿಗಳು ಕ್ಷುಲ್ಲಕ ದೀಕ್ಷೆವಹಿಸಿದ್ದರೂ ಹೇಗೆ ಧರ್ಮ ವಿರುದ್ಧವಾಗಿ ನಡೆದು ಕೊಳ್ಳುತ್ತಿದ್ದಾರೆಂಬುದೂ ಜನರಿಗೆ ತಿಳಿಯಿತು. ಈ ಎಲ್ಲಾ ವಾಸ್ತವಾಂಶಗಳು ವಿದ್ಯಾನಂದರು ಮತ್ತು ಅವರ ಅಂಕೆಯಲ್ಲಿರುವ ಭಟ್ಟಾರಕ ಗಣದ ಗಮನಕ್ಕೆ ಬಂದರೂ ಅವರು ಅವುಗಳನ್ನು ಯಥಾರ್ಥ ರೀತಿಯಲ್ಲಿ ತೆಗೆದುಕೊಳ್ಳಲಿಲ್ಲ. ಈ ಲೇಖನಗಳಿಗೆ ಉತ್ತರ ನೀಡುವ ನೈತಿಕಶಕ್ತಿ ವಿದ್ಯಾನಂದರಿಗಾಗಲೀ ಅಥವಾ ಅವರ ಕೃಪಾಪೋಷಿತ ಭಟ್ಟಾರಕ ಗಣಕ್ಕಾಗಲೀ ಬರಲೇ ಇಲ್ಲ ! ಬದಲಾಗಿ ಆ ಲೇಖನಗಳ ವಿರುದ್ಧ ದ್ವೇಷ ಸಾಧಿಸಲಾರಂಭಿಸಿದರು. ಇದ್ದುದನ್ನು ಇದ್ದಂತೆ ಹೇಳಿದರೆ ಎದ್ದು ಬಂದು ಎದೆ ಗೊದ್ದಂತೆ ತಾ. 6–11–1979 ರಂದು ಕೈಲಾಸಚಂದ್ರಶಾಸ್ತ್ರಿಯವರಿಗೆ ಒಂದು ಬೆದರಿಕೆ ಪತ್ರವನ್ನು ಯಾರೋ ಅಗೋಚರರಾಗಿದ್ದುಕೊಂಡು ಬರೆದು ಹಾಕಿದರು. ಈ ಪತ್ರ ಇಂದೂರಿನಿಂದ ಹೋಯಿತು. ಆ ಸಮಯದಲ್ಲಿ ವಿದ್ಯಾನಂದರು ಇಂದೂರಿನಲ್ಲಿಯೇ ಇದ್ದರು. ಪತ್ರ ಕೈಲಾಸ ಚಂದ್ರಶಾಸ್ತ್ರಿಯವರಿಗೆ ತಾ. 13–11–1979 ರಂದು ತಲುಪಿತು. ಪತ್ರದ ಅಕ್ಷರಗಳು ಗುಂಡಾಗಿದ್ದು ದಕ್ಷಿಣಭಾರತದ ಶೈಲಿಯಲ್ಲಿ ಬರವಣಿಗೆಯಿತ್ತು. ಶಾಸ್ತ್ರಿಗಳು ತಾ. 26–11–1979ರ ಜೈನಸಂದೇಶ ಪತ್ರಿಕೆಯಲ್ಲಿ ತಮಗೆ ಅಂಚೆಯ ಮೂಲಕ ಬಂದ ಈ ಬೆದರಿಕೆ ಪತ್ರ[1]ವನ್ನು ಪ್ರಕಟಿಸಿದ್ದಾರೆ. ಪತ್ರ ಹೀಗಿದೆ :

**ಒಂದು ಪತ್ರ**

ಇಂದೂರು
6–11–79

ತಾವು ಯಾವಾಗಲೂ ಬೇರೆಯವರ ನಿಂದೆ ಮಾಡಿ ಲೇಖನ ಬರೆಯುತ್ತೀರಿ. ಈಗ ತಾವು ರಾಜೇಂದ್ರರ ನಿಂದೆ ಮಾಡಿ ಬರೆದಿದ್ದೀರಿ. ಇದೇ ರೀತಿ ಕ್ಷುಲ್ಲಕ ಮನೋಹರ ವರ್ಣಿಯವರ ನಿಂದೆಯನ್ನೂ ಮಾಡಿ ಲೇಖನ ಬರೆದಿದ್ದೀರಿ. ಮತ್ತೆ ಭಟ್ಟಾರಕರ ನಿಂದೆ ಮಾಡಿ ಬರೆದಿದ್ದೀರಿ. ಕೆಲವು ದಿನಗಳ ಹಿಂದೆ ವಾರಣಾಸಿಯ ಪಂಡಿತ್ ಗೋಕುಲ್ ಬಂದಿದ್ದರು. ಅವರು ನಿಮ್ಮ ವಿಚಾರದಲ್ಲಿ ಬಹಳಷ್ಟು ಬರೆದಿರುವ ಟೈಪಾದ ಕಾಗದವನ್ನು ಇಂದೂರಿನಲ್ಲಿ ನಮಗೆ ಕೊಟ್ಟು ಹೋಗಿದ್ದಾರೆ. ನಿಮ್ಮ

---

1. ಈ ಬೆದರಿಕೆ ಪತ್ರರಚನೆಯಲ್ಲಿ ವಿದ್ಯಾನಂದರ ಕೈವಾಡವಿಲ್ಲದೆ ಇಲ್ಲ. ವಿರೋಧಿಗಳನ್ನು ಬೆದರಿಕೆ ಪತ್ರಗಳ ಮೂಲಕ ನಿಷ್ಕ್ರಿಯಗೊಳಿಸಲು ಪ್ರಯತ್ನಿಸುವುದು ಅವರ ಜೀವನ ಮಾರ್ಗಗಳಲ್ಲಿ ಒಂದು ಪ್ರಧಾನ ಮಾರ್ಗವಾಗಿದೆ.

ಗುಟ್ಟನ್ನು ರಟ್ಟು ಮಾಡಿದ ಮೇಲೆಯೇ ನಿಮ್ಮ ಬುದ್ಧಿ ನೆಟ್ಟಗಾಗುತ್ತದೆ ಎಂದು ಭಟ್ಟಾರಕರು ಹೇಳುತ್ತಿದ್ದರು. ನೀವು ದರಬಾರಿಲಾಲ್ ಕೋಠಿಯಾರವರೊಂದಿಗೆ ಅವಮಾನವೀಯ ವ್ಯವಹಾರ ಮಾಡಿದಿರಿ. ಸ್ಯಾದ್ವಾದ ಮಹಾವಿದ್ಯಾಲಯದ ಜಮೀನಿನ ಬಗ್ಗೆ ಆನಂದಮಾರವರ ಜೊತೆ ಕೋರ್ಟಿನಲ್ಲಿ ಹೊಡೆದಾಡಿ ಒಂದು ಲಕ್ಷ ರೂ. ಪೈಸೆಗಳನ್ನು ತಿಂದುಬಿಟ್ಟಿರಿ. ಸಂಸ್ಥೆಯನ್ನು ಹಾಳುಮಾಡಿದಿರಿ. ತಮ್ಮ ಅಭಿನಂದನೆಯ ಸಮಯದಲ್ಲಿ ಒಳಗುಟ್ಟನ್ನು ರಟ್ಟುಮಾಡುವ ಪುಸ್ತಕವನ್ನು ದೆಹಲಿಯಲ್ಲಿ ಹಂಚಲಾಗುತ್ತದೆ. ಸಮಾಜದಲ್ಲಿ ಮತ್ತು ಪಂಡಿತವರ್ಗದಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಭ್ರಷ್ಟರಾದವರು ತಾವೇ ಆಗಿದ್ದೀರಿ.

ತಮ್ಮ ಮಿತ್ರ
ಜೈನ್

ಗುಪ್ತನಾಮದ ಈ ಪತ್ರಕ್ಕೆ ಕೈಲಾಸಚಂದ್ರಶಾಸ್ತ್ರಿಯವರು ತಾ. 26-11-79ರ ಸಂಚಿಕೆಯಲ್ಲಿಯೇ ಬಹಿರಂಗ ಉತ್ತರ ನೀಡಿದರು. ಅದರ ಸಂಗ್ರಹ ಹೀಗಿದೆ :

ಜೈನಸಂದೇಶದ ನವೆಂಬರ್ ಎಂಟನೇ ತಾರೀಖಿನ ಸಂಚಿಕೆಯಲ್ಲಿ 'ಪಿಂಛ ಮತ್ತು ಕಮಂಡಲ' ಎಂಬ ಹೆಸರಿನ ಸಂಪಾದಕೀಯ ಪ್ರಕಾಶಿತವಾಗಿದೆ. ಮೇಲಿನ ಪತ್ರ ಈ ಸಂಪಾದಕೀಯದ ಪ್ರತಿಕ್ರಿಯೆಯೆಂದೇ ಪ್ರತೀತವಾಗುತ್ತದೆ. ಪಂ. ರಾಜೇಂದ್ರ ಕುಮಾರರು ಮತ್ತು ವರ್ಣಿಯವರ ಪ್ರಸ್ತಾಪವನ್ನಂತೂ ಕೇವಲ ಆಲಂಬಿನ ವಿಷಯವನ್ನಾಗಿ ತೆಗೆದುಕೊಂಡಿದ್ದಾರೆ.

ನಮಗೆ ಬಂದಿರುವ ಪತ್ರದ ಲೇಖಕರು ಯಾರು ಎಂಬುದು ನಮಗೆ ತಿಳಿಯದು. ಆದರೆ ಅವರು ದಕ್ಷಿಣದವರು ಮತ್ತು ಸಂಭವತಃ ಮುನಿವಿದ್ಯಾನಂದರ ಜೊತೆಯವರು ಎಂಬುದಂದೂ ನಿಶ್ಚಿತವಾಗಿದೆ. ನಾವು ಮುನಿವಿದ್ಯಾನಂದರ ಏಲಾಚಾರ್ಯ ಪದವಿಯ ವಿರೋಧವಾಗಿ ಲೇಖನ ಬರೆದಿದ್ದೆವು. ಇದಕ್ಕೆ ಅವರ ಜೊತೆಗಾರರಾದ ಯಾರೋ ಕ್ಷುಲ್ಲಕರು ಉತ್ತರ ನೀಡಿದ್ದರು. ಅದಕ್ಕೂ ನಾವು ಉತ್ತರ ನೀಡಿದ್ದೆವು. ಆದರೆ ಅದಕ್ಕೆ ಯಾವ ಪ್ರತ್ಯುತ್ತರವೂ ನಮಗೆ ಸಿಗಲಿಲ್ಲ. ಮೇಲಿನ ಪೂರ್ವನಿಯೋಜಿತ ಪತ್ರ ಏಲಾಚಾರ್ಯ ಪದವಿಗೆ ಸಂಬಂಧಿಸಿದ ಲೇಖನಗಳ ಪ್ರತಿಕ್ರಿಯೆಯೆಂದೇ ನಾವು ತಿಳಿಯಬೇಕಾಗಿದೆ. ನಮ್ಮ ನವೆಂಬರ್ ಎಂಟನೇ ತಾರೀಖಿನ ಲೇಖನದಿಂದಾಗಿ ಮೇಲಿನ ಪತ್ರದ ರೂಪದಲ್ಲಿ ಅದರ ವಿಸ್ಫೋಟ ಮಾಡಿಬಿಟ್ಟಿದ್ದಾರೆ. ಹಾಗಾದರೆ ಭಟ್ಟಾರಕದ್ವಯರೂ ಇಂದೂರಿನಲ್ಲಿಯೇ ಇದ್ದಾರೆಂದಾಗುತ್ತದೆ. ಪತ್ರ ಎಷ್ಟು ಕೆಟ್ಟ ಸ್ವರೂಪದ್ದಾಗಿದೆಯೆಂದರೆ ಶಿಷ್ಟ ಗೃಹಸ್ಥನಾದವನೂ ಸಹ ಹೀಗೆ ಬರೆಯುವುದಕ್ಕೆ ಸ್ವಲ್ಪ ಸಂಕೋಚ ಪಡುತ್ತಾನೆ. ಆದರೆ ನಮ್ಮ ಈ ತ್ಯಾಗಿಗಣ ಪಿಂಛ ಮತ್ತು ಕಮಂಡಲಗಳನ್ನು ಧರಿಸಿಯೂ ಕೂಡ ಇಂತಹ ಕೆಟ್ಟ ಮಾತುಗಳಿಂದ ಆನಂದ ಪಡುತ್ತಾರೆ. ಡಾ॥ ಗೋಕುಲಚಂದ್ರರಂತೂ ಕುಂಡಲಪುರದ ಮೇಳದಲ್ಲಿ ನನ್ನ ವಿರುದ್ಧ ಕರಪತ್ರಗಳನ್ನು

ಹಂಚಿದ್ದಾಗಿದೆ ಮತ್ತು ಅದರ ಪರಿಣಾಮವನ್ನೂ ನೋಡಿದ್ದಾಗಿದೆ. ಈಗ ದಿಲ್ಲಿಯಲ್ಲಿ ನನ್ನ ಸನ್ಮಾನ ಸಮಾರಂಭದ ಸಂದರ್ಭದಲ್ಲಿ ಮಾಡಬೇಕಾದ ವಿರೋಧದ ವ್ಯವಸ್ಥೆಯನ್ನು ಈಗಾಗಲೇ ಇಂದೂರಿನಲ್ಲಿಯೇ ಮಾಡಿಬಿಟ್ಟಿದ್ದಾರೆ. ನನ್ನ ಸನ್ಮಾನ ಸಮಾರಂಭದ ವ್ಯವಸ್ಥಾಪಕರು ಈ ವಿಚಾರವಾಗಿ ಸಾವಧಾನದಿಂದ ಇರಬೇಕಾಗುತ್ತದೆ.

ನನಗೆ ಪತ್ರ ಬರೆದ ಪತ್ರಕಾರರು ತಮ್ಮನ್ನು ನನ್ನ ಮಿತ್ರರೆಂದು ಕರೆದುಕೊಂಡಿರುವುದು ಯಥಾರ್ಥವಾಗಿದೆ ! ಈ ಪತ್ರದ ಮೂಲಕ ತಮ್ಮ ಚಟುವಟಿಕೆಗಳನ್ನು ಅವರು ಪ್ರಕಟಪಡಿಸಿ ನಮಗೆ ಉಪಕಾರವನ್ನೇ ಮಾಡಿದ್ದಾರೆ.

ಈ ಮೊದಲು ಇಂದೂರಿನಲ್ಲಿ ಯಾವಾಗ ಮುನಿವಿದ್ಯಾನಂದರ ಚಾತುರ್ಮಾಸವಾಯಿತೋ ಆಗಲೇ ನನ್ನ ಒಂದು ಸಂಪಾದಕೀಯ ಲೇಖನವನ್ನು ತೆಗೆದುಕೊಂಡು ನನ್ನ ವಿರುದ್ಧ ಬಹಳ ಗಲಾಟೆ ಮಾಡಲಾಗಿತ್ತು. ಈ ಸಮಯದಲ್ಲಿ ಪಂಡಿತ ಪರಮೇಷ್ಠಿದಾಸರ 'ವೀರ' ಪತ್ರಿಕೆಯ ಸಂಪಾದಕೀಯ ಸಂಬಂಧದ ಸಂಪರ್ಕವನ್ನು ನಾನು ಬಹಳ ಸಮಯದವರೆಗೂ ಕಡಿದುಕೊಳ್ಳಬೇಕಾಯಿತು. ಇಂದೂರಿನಲ್ಲಿ ಮುನಿಗಳ ಚಾತುರ್ಮಾಸದಲ್ಲಿ ನನ್ನ ವಿರುದ್ಧ ಪುನಃ ಮಾಡಲಾಗಿರುವ ಪ್ರಚಾರ ನಿಜವಾಗಿಯೂ ದುಃಖದಾಯಕವಾಗಿದೆ.

ನನಗೆ ಪತ್ರ ಬರೆದವರಿಗೆ ಸಲಹೆಯೇನೆಂದರೆ ಡಾ|| ಗೋಕುಲಚಂದ್ರರು ನನ್ನ ವಿರುದ್ಧ ಏನನ್ನು ಬರೆದು ಕೊಟ್ಟು ಹೋಗಿದ್ದಾರೋ ಅದನ್ನು ವಿಚಾರಣೆಗಾಗಿ ಭಾರತ ವರ್ಷೀಯ ದಿಗಂಬರ ಜೈನ ಮಹಾಸಮಿತಿಯ ಅಧ್ಯಕ್ಷ ಸಾಹೂ ಶ್ರೇಯಾಂಸ ಪ್ರಸಾದರಿಗೆ ಬಿಟ್ಟುಬಿಡಿ. ಅವರು ಸ್ಯಾದ್ವಾದ ಮಹಾವಿದ್ಯಾಲಯದ ಅಧ್ಯಕ್ಷರೂ ಸಹಾ ಆಗಿದ್ದಾರೆ.

ಈ ವಿಚಾರದಲ್ಲಿ ಅವರು ಈ ರೀತಿ ಮಾಡದಿದ್ದರೆ, ಇಂದಿನ ದೂಷಿತ ರಾಜರಾಜಕಾರಣದ ಗಾಳಿ ತ್ಯಾಗಿಗಣದ ಮೇಲೆಯೂ ಬೀಸುತ್ತಿದೆ ಎಂದು ವಿದಿತವಾಗುತ್ತದೆ. ಅಲ್ಲದೆ ರಾಜಕಾರಣದ ತರಹ ಧಾರ್ಮಿಕರಂಗವೂ ದೂಷಿತವಾಗಿ ಹೋಗಿದೆ. ಇದರಲ್ಲೂ ಸಹ ಭ್ರಷ್ಟಾಚಾರ ನುಸುಳಿಬಿಟ್ಟಿದೆ ಎಂದು ತಿಳಿಯಬೇಕಾಗುತ್ತದೆ.

—ಕೈಲಾಸಚಂದ್ರಶಾಸ್ತ್ರಿ
ಸಂಪಾದಕ 'ಜೈನಸಂದೇಶ'

ಉತ್ತರ ಭಾರತದಲ್ಲಿ 'ಏಲಾಚಾರ್ಯ' ಪದವಿಗೆ ಇಷ್ಟೆಲ್ಲಾ ವಿರೋಧ ವಿದ್ವಾಂಸ ವರ್ಗದಿಂದ ಪ್ರಕಟವಾಯಿತು. ಈ ವಿರೋಧ ಕೇವಲ ವಿರೋಧಕ್ಕಾಗಿ ಎಂಬುದಾಗಿರದೆ ಜೈನಧರ್ಮದ ಉಜ್ವಲವಾದ ಪರಂಪರೆಯನ್ನು ಸಂರಕ್ಷಿಸುವ ಸದುದ್ದೇಶದಿಂದ ಕೂಡಿದ ವಿರೋಧವಾಗಿದೆ. ವಿರೋಧಮಾಡಿದವರು 'ಏಲಾಚಾರ್ಯ' ಪದವಿಯನ್ನು ವಿದ್ಯಾನಂದರು ಹೇಗೆ ಅಕ್ರಮ ವಿಧಿವಿಧಾನಗಳಿಂದ ಪಡೆದಿದ್ದಾರೆ ಎಂಬುದನ್ನು ಶಾಸ್ತ್ರಾಧಾರಗಳ ಮೂಲಕ ವಿವರಿಸಿದ್ದಾರೆ.

ವಿದ್ಯಾನಂದರು ಜೈನಧರ್ಮಕ್ಕೆ ಅನುಗುಣವಾಗಿಯೇ ದೇಶಭೂಷಣರಿಂದ ಮುನಿದೀಕ್ಷೆ ತೆಗೆದುಕೊಂಡಿರುವವರು. ಇವರು ಮುನಿಯಾದ ಮೇಲೆ ಜೈನಶಾಸ್ತ್ರಗಳಲ್ಲಿ ಬರುವ ಹದಿನಾರು ಕಾರಣಭಾವನೆಗಳ ವಿಚಾರವಾಗಿ ಬೇಕಾದಷ್ಟು ಸಂದರ್ಭಗಳಲ್ಲಿ ಉಪದೇಶ ನೀಡಿದ್ದಾರೆ. ಇದರಲ್ಲಿ ಹನ್ನೊಂದನೆಯ ಭಾವನೆ ಯಾದ 'ಆಚಾರ್ಯ ಭಕ್ತಿ'ಯ ವಿಚಾರವಾಗಿಯೂ ಇವರು ಸಾಕಷ್ಟು ಪರೋಪದೇಶ ಮಾಡಿದ್ದಾರೆ. 1971 ನೇ ವರ್ಷದಲ್ಲಿ ಒಮ್ಮೆ ಇವರು ಧಾರ್ಮಿಕ ಸಭೆಯೊಂದರಲ್ಲಿ ಮಾತನಾಡುತ್ತಾ "ಆಚಾರ್ಯರು ಎಂದೂ ಹೊಸ ಪಂಥವನ್ನು ಸೃಷ್ಟಿಸುವುದಿಲ್ಲ.. .......ಕೆಲವರಂತೂ ತಮ್ಮನ್ನು ತಾವೇ ಆಚಾರ್ಯರೆಂದು ಘೋಷಿಸಿಕೊಳ್ಳುತ್ತಾರೆ...ಆದರೆ ಇಂಥವರು ಯುವಕ ಟೋಳಿಗೆಯನ್ನು ಮಿಥ್ಯಾಮಾರ್ಗಕ್ಕೆ ತಳ್ಳುವ್ವಾರೆ. ಯುವಕರಲ್ಲಿ ಲಂಪಟತನ ಪರಿಗ್ರಹ ಬುದ್ಧಿ ಹಿಗ್ಗುವಂತೆ ಮಾಡಿದ್ದಾರೆ" ಎಂದು ಮುಂತಾಗಿ ಹೇಳಿ ಆಚಾರ್ಯ ಪರಂಪರೆಯಲ್ಲಿ ನಡೆದಿರುವ ಅಕ್ರಮಗಳ ಪಟ್ಟಿ ಮಾಡಿದ್ದರು. ಈಗ ಉತ್ತರ ಭಾರತದ ಪತ್ರಿಕೆಗಳು ವಿದ್ಯಾನಂದರೇ ಜೈನಶಾಸ್ತ್ರಕ್ಕೆ ವಿರುದ್ಧವಾಗಿ ಅಕ್ರಮ ವಿಧಾನಗಳಿಂದ ಜನಗಳ ಮೂಲಕ ಏಲಾಚಾರ್ಯ ಎಂದು ಘೋಷಿಸಿಕೊಂಡಿರುವುದನ್ನು ತರ್ಕಬದ್ಧ ವಾಗಿ ಬಯಲು ಮಾಡಿದುವು. ಇದಕ್ಕೆ ವಿದ್ಯಾನಂದರು ಉತ್ತರ ಕೊಡುವ ಗೋಜಿಗೇ ಹೋಗಿಲ್ಲ. ಈ ವಿಚಾರಗಳನ್ನೆಲ್ಲಾ ಅವರು ತಿಳಿದಿದ್ದರೂ ಏನೂ ತಿಳಿಯದವರಂತೆ ನಟಿಸುತ್ತಿದ್ದಾರೆ. ಬೇರೆಯವರು ಮಾಡುವ ತಪ್ಪು ಅದು ಹೇಗಿದ್ದರೂ ತಪ್ಪು! ತಾವು ಮಾಡುವ ತಪ್ಪು ಅದು ಖಚಿತವಾಗಿ ಗುರುತರವಾದ ತಪ್ಪೇ ಆಗಿದ್ದರೂ ಅದು ಸರಿ ಎಂಬುದು ವಿದ್ಯಾನಂದರ ಮನೋಧರ್ಮವಾಗಿದೆ. ಈ ಧರ್ಮಬಾಹಿರ ಪ್ರವೃತ್ತಿ ವಿದ್ಯಾನಂದರಲ್ಲಿರುವುದರಿಂದಲೇ, ಯಾರಾದರೂ ಅವರ ಕಪಟತನವನ್ನು ಬಯಲು ಮಾಡಿದಾಗ ಅಂಥವರಿಗೆ ಗೋಪ್ಯ ಮೂಲಗಳಿಂದ ಬೆದರಿಕೆಯಪತ್ರಗಳು ಮತ್ತು ಅಶ್ಲೀಲ ಪತ್ರಗಳು ಹೋಗುತ್ತವೆ.

**ಅಧ್ಯಾಯ : ಇಪ್ಪತ್ತೆರಡು**

# ಕರ್ನಾಟಕದಲ್ಲಿ 'ಏಲಾಚಾರ್ಯ' ಪದವಿಗೆ ಪ್ರಕಟವಾದ ವಿರೋಧ

ವಿದ್ಯಾನಂದರು ನವೆಂಬರ್ 78ರಲ್ಲಿ ದೆಹಲಿಯ ಜನರನ್ನು ನಯವಾಗಿ ವಂಚಿಸಿ 'ಏಲಾಚಾರ್ಯ' ರೆಂದು ಕರೆಸಿಕೊಂಡ ಮೇಲೆ ಕರ್ನಾಟಕದಲ್ಲಿ ಅವರ ವಿರುದ್ಧ ತಕ್ಷಣದ

ಪ್ರತಿಕ್ರಿಯೆಯೇನು ಕಂಡುಬರಲಿಲ್ಲ. ಈ ಪದವಿ ಪಡೆದ ಕ್ರಮದ ವಿವರ ಜನಗಳಿಗೆ ತಿಳಿಯದುದು ಮತ್ತು ಜೈನಗ್ರಂಥಗಳ ಸ್ವಾಧ್ಯಾಯದ ಬಗೆಗೆ ಇರುವ ತೀವ್ರ ಅನಾಸಕ್ತಿ ಇದಕ್ಕೆ ಕಾರಣ.

1979ನೇ ವರ್ಷದ ಆರಂಭದ ದಿನಗಳಲ್ಲಿ ಶ್ರವಣಬೆಳಗೊಳದಲ್ಲಿ ಈ ವಿಷಯದ ಬಗ್ಗೆ ಒಂದು ಘಟನೆ ನಡೆಯಿತು. ಉತ್ತರ ಭಾರತದ ತರುಣ ಜೈನವಿದ್ವಾಂಸರೊಬ್ಬರು ಸಂಶೋಧನಾರ್ಥವಾಗಿ ಶ್ರವಣಬೆಳಗೊಳದಲ್ಲಿ ಬಿಡಾರ ಹೂಡಿದ್ದರು. ಒಮ್ಮೆ ಅವರು ಮಠಾಧಿಪತಿಗಳಾದ ಚಾರುಕೀರ್ತಿಗಳೊಂದಿಗೆ ಈ ಏಲಾಚಾರ್ಯ ಪದವಿಯ ವಿಚಾರವಾಗಿ ಚರ್ಚೆ ಮಾಡಿ ವಿದ್ಯಾನಂದರು ಜನರಿಂದ ಪದವಿ ಪಡೆದುದು ಧರ್ಮಸಮ್ಮತವಲ್ಲವೆಂದು ಪ್ರತಿಭಟಿಸಿದರು. ಚಾರುಕೀರ್ತಿಗಳು ವಿದ್ಯಾನಂದರ ಆಪ್ತವರ್ಗದಲ್ಲಿ ಒಬ್ಬರಾದುದರಿಂದ ಈ ಪ್ರತಿಭಟನೆ ಅವರ ಮುಂದೆ ಬಂತು. ಈ ಪ್ರತಿಭಟನೆ ಬಂದ ಎರಡು ಮೂರು ದಿನಗಳೊಳಗಾಗಿ ಪುಂಡರ ಗುಂಪೊಂದು ಈ ವಿದ್ವಾಂಸರು ಇಳಿದುಕೊಂಡಿದ್ದ ಬಾಡಿಗೆ ಮನೆಗೆ ಮುತ್ತಿಗೆ ಹಾಕಿ ಅವರನ್ನು ಅವಾಚ್ಯಶಬ್ದಗಳಿಂದ ನಿಂದಿಸಿ ಪ್ರಾಣಾಪಾಯದ ಬೆದರಿಕೆ ಹಾಕಿತು. ವಿದ್ವಾಂಸರು ಈ ಘಟನೆಯಿಂದ ಭೀತರಾಗಿ ತಮ್ಮ ಶ್ರವಣಬೆಳಗೊಳದ ವಾಸ್ತವ್ಯವನ್ನು ತೆರವು ಮಾಡಿದರು. ಅವರ ಸಂಶೋಧನೆಯ ಕಾರ್ಯ ಅರ್ಧಕ್ಕೇ ನಿಂತಿತು. ಈ ಘಟನೆ ಶ್ರವಣಬೆಳಗೊಳಕ್ಕೆ ಮಾತ್ರ ಸೀಮಿತವಾಗಿತ್ತು. ಹೆಚ್ಚು ಪ್ರಚಾರ ಪಡೆಯಲಿಲ್ಲ.

ವಿದ್ಯಾನಂದರು 1980ರಲ್ಲಿ ಕರ್ನಾಟಕವನ್ನು ಪ್ರವೇಶಿಸಿದ ನಂತರ ಈ ಏಲಾಚಾರ್ಯ ಪದದ ಉಪಯೋಗ ವ್ಯಾಪಕವಾಗಿ ನಡೆಯತೊಡಗಿತು. ಈ ಪದದ ಬಗೆಗೆ ಕುತೂಹಲ ತಾಳಿದ ಶಿವಮೊಗ್ಗದ ಚಂದ್ರಭಾನು ಎಂಬುವರು, ಬೆಂಗಳೂರಿನಿಂದ ಪ್ರಕಟವಾಗುವ 'ಪ್ರಜಾವಾಣಿ' ದಿನಪತ್ರಿಕೆಯ ವಾಚಕರವಾಣಿ ವಿಭಾಗದಲ್ಲಿ ತಾ. 6-12-1980 ರಂದು "ಏಲಾಚಾರ್ಯ ಪದದ ನಿಷ್ಪತ್ತಿ ಹೇಗೆ" ಎಂಬ ಪ್ರಶ್ನೆ ಕೇಳಿದರು. ಅದರ ವಿವರ ಹೀಗಿದೆ :

"ಮಾನ್ಯರೆ, ಫೆಬ್ರವರಿ 81ರಲ್ಲಿ ನಡೆಯಲಿರುವ ಜಗದ್ವಿಖ್ಯಾತ ಶ್ರೀ ಗೋಮಟೇಶ್ವರ ವಿಗ್ರಹ ನಿರ್ಮಾಣದ ಸಹಸ್ರಮಹೋತ್ಸವದ ಕಾರ್ಯಕ್ರಮಗಳಲ್ಲಿ ಭಾಗಿಗಳಾಗಲು ಪೂಜ್ಯ ವಿದ್ಯಾನಂದ ಮುನಿಗಳು ಮಂಗಳವಿಹಾರ ಯಾತ್ರೆ ಮಾಡಿ ಈಗಾಗಲೇ ಶ್ರವಣಬೆಳಗೊಳಕ್ಕೆ ಬಂದಿರುವುದು ಸರಿಯಷ್ಟೇ. ಈ ಮುನಿಗಳನ್ನು ಏಲಾಚಾರ್ಯರೆಂದು ಕರೆಯಲಾಗುತ್ತಿದೆ. ಏಲಾಚಾರ್ಯರೆಂದರೆ ಏನು ? ಆ ಪದದ ನಿಷ್ಪತ್ತಿ ಹೇಗೆ ? ವಿದ್ಯಾನಂದ ಮುನಿಗಳಿಗೆ ಅದು ಹೇಗೆ ಅನ್ವಯಿಸುತ್ತದೆ? ಎಂದಿನಿಂದ ಅವರನ್ನು ಹಾಗೆ ಕರೆಯಲಾಗುತ್ತಿದೆ ಎಂಬ ವಿವರಗಳನ್ನು ತಿಳಿದವರು ವಿವರಿಸುವರೆ ?"

ಪ್ರಜಾವಾಣಿ ಪತ್ರಿಕೆಗೆ ತಿಳಿದವರಾರೂ ಉತ್ತರ ಬರೆದು ಕಳಿಸಿದಂತೆ ಕಂಡು

ಬರಲಿಲ್ಲ. ಇದೇ ಚಂದ್ರಭಾಸುರವರು ಮಣಿಪಾಲದಿಂದ ಪ್ರಕಟವಾಗುವ 'ಉದಯವಾಣಿ' ದಿನಪತ್ರಿಕೆಯಲ್ಲಿ ಮೇಲಿನಂತೆಯೇ ಪ್ರಶ್ನೆ ಕೇಳಿದರು. ತಾ. 3-2-1981ರ ಸಂಚಿಕೆಯಲ್ಲಿ ಇವರ ಪತ್ರ ಪ್ರಕಟವಾಯಿತು. ಉದಯವಾಣಿ ಪತ್ರಿಕೆಯ ತಾ. 10-2-81ರ ಸಂಚಿಕೆಯಲ್ಲಿ ಚಿಕ್ಕಮಗಳೂರಿನ ಚಂದ್ರರಾಜಶಾಸ್ತ್ರಿ ಎಂಬುವರು 'ಏಲಾಚಾರ್ಯ ಪದವಿ ಮತ್ತು ವಿದ್ಯಾನಂದ ಮುನಿಗಳು' ಎಂಬ ಶೀರ್ಷಿಕೆಯಲ್ಲಿ ಮೇಲಿನ ಪ್ರಶ್ನೆಗೆ ಉತ್ತರ ನೀಡಿದರು. ಅವರು ನೀಡಿರುವ ಉತ್ತರ ಹೀಗಿದೆ :

## ಏಲಾಚಾರ್ಯ ಪದವಿ ಮತ್ತು ವಿದ್ಯಾನಂದ ಮುನಿಗಳು

ಏಲಾಚಾರ್ಯ ಎಂಬ ಪದದ ನಿಷ್ಪತ್ತಿ ಮತ್ತು ಅರ್ಥ ವಿವರಣೆ ಹೀಗಿದೆ :

ಏಲ ಮತ್ತು ಆಚಾರ್ಯ ಎಂಬೆರಡು ಪದಗಳು ಸೇರಿ ಏಲಾಚಾರ್ಯ ಎಂದಾಗಿದೆ. ಏಲ ಎಂಬ ಪ್ರಾಚೀನ ಕನ್ನಡ ಪದದ ಅರ್ಥ ಏಲಕ್ಕಿ ಎಂದು. ಕಾಡಾನೆಗಳು ವಾಸಿಸುವ ದಟ್ಟಡವಿಯಲ್ಲಿ ಏಲ ಬೆಳೆಯುತ್ತಿದ್ದುದರಿಂದ, ಅದು ಆನೆಗಳ ಅಕ್ಕಿ ಎನಿಸಿಕೊಂಡು ಏಲ ಮತ್ತು ಅಕ್ಕಿ ಎರಡೂ ಒಂದುಗೂಡಿ ಈಗಿನ ರೂಪ ಏಲಕ್ಕಿ ಎಂದಾಗಿದೆ. ಆಚಾರ್ಯ ಎಂದರೆ ಜೈನ ದರ್ಶನದಂತೆ ಸಾಧಕರಲ್ಲಿ ಸರ್ವ ಸಾಧುಗಳು, ಉಪಾಧ್ಯಾಯರು, ಆಚಾರ್ಯರು, ಅರ್ಹಂತರು ಮತ್ತು ಸಿದ್ಧರು ಎಂಬ ಐದು ಆರೋಹಣ ಹಂತಗಳಿವೆ. ಇವನ್ನೇ ಪಂಚಪರಮೇಷ್ಠಿಗಳೆನ್ನುತ್ತಾರೆ. ಇವುಗಳಲ್ಲಿ ನಡುವಿನ ಹಂತ ಆಚಾರ್ಯ ಪದವಿ. ಸಿದ್ಧಪದವೇ ಮೋಕ್ಷ ಪದವೆನಿಸಿಕೊಳ್ಳುತ್ತದೆ. ಆಚಾರ್ಯರಾದವರು ಉಪವಾಸ ಶ್ರದ್ಧೆ, ತಪ್ಪಿಗೆ ಪ್ರಾಯಶ್ಚಿತ್ತ ವಿಧಿಸಿಕೊಳ್ಳುವಿಕೆ, ಕ್ಷಮಾಗುಣ, ನಿಷ್ಕಾಪಟ್ಯ, ಸಮತೆ, ಶುದ್ಧ ಚಾರಿತ್ರ್ಯ, ಮುಂತಾದ ಮೂವತ್ತಾರು ಗುಣಗಳನ್ನು ಪೂರ್ಣವಾಗಿ ಪರಿಪಾಲಿಸಬೇಕು.

ಸಮಯಸಾರ, ಪಂಚಾಸ್ತಿಕಾಯ ಮುಂತಾದ ಮಹೋನ್ನತ ಗ್ರಂಥಗಳನ್ನು ರಚಿಸಿದ, ಒಂದನೇ ಶತಮಾನದಲ್ಲಿದ್ದ ಕುಂದ ಕುಂದಾಚಾರ್ಯರಿಗೆ ಏಲಾಚಾರ್ಯ ಎಂಬ ಪರ್ಯಾಯ ನಾಮವಿದೆ. ಆ ಹೆಸರು ಬರಲು ಕಾರಣವಾದ ಒಂದು ದಂತಕಥೆ ಹೀಗಿದೆ. ಆಚಾರ್ಯರಿಗೆ ತತ್ವದಲ್ಲಿ ಸಂದೇಹವುಂಟಾದಾಗ ವಿದೇಹ ಕ್ಷೇತ್ರಕ್ಕೆ ಹೋಗಿ ಅಲ್ಲಿ ಸೀಮಂಧರ ತೀರ್ಥಂಕರರಿಂದ ಸಂದೇಹ ಪರಿಹರಿಸಿಕೊಂಡರಂತೆ, ಆ ಕ್ಷೇತ್ರದ ನಿವಾಸಿಗಳ ದೇಹ ಪ್ರಮಾಣದ ಮುಂದೆ ಇವರ ದೇಹ ಏಲದ ಹಾಗೆ ಕಂಡದ್ದರಿಂದ ಅಲ್ಲಿಯವರು ಇವರನ್ನು ಏಲಾಚಾರ್ಯರೆಂದು ಕರೆದರಂತೆ.

ಮಹಾವೀರ ತೀರ್ಥಂಕರ ಮತ್ತು ಗೌತಮ ಗಣಧರರು ಆದಮೇಲೆ ಮೂರನೇ ಸ್ಥಾನದಲ್ಲಿ ಕುಂದ ಕುಂದಾಚಾರ್ಯರನ್ನು ಬರಹಗಳಲ್ಲಿ ಉಲ್ಲೇಖಿಸುವುದು ಸಂಪ್ರದಾಯವಾಗಿದೆ. ಇಂತಹ ಉನ್ನತ ಸ್ಥಾನಮಾನ ಪಡೆದಿದ್ದವರ ಮಹಿಮೆಯನ್ನು ಕೊಂಡಾಡು

ವುದು ಮೇಲಿನ ದಂತ ಕಥೆಯ ಮುಖ್ಯ ಉದ್ದೇಶವಾಗಿದೆ. ಕುಂದ ಕುಂದಾಚಾರ್ಯರ ನಂತರ 'ಧವಳ' ಗ್ರಂಥ ರಚಿಸಿದ, ವೀರ ಸೇನಾಚಾರ್ಯರ ಗುರುಗಳಾದ ಏಲಾಚಾರ್ಯ ರೆಂಬ ಹೆಸರಿನವರೊಬ್ಬರು ಕಾಣಸಿಗುತ್ತಾರೆ. ಈಗ ಮೂರನೇ ಏಲಾಚಾರ್ಯರನ್ನಾಗಿ ವಿದ್ಯಾನಂದ ಮುನಿಗಳನ್ನು ಹೆಸರಿಸಲಾಗುತ್ತಿದೆ. ತಾ. 17-11-1978ರಲ್ಲಿ ದೆಹಲಿ ಯಲ್ಲಿ ನಡೆದ ಸಮಾರಂಭವೊಂದರಲ್ಲಿ ಕೆಲವು ಆಪ್ತರಾದ ಶಿಷ್ಯರು ಈ ಆಚಾರ್ಯ ಪದವಿಯನ್ನು ನೀಡಿದ್ದಾರೆ. ವಿದ್ಯಾನಂದರು ಅಭಿನವ ಕುಂದ ಕುಂದರೆಂಬ ಭಾವನೆ ಪದವಿ ಪ್ರದಾನ ಮಾಡಿದವರಲ್ಲಿ ಬಹುಶಃ ಇದ್ದಿರಬಹುದು.

ಶಾಸ್ತ್ರ ಪದ್ಧತಿಯಂತೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸಾಧಕ ಸ್ಥಾನದ ಮೇಲಿನ ಪದ ಪಡೆಯುವವರು, ತಮಗಿಂತ ಮೇಲಿನ ಸ್ಥಾನದಲ್ಲಿರುವವರಿಂದ ಅದನ್ನು ಸ್ವೀಕರಿಸುವುದು ನೈಜವೂ ಧರ್ಮವೂ ಆದ ಸಂಪ್ರದಾಯ, ಇದಕ್ಕೆ ಅನುಗುಣವಾಗಿಯೇ ವಿದ್ಯಾನಂದರು 1963ರಲ್ಲಿ ಆಚಾರ್ಯರತ್ನ ಪೂಜ್ಯ ದೇಶಭೂಷಣ ಮುನಿಗಳಿಂದ ದಿಗಂಬರ ದೀಕ್ಷೆಯನ್ನು ಪಡೆದರು. 1974ರಲ್ಲಿ ಪುನಃ ತಮ್ಮ ದೀಕ್ಷಾಚಾರ್ಯರಿಂದಲೇ ಉಪಾಧ್ಯಾಯ ಮುನಿ ಪದವನ್ನು ಪಡೆದರು. ಆದರೆ ಈ ಪಾಲಿತ ಸತ್ಸಂಪ್ರದಾಯಕ್ಕೆ ವಿರುದ್ಧವಾಗಿ 1978 ರಲ್ಲಿ ಶಿಷ್ಯ ಸಮೂಹದಿಂದ ಆಚಾರ್ಯ ಪದವಿಯನ್ನು ವಿದ್ಯಾನಂದರು ಅನುಮೋದಿಸಿ ವಿವಾದಾಸ್ಪದ ಆಚಾರ್ಯರೆನಿಸಿದ್ದಾರೆ. ದೆಹಲಿ ಸಮಾರಂಭ ಶಿಷ್ಯರೆಲ್ಲಾ ಸೇರಿ ಗುರುವಿಗೆ ಡಾಕ್ಟರೇಟ್ ಕೊಟ್ಟಂತಾಗಿದೆ. ಉತ್ತರ ಭಾರತದ ಪತ್ರಿಕೆಗಳಲ್ಲಿ ಈ ವಿಚಾರವಾಗಿ ಸಾಕಷ್ಟು ಚರ್ಚೆ ನಡೆದಿದೆ.

ಮುನಿ ಧರ್ಮ ಪಾಲನೆಯಲ್ಲಿ ಶಾಸ್ತ್ರ ಗ್ರಂಥಗಳನ್ನು ಮೀರಿ ತಮ್ಮದೇ ಆದ ದೃಷ್ಟಿಕೋನದಿಂದಾಗಿ ಸಾಕಷ್ಟು ಶಿಥಿಲಾಚಾರವನ್ನು ಇವರು ಅನುಸರಿಸುತ್ತಿರುವುದು, ಕೆಲವು ಸಾರ್ವಜನಿಕ ಭಾಷಣಗಳಲ್ಲಿ ವಿವಾದಾಸ್ಪದ ಪ್ರಸ್ತಾಪಗಳನ್ನು ಮಾಡುತ್ತಿರುವುದು ಮತ್ತು ಶಿಷ್ಯರು ಕೊಟ್ಟ ಪದವಿಯನ್ನು ಅನುಮೋದಿಸಿರುವುದು ಮುಂತಾದವುಗಳಿಂದಾಗಿ ಏಲಾಚಾರ್ಯ ಪದ ಶ್ರೀ ವಿದ್ಯಾನಂದ ಮುನಿಗಳಿಗೆ ನಿಜವಾಗಿಯೂ ಅನ್ವಯಿಸುವುದಿಲ್ಲ ಎಂಬುದು ವಿದ್ವಾಂಸರೆಲ್ಲರ ಅಭಿಪ್ರಾಯ. ಬಹುಶಃ ವಿದ್ಯಾನಂದರ ಆಪ್ತವಲಯ ಅವರಿಗೆ ಹೆಚ್ಚು ಪ್ರಚಾರವನ್ನು ಕೊಡುವ ಏಕೈಕ ಉದ್ದೇಶದಿಂದ ಅವರನ್ನು ಏಲಾ ಚಾರ್ಯರೆಂದು ಕರೆಯುತ್ತಿರಬಹುದು. ಕೆಲವು ಅತ್ಯಂತ ಆಪ್ತರಾದ ಹಾಗೂ ಬಹಳ ಬೇಕಾದವರಾದ ಶಿಷ್ಯರು ಹೀಗೆ ಅಕ್ರಮವಾಗಿ ದಯಪಾಲಿಸಿರುವ ಈ 'ಏಲಾಚಾರ್ಯ' ಪದವಿ ತಮಗೆ ಒಪ್ಪಿಗೆಯೇ ? ಎಂಬುದದನ್ನು ಶ್ರೀ ವಿದ್ಯಾನಂದ ಮುನಿಗಳೇ ಸ್ವತಃ ಸಾರ್ವಜನಿಕರಿಗೆ ವಿವರಿಸಬೇಕು.

ಚಿಕ್ಕಮಗಳೂರು

ಚಂದ್ರರಾಜ ಶಾಸ್ತ್ರಿ

ಮೇಲಿನ ಲೇಖನ ಪತ್ರಿಕೆಯಲ್ಲಿ ಪ್ರಕಟವಾದ ಸಂದರ್ಭದಲ್ಲಿ ಹೆಚ್ಚು ಕಡಿಮೆ ಅದೇ ಸಮಯದಲ್ಲಿ ಚಿತ್ರದುರ್ಗದ ಆದಿನಾಥ ಬಾಹುಬಲಿ ಉಪಾಧ್ಯೆ ಮತ್ತು ಸಿ. ಎಸ್. ಬ್ರಹ್ಮಸೂರಯ್ಯ ಎಂಬಿಬ್ಬರು 'ವಿವಾದಾಸ್ಪದ ಮುನಿ ವಿದ್ಯಾನಂದ' ಎಂಬ ಕಿರು ಪುಸ್ತಕವನ್ನು ಮುದ್ರಿಸಿ ಅಂಚೆಯ ಮೂಲಕ ಅನೇಕರಿಗೆ ಹಂಚಿದರು. ಪುಸ್ತಕದಲ್ಲಿ ಪ್ರಕಟಣೆಯ ದಿನಾಂಕ 1-2-1981 ಎಂದಿದೆ. ಮುದ್ರಣಾಲಯದ ಹೆಸರಾಗಲೀ ಅಥವಾ ಲೇಖಕರುಗಳ ಪೂರ್ಣ ವಿಳಾಸಗಳಾಗಲೀ ಅಲ್ಲಿಲ್ಲ. ಈ ಪುಸ್ತಕ ವಿದ್ಯಾನಂದರ ಮುನಿಚಾರಿತ್ರ್ಯದ ಅತಿಚಾರಗಳನ್ನು ನೇರವಾಗಿ ಪ್ರಸ್ತಾಪಿಸಿ ಕಟುವಾಗಿ ಟೀಕಿಸಿದೆ. ವಿದ್ಯಾನಂದರ ಆಚಾರ-ವಿಚಾರಗಳಿಗೆ ಇರುವ ಅಂತರವನ್ನು ಬಹಿರಂಗಪಡಿಸಿದೆ. ಜಿ. ಬ್ರಹ್ಮಪ್ಪನವರು ಬರೆದಿರುವ 'ಮುನಿವಿದ್ಯಾನಂದ' ಪುಸ್ತಕಕ್ಕೆ ಪ್ರತಿಕ್ರಿಯೆ ತೋರುತ್ತಾ ಈ ಪುಸ್ತಕದ ಬರವಣಿಗೆ ಆರಂಭವಾಗಿದೆ. ಈ ಕಿರುಪುಸ್ತಕದಲ್ಲಿ 'ಏಲಾಚಾರ್ಯ ಕಿರೀಟ ಧಾರಣೆ' ಎಂಬ ಉಪಶೀರ್ಷಿಕೆಯ ಅಡಿಯಲ್ಲಿ ಲೇಖಕರಿಬ್ಬರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಮನೋಜ್ಞವಾಗಿವೆ ; ವಿಚಾರಪೂರ್ಣವಾಗಿವ ; ವಿಡಂಬನಾತ್ಮಕವಾಗಿವೆ ; ಮತ್ತು ತರ್ಕಬದ್ಧವಾಗಿವೆ. ಆ ಭಾಗವನ್ನು ಇಡಿಯಾಗಿ ಇಲ್ಲಿ ಕೊಟ್ಟಿದೆ :

## ಏಲಾಚಾರ್ಯಕಿರೀಟಧಾರಣೆ

ವಿದ್ಯಾನಂದರಿಗೆ ಶ್ರಾವಕ ಜನರು ಕೊಟ್ಟಿರುವ ಏಲಾಚಾರ್ಯ ಪದವಿಯನ್ನು ಜಿ. ಬ್ರಹ್ಮಪ್ಪನವರು ಸಮಂಜಸವೆಂದು ಕರೆದಿರುವುದು ಅತ್ಯಂತ ವಿಷಾದನೀಯ. ಆಚಾರ್ಯ ಪದವಿ ಸ್ವೀಕಾರದ ವಿಧಿವಿಧಾನಗಳ ವಿಚಾರವಾಗಿ ವಿದ್ಯಾನಂದರೇ ಸ್ವತಃ ದಿನಾಂಕ 20-8-71 ರಂದು ಇಂದೂರಿನ ಪ್ರವಚನ ಸಭೆಯೊಂದರಲ್ಲಿ ಹೀಗೆ ಹೇಳಿದ್ದಾರೆ : "ಕೆಲವರಂತೂ ತಮ್ಮನ್ನು ತಾವೇ ಆಚಾರ್ಯರೆಂದು ಘೋಷಿಸಿಕೊಳ್ಳುವರು. ಎಷ್ಟೋ ಜನ ತಮ್ಮನ್ನು ತಾವೇ ಆಚಾರ್ಯರೆಂದುಕೊಂಡರು. ಆದರೆ ಇಂಥವರು ಯುವಕ ಪೀಳಿಗೆಯನ್ನು ಮಿಥ್ಯಾವರ್ಗಕ್ಕೆ ತಳ್ಳಿರುವರು. ಯುವಕರಲ್ಲಿ ಲಂಪಟತನ ಹೆಚ್ಚುವಂತೆ, ಪರಿಗ್ರಹಬುದ್ಧಿ ಹಿಗ್ಗುವಂತೆ ಪ್ರೇರೇಪಿಸುತ್ತಿರುವರು. ನಿಜವಾದ ಆಚಾರ್ಯರು ಮೊದಲು ತಾವು ಪರಿಗ್ರಹಗಳನ್ನು ತೊರೆಯುವರು. ಅನಂತರ ಜನರನ್ನು ಪರಿಗ್ರಹದಿಂದ ದೂರವಿಡಲು ಪ್ರಯತ್ನಿಸುವರು."

ಈ ಮಾತುಗಳ ಅರ್ಥ ಆಚಾರ್ಯರಾದವರೇ ಮುನಿಗಳಿಗೆ ಆಚಾರ್ಯ ಪದವಿ ನೀಡಬೇಕು ಎಂದಾಗುತ್ತದೆ. ಈಗ ಆಚಾರ್ಯರೆಂದು ಕರೆಸಿಕೊಂಡಿರುವ ವಿದ್ಯಾನಂದ ಮುನಿಗಳಿಗೆ ಪದವಿಯನ್ನು ನೀಡಿದ ಆಚಾರ್ಯರು ಯಾರು ? ಕ್ಷುಲ್ಲಕರಿರಲಿ, ಬ್ರಹ್ಮಚರ್ಯದೀಕ್ಷೆಪಡೆದಿರುವವರಿಗಿಂತ ಹಿಂದಿರುವ ಸಾಮಾನ್ಯ ಶ್ರಾವಕರು ವಿದ್ಯಾನಂದ ಮುನಿಗಳಿಗೆ ಆಚಾರ್ಯ ಪದವಿಯನ್ನು ನೀಡಿದ್ದಾರೆ. 36 ಗುಣಗಳನ್ನು ಹೊಂದಿರುವ ಮುನಿಗಳು, ಕೆಲವೇ ಗುಣಗಳನ್ನು ಹೊಂದಿರುವ ಗೃಹಸ್ಥರು ಆಚಾರ್ಯ ಪದವಿ

ಕೊಡುವ ಸಮಾರಂಭವನ್ನು ಏರ್ಪಡಿಸಿದಾಗ ವಿದ್ಯಾನಂದರು ಹೇಗೆ ಸಮಾರಂಭದ ಮೆಟ್ಟಿಲನ್ನು ಹತ್ತಿದರು. ಅಪರಿಗ್ರಹ ತತ್ವವನ್ನು ಪೂರ್ಣವಾಗಿ ಪಾಲಿಸಿ ಸರ್ವಸಂಗ ಪರಿತ್ಯಾಗಿಗಳಾಗಿರುವ ದಿಗಂಬರ ಮುನಿಗಳಾದ ವಿದ್ಯಾನಂದರಿಗೆ ಶ್ರಾವಕರು ಕೊಡುವ ಆಚಾರ್ಯಪದವಿಯ ಬಗೆಗೆ ಪರಿಗ್ರಹಬುದ್ಧಿ ಏಕೆ ಉಂಟಾಯಿತು ? ಇದಕ್ಕೆ ವಿದ್ಯಾನಂದ ಮುನಿಗಳು ಸಮಂಜಸ ಉತ್ತರವನ್ನು ಕೊಡಬಲ್ಲರೆ ?

ಅಣುವ್ರತಿಗಳಾದ, ಅದರಲ್ಲೂ ರಾಗ ದ್ವೇಷಗಳಿಗೆ ಸುಲಭವಾಗಿ ಒಳಗಾಗುವ ಚೇತನರಾದ ಶ್ರಾವಕರು, ಯಾವ ಸಂದರ್ಭದಲ್ಲೂ ರಾಗ ದ್ವೇಷಗಳಿಗೆ ಒಳಗಾಗದ ಮಹಾವ್ರತಿಗಳಾದ ಮುನಿಗಳಿಗೆ ಆಚಾರ್ಯ ಪದವಿ ನೀಡಿರುವುದು ಎಷ್ಟೊಂದು ಆಭಾಸಕರವಾದ ಹಾಸ್ಯಾಸ್ಪದ ಸಂಗತಿ ! ಓಗೆ ಶಾಸ್ತ್ರ ಪದ್ಧತಿ ಮತ್ತು ಸತ್ಸಂಪ್ರದಾಯ ಗಳಿಗೆ ಅಪಚಾರವೆಸಗಿ ಆಚಾರ್ಯ ಪದವಿ ನೀಡುವ ನಗೆಗೇಡಿನ ನಾಟಕ, ಭವ್ಯವಾದ ಜೈನ ಪರಂಪರೆಯಲ್ಲಿ ಯಾವಕಾಲದಲ್ಲೂ ನಡೆದಿಲ್ಲ. ಇಂತಹ ನಾಟಕವನ್ನು ನೋಡುವ ಸೌಭಾಗ್ಯ ದೆಹಲಿಯ ಜನರಿಗುಂಟಾಯಿತು.

ತಾ॥ 17-11-78 ರಲ್ಲಿ ಕೆಲವು ಶ್ರಾವಕರು ಸೇರಿ ದೆಹಲಿಯಲ್ಲಿ ಏಲಾಚಾರ್ಯ ಪದವಿ ಕೊಡುವ ಸಮಾರಂಭವನ್ನು ಏರ್ಪಡಿಸಿದಾಗ, ವಿದ್ಯಾನಂದರು ತಾವೇ ಸ್ವತಃ ತಾ॥ 20-8-71 ರಲ್ಲಿ ಇಂದೂರಿನಲ್ಲಿ ಆಚಾರ್ಯ ಪದವಿಯ ಸ್ವೀಕಾರದ ಬಗೆಗೆ ಹೇಳಿದ್ದ ಮಾತುಗಳನ್ನು ಹೇಗೆ ಮರೆತು ಬಿಟ್ಟರು ? ಶ್ರಾವಕ ಶಿಷ್ಯರಿಂದ ಪದವಿ ಪಡೆಯುವುದೂ ಒಂದೇ, ತಮ್ಮನ್ನು ತಾವೇ ಆಚಾರ್ಯರೆಂದು ಘೋಷಿಸಿಕೊಳ್ಳುವುದೂ ಒಂದೇ ಎಂಬ ಕಟುಸತ್ಯ ಆಗ ವಿದ್ಯಾನಂದ ಮುನಿಗಳಿಗೆ ಏಕೆ ಹೊಳೆಯಲಿಲ್ಲ ? ವಿಚಿತ್ರ ವೆಂದರೆ ಇಲ್ಲಿ ವಿದ್ಯಾನಂದರು ತಮ್ಮ ಮಾತುಗಳಿಗೆ ತಾವೇ ನಿದರ್ಶನರಾಗಿದ್ದಾರೆ. ಇದರಿಂದಾಗಿ ಯುವಕ ಪೀಳಿಗೆಯನ್ನು ಮಿಥ್ಯಾವರ್ಗಕ್ಕೆ ಈಗ ಅವರು ತಳ್ಳುತ್ತಿದ್ದಾರೆ ಅಲ್ಲವೇ ? ಯುವಕರಲ್ಲಿ ಲಂಪಟತನ ಹೆಚ್ಚುವಂತೆ ಪರಿಗ್ರಹ ಬುದ್ಧಿ ಹಿಗ್ಗುವಂತೆ ಪ್ರೇರೇಪಿಸುತ್ತಿರುವರಲ್ಲವೆ ? ಇಂದೂರಿನ ಪ್ರವಚನದ ತಮ್ಮ ಮಾತುಗಳಿಂದಾಗಿ ತಾವೇ ಈಗ ನಿಂದಾರ್ಹರಾಗಿರುವುದನ್ನು ವಿಧಿಯ ವಿಪರ್ಯಾಸವೆನ್ನೋಣವೇ ?

ಇನ್ನು ಮುಂದೆ ಮತ್ತೆ ಕೆಲವು ಶ್ರಾವಕರು ದೆಹಲಿಯಲ್ಲೋ ಅಥವಾ ಇನ್ನೆಲ್ಲಿ ಯಾದರೋ ವೇದಿಕೆ ಕಟ್ಟಿ ಸಭೆ ಸೇರಿಸಿ ಅರ್ಹಂತ ಪರಮೇಷ್ಠಿ ಪದವಿಯನ್ನು ಕೊಡು ತ್ತೇವೆ ಬನ್ನಿರಿ ಎಂದರೆ ಶ್ರೀ ವಿದ್ಯಾನಂದ ಮುನಿಗಳು ಏಲಾಚಾರ್ಯ ಪದವಿಯನ್ನು ಕೊಡಹಿ ಅರ್ಹಂತ ಪದವಿಯನ್ನು ಧರಿಸಿಕೊಳ್ಳಲು ತಲೆಯೊಡ್ಡುತ್ತಾರೆಯೆ ? ಈಗಾ ಗಲೇ ಆಚಾರ್ಯ ಪದವಿಯ ಕಿರೀಟವನ್ನು ಹೊರಿಸಿಕೊಂಡಿರುವಾಗ, ಅರ್ಹಂತ ಪದವಿ ಯನ್ನೂ ಅನುಮೋದಿಸಲು ವೇದಿಕೆಯ ಮೆಟ್ಟಿಲುಗಳನ್ನು ಹುಡುಕಲೇಬೇಕೆನಿಸುತ್ತದೆ ಯಲ್ಲವೇ ? ಪದವಿಯನ್ನು ಕೊಡುವವರೂ ತೆಗೆದುಕೊಳ್ಳುವವರೂ ಇದ್ದೇ ಇರು

ವಾಗ ಪದವಿ ಪಡೆಯುವ ಆಸೆ ಇಲ್ಲಿಗೇ ನಿಲ್ಲುತ್ತದೆಯೇ ? ಮತ್ತೆ ಕೆಲವು ಶ್ರಾವಕರು ತಾವೇನು ಕಡಿಮೆ ಎಂದುಕೊಂಡು ಎಲ್ಲೋ ಒಂದು ಕಡೆ ತೋರಣ ಕಟ್ಟಿ ಸಭೆ ಸೇರಿಸಿ ನಾವು ಸಿದ್ಧ ಪದವಿಯನ್ನು ಕೊಡುತ್ತೇವೆ ಬನ್ನಿರಿ ಅರ್ಹಂತರೇ ಎಂದು ಆಹ್ವಾನಿಸಿದರೆ ವಿದ್ಯಾನಂದ ಮುನಿಗಳು ಅದಕ್ಕೂ ಒಪ್ಪಿಕೊಳ್ಳುತ್ತಾರೆಯೇ ?

ಮುನಿ ವಿದ್ಯಾನಂದರನ್ನು ಕೇಳಿ ಜೀವನ ಚರಿತ್ರೆಯನ್ನು ಬರೆದಿರುವ ಶ್ರೀಯುತ ಜಿ. ಬ್ರಹ್ಮಪ್ಪನವರು ಈಗ ಮುನಿಗಳ ಸಾನ್ನಿಧ್ಯದಲ್ಲಿ ಸದಾ ಇರುತ್ತಿರುವುದರಿಂದ ಈ ಬಗ್ಗೆ ಮುನಿಗಳನ್ನು ವಿಚಾರಿಸಿ ಸಮಾಜಕ್ಕೆ ಆದಷ್ಟು ಬೇಗ ತಿಳಿಸುವುದಾದರೆ, ನಾವೆಲ್ಲಾ ಸೇರಿ ಶ್ರೀ ಗೋಮಟೇಶ್ವರ ಸ್ವಾಮಿಯ ಮಹಾಮಸ್ತಕಾಭಿಷೇಕದ ಹೊತ್ತಿಗೆ ಸಿದ್ಧ ಪರಮೇಷ್ಠಿಗಳ ಪದವಿಯನ್ನು ಅವರಿಗೆ ಕೊಡಲು ವ್ಯವಸ್ಥೆ ಮಾಡಬಹುದಲ್ಲವೇ ? ಹೇಗೂ ಮಹಾಮಸ್ತಕಾಭಿಷೇಕಕ್ಕಾಗಿ ಬಂದು ಸೇರುವ ಲಕ್ಷಾಂತರ ಭಕ್ತಾದಿಗಳು ಶ್ರವಣ ಬೆಳಗೊಳದಲ್ಲಿ ಈ ಕಲಿಗಾಲದಲ್ಲಿ ನೆಲೆಸಿರುವ ಸಿದ್ಧ ಪರಮೇಷ್ಠಿಯನ್ನು ಕಂಡು ತಮ್ಮ ಜನ್ಮ ಸಾರ್ಥಕ ಪಡಿಸಿಕೊಳ್ಳಬಹುದಲ್ಲ !

ಪುಷ್ಪದಂತ—ಭೂತಬಲಿ ಆಚಾರ್ಯದ್ವಯರಿಂದ ವಿರಚಿತವಾದ ಷಟ್‌ಖಂಡಾ ಗಮಕ್ಕೆ ಮೊಟ್ಟಮೊದಲು ಟೀಕೆ ಬರೆದವರು ಶ್ರೀ ಕುಂದಕುಂದಾಚಾರ್ಯರು. ಇವರ ನಂತರ ಎರಡನೆ ಟೀಕೆಯನ್ನು ಬರೆದ ಶ್ರೀ ಶಾಮಕುಂಡಾಚಾರ್ಯರು ಮೂರನೆಯ ಟೀಕೆಯನ್ನು ಒರೆದ ತುಂಬಲೂರು ಆಚಾರ್ಯರು, ನಾಲ್ಕನೆಯ ಟೀಕೆಯನ್ನು ಬರೆದ ಶ್ರೀ ಸಮಂತಭದ್ರಾಚಾರ್ಯರು, ಐದನೇ ಟೀಕೆಯನ್ನು ಬರೆದ ಬಪ್ಪದೇವ ಗುರುಗಳು, ಬಪ್ಪದೇವರ ವ್ಯಾಖ್ಯಾನ ಪ್ರಜ್ಞಪ್ತಿಗೆ ಧವಲಾ ಜಯಧವಲಾ ಟೀಕೆಯನ್ನು ಬರೆದ ಶ್ರೀವೀರಸೇನಾಚಾರ್ಯ, ಜಿನಸೇನಾಚಾರ್ಯರುಗಳು—ಇವರುಗಳೊಂದಿಗೆ ಪ್ರಸಿದ್ಧ ಆಚಾರ್ಯರುಗಳೆನಿಸಿದ ಪೂಜ್ಯಪಾದಾಚಾರ್ಯರು ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿ ಗಳು ಮುಂತಾದ ಮಹಾನ್ ದಿಗ್ಗಜ ಆಚಾರ್ಯರುಗಳೆಲ್ಲಾ, ತಾವು ಕ್ರಮ ಬದ್ಧವಾಗಿ ಆಚಾರ್ಯ ಪದವಿಯನ್ನು ಪಡೆದಿದ್ದರೂ ಸಹ, ತಮ್ಮನ್ನು ಕುಂದಕುಂದಾಚಾರ್ಯರ ಸ್ಥಾನದಲ್ಲಿ ಪರಿಗಣಿಸಿಕೊಂಡು, ಕುಂದ ಕುಂದಾಚಾರ್ಯರೊಬ್ಬರಿಗೆ ಮಾತ್ರ ಇದ್ದ ಏಲಾಚಾರ್ಯ ಎಂಬ ಹೆಸರನ್ನು ತಮ್ಮ ಹೆಸರಿನ ಮುಂದೆ, ಪದವಿ ರೂಪದಲ್ಲಾಗಲೀ ಅಥವಾ ವಿಶೇಷಣರೂಪದಲ್ಲಾಗಲೀ ಸೇರಿಸಿಕೊಂಡಿರಲಿಲ್ಲ. ಅಭಿನವ ಕುಂದಕುಂದ ...ಕೊಂಡಿರಲಿಲ್ಲ. ಶ್ರಾವಕ ಜನರೂ ಸಹ ತಾವು ಮೆಚ್ಚಿದ ಮುನಿಗಳಿಗೆ ...ು ಪದವಿ ಕೊಡುವ ಅಥವಾ ಅಭಿನವ ಕುಂದಕುಂದರೆಂದು ಕರೆಯುವ ...ಲ್ಲ. ಶ್ರಾವಕರು ಪದವಿ ಕೊಡುವುದು ; ಮುನಿಗಳು ಅದನ್ನು ...ದುಕೊಳ್ಳುವುದು; ಭಟ್ಟಂಗಿಗಳು ಅಭಿನವ ಕುಂದಕುಂದರೆಂದು ...ುನಿಗಳು ಅದನ್ನು ಅನುಮೋದಿಸುವುದು. ಇಂತಹ ಕಪಟ

ನಾಟಕಗಳು ಕುಂದಕುಂದಾಚಾರ್ಯರ ನಂತರದ 1900 ವರ್ಷಗಳ ದೀರ್ಘ ಅವಧಿ ಯಲ್ಲಿ ಒಂದಾದರೂ ಸಿಗುವುದಿಲ್ಲ ! ಇದಕ್ಕೆ ಬದಲಾಗಿ ಪ್ರಾಚೀನ ಆಚಾರ್ಯರುಗಳೆಲ್ಲಾ ಕುಂದಕುಂದಾಚಾರ್ಯರಲ್ಲಿ ಎಣೆಯಿಲ್ಲದ ಭಕ್ತಿ ಗೌರವ ಅಭಿಮಾನಗಳನ್ನು ತಾಳಿ, ಅಧ್ಯಾತ್ಮದ ದೇದೀಪ್ಯಮಾನ ಪ್ರಭೆ ಉಕ್ಕಿಸಿದ ಆ ಮಹಾ ಮಹಿಮರನ್ನು ಕೀರ್ತಿಸುವು ದರಲ್ಲಿ ತಮ್ಮ ಜನ್ಮ ಸಾರ್ಥಕತೆಯನ್ನು ಪಡೆದವರಂತೆ, ಆತ್ಮಪೂರ್ವವಾದ ವಿನಯ ಗುಣವನ್ನು ಮೆರೆದರು. ಇಂತಹ ಮಹಾ ಪುರುಷರುಗಳು ಚೆಲ್ಲಿದ ವಿನಯ ಸಂಪತ್ತನ್ನು ಬಾಚಿಕೊಳ್ಳುವುದು ಎಷ್ಟೊಂದು ಸಮಂಜಸ !

ಇಂತಹ ಸರ್ವಶ್ರೇಷ್ಠ ಆಚಾರ್ಯ ಪರಂಪರೆಯು ಗಳಿಸಿದ್ದ ಶಾಸ್ತ್ರ ಸಿದ್ಧಾಂತಗಳ ಸಂಪೂರ್ಣ ಪರಿಜ್ಞಾನ ಮತ್ತು ವಿನಯ ಸಂಪತ್ತು ಶ್ರೀ ವಿದ್ಯಾನಂದ ಮುನಿಗಳಿಗೆ ತಿಳಿದೇ ಇಲ್ಲವೇ ? ಆತ್ಮಸಾಕ್ಷಾತ್ಕಾರದ ಹಾದಿಯನ್ನು ಪರಿಹಾಸ್ಯ ಮಾಡುವಂತಹ. ಆಧ್ಯಾತ್ಮ ಪೂರ್ಣವಾಗಿ ತಿಳಿಯದ ಆಡಂಬರಪ್ರಿಯ ಶ್ರಾವಕ ಶಿಷ್ಯರು ತಮಗೆ ತೊಡಿ ಸಿರುವ ಹೊರಲಾರದ ಹೊರೆ ಈ ಏಲಾಚಾರ್ಯ ಪದವಿಯ ಕಿರೀಟ, ಜಗನ್ಮಾನ್ಯವಾದ ಜೈನಾಚಾರ್ಯಪರಂಪರೆಯನ್ನು ಹೇಗೆ ನಗೆಪಾಟಲಾಗುವಂತೆ ಮಾಡಿದೆ ಎನ್ನುವ ವಾಸ್ತವಸತ್ಯವನ್ನು ಪದವಿಪಡೆದು ಬೀಗುತ್ತಿರುವ ಶ್ರೀ ವಿದ್ಯಾನಂದಮುನಿಗಳು ಇನ್ನಾ ದರೂ ಗ್ರಹಿಸುವರೆ ? ಇಲ್ಲವೆ ತೀರ್ಥಂಕರ ಪರಮೇಷ್ಠಿಯ ಪದವಿಯನ್ನು ಪಡೆಯಲು ಕಾತರರಾಗಿ ವೇದಿಕೆಯ ಮೆಟ್ಟಿಲನ್ನು ಹುಡುಕಾಡುತ್ತಿರುವರೆ ? ಹೋಗಲಿ ಶ್ರೀ ವಿದ್ಯಾನಂದರಿಗೆ ಏಲಾಚಾರ್ಯ ಪದವಿ ತೊಡಿಸುವ ಐಡಿಯಾ ಯಾವ ಶ್ರಾವಕಾಗ್ರಣಿಗೆ ಪ್ರಪ್ರಥಮವಾಗಿ ಹೊಳೆಯಿತು ? ಈ ಐಡಿಯಾವನ್ನು ಪ್ರಪ್ರಥಮವಾಗಿ ಕೇಳುವ ಸೌಭಾಗ್ಯ ಯಾವ ಕಿವಿಗಳಿಗೆ ಅಥವಾ ಕಿವಿಗಳ ಸಮೂಹಕ್ಕೆ ಒದಗಿತು ತಿಳಿಯಬಹುದೇ ? ಸಮಾಜದಲ್ಲಿ ಇವರ ಸ್ಥಾನಮಾನವೇನು ? ಯಾರಿಗೋ ಹೊಳೆದ ಈ ಐಡಿಯಾ ಹೇಗೆ 17-11-78 ರಲ್ಲಿ ದೆಹಲಿ ಸಮಾರಂಭದ ರೂಪತಾಳಿತು ? "1978 ರಲ್ಲಿ ಶ್ರೀ ಶ್ರೀ ವಿದ್ಯಾನಂದರು ದೆಹಲಿಯ ಶ್ರಾವಕ ವೃಂದದಿಂದ ಏಲಾಚಾರ್ಯ ಪದವಿ ಯನ್ನು ಒಪ್ಪಿಸಿಕೊಂಡರು" ಎಂದು ತಮ್ಮ ಗ್ರಂಥದಲ್ಲಿ ಹೇಳಿರುವ ಶ್ರೀಯುತ ಜಿ. ಬ್ರಹ್ಮಪ್ಪನವರು ಮೇಲಿನ ಪ್ರಶ್ನೆಗಳಿಗೆಲ್ಲಾ ಧರ್ಮಾನುಗುಣವಾಗಿ ಉತ್ತರ ನೀಡು ತ್ತಾರೆಯೋ ? ಒಪ್ಪಿಸಿಕೊಂಡರು ಎಂದು ಹೇಳಿರುವುದರಿಂದ ಸೊಂಟಬಾಗಿಸಿ ಒಪ್ಪಿಸಿ ಕೊಂಡರೆ ಇಲ್ಲವೆ ಕೈಚಾಚಿ ಒಪ್ಪಿಸಿಕೊಂಡರೆ ?

ವಿದ್ಯಾನಂದರ ಏಲಾಚಾರ್ಯ ಪದವಿಗೆ ಹೀಗೆ ಬರವಣಿಗೆಯ ರೂಪದಲ್ಲಿ ವಿರೋಧಗಳು ಸಾರ್ವಜನಿಕವಾಗಿ ಪ್ರಕಟವಾದಾಗ, ಅವರನ್ನು ಕರ್ನಾಟಕಕ್ಕೆ ಆಹ್ವಾನಿ ಸಿದ 'ದಕ್ಷಿಣಪಥ ವಿಹಾರ ಸ್ವಾಗತ ಸಮಿತಿಯವರಾಗಲೀ ಅಥವಾ ವಿದ್ಯಾನಂದರಾಗಲೀ ಇದಕ್ಕೆ ಪ್ರತಿಕ್ರಿಯೆಯನ್ನು ತೋರಲಿಲ್ಲ ಕಳ್ಳತನ ಮಾಡಿದ ಕಳ್ಳ ಕದ್ದವಸ್ತುಗಳ

ಸಮೋಶ ಸಿಕ್ಕಿಬಿದ್ದಾಗ ಅವನ ಪರಿಸ್ಥಿತಿ ಹೇಗೋ ಹಾಗೆ ವಿದ್ಯಾನಂದರ ಮನಸ್ಥಿತಿ ಯಾಯಿತು! ವಿದ್ಯಾನಂದರನ್ನು ಮಹಾನ್ ಸಂತರೆಂದೂ ತಾರಕತಪಸ್ವಿಯೆಂದೂ ಮಾತನಾಡುವ ಗೊಮ್ಮಟನೆಂದೂ ಪ್ರಚಾರ ನೀಡಿದವರು ಈ ಏಲಾಚಾರ್ಯ ಪದವಿ ಪಡೆದ ಒಳಗುಟ್ಟು ರಟ್ಟಾದಾಗ ಅವರು ತಮ್ಮ ಕಣ್ಣು ಕಿವಿ ಮತ್ತು ಬಾಯಿಗಳ ಶಕ್ತಿ ಯನ್ನು ಕಳೆದುಕೊಂಡರು. ವಿದ್ಯಾನಂದರು ಆಚಾರ್ಯರಾದುದನ್ನು ಶಾಸ್ತ್ರಸಮ್ಮತ ವಾಗಿ ಸಮರ್ಥಿಸುವ ಒಂದಾದರೂ ದನಿ ಕರ್ನಾಟಕದಲ್ಲಿ ಎಲ್ಲಿಯೂ ಕೇಳಿಬರಲಿಲ್ಲ.

ಇಂತಹ ಶೋಚನೀಯ ಸ್ಥಿತಿಯಲ್ಲಿ ವಿದ್ಯಾನಂದರಿರುವಾಗ ಬೆಂಗಳೂರಿನ 'ಸಂಧಾ' ವಾರಪತ್ರಿಕೆ ವಿದ್ಯಾನಂದರ ಜೊತೆ ನಡೆಸಿದ ಒಂದು ಸಂದರ್ಶನವನ್ನು ಪ್ರಕಟಿಸಿತು. ತಾ. 22–2–1981ರ ಸಂಚಿಕೆಯಲ್ಲಿ 'ಏಲಾಚಾರ್ಯ ವಿದ್ಯಾನಂದ ಮುನಿ' ಎಂಬ ಶೀರ್ಷಿಕೆಯಲ್ಲಿ 'ಕೃಷ್ಣಾ' ಎಂಬುವರು ನಡೆಸಿದ ಸಂದರ್ಶನ ಪ್ರಕಟವಾಗಿದೆ. ಈ ಸಂದರ್ಶನದಲ್ಲಿ ಸ್ವತಃ ವಿದ್ಯಾನಂದರು ಏಲಾಚಾರ್ಯ ಪದವಿಯ ಬಗೆಗೆ ಬಾಯಿ ಬಿಟ್ಟಿದ್ದಾರೆ. ಬಹುಶ ಈ ವಿವಾದಾಸ್ಪದ ವಿಷಯದ ವಿಚಾರವಾಗಿ ವಿದ್ಯಾನಂದರು ಮೊಟ್ಟಮೊದಲು ಸಾರ್ವಜನಿಕವಾಗಿ ಪತ್ರಿಕೆ ಮೂಲಕ ವ್ಯಕ್ತಪಡಿಸಿದ ಪ್ರತಿಕ್ರಿಯೆ ಇದಾಗಿದೆ. ಪತ್ರಿಕೆಯಲ್ಲಿ ಬಂದ ಏಲಾಚಾರ್ಯ ವಿಷಯಕ್ಕೆ ಸಂಬಂಧಿಸಿದ ಭಾಗ ಹೀಗಿದೆ ;

## ಏಲಾಚಾರ್ಯ ವಿದ್ಯಾನಂದ ಮುನಿ

ಪ್ರಶ್ನೆ : ತಾವು ಕರ್ನಾಟಕದ ಶೇಡಬಾಳದವರಾಗಿರುವುದು ಕನ್ನಡಿಗರಾದ ನಮಗೆಲ್ಲ ಹೆಮ್ಮೆಯ ಸಂಗತಿ. ತಾವು ಈ ಮಹಾ ತ್ಯಾಗಮಯವಾದ ಜೀವನವನ್ನನು ಸರಿಸಲು ಕಾರಣವಾದ ಘಟನೆಗಳನ್ನು ಹೇಳುತ್ತೀರಾ ?

**ಮುನಿಜಿ :** ಶೇಡಬಾಳ ಇರತಕ್ಕದ್ದು ಕರ್ನಾಟಕ ಗಡಿಪ್ರದೇಶದಲ್ಲಿ ಅಲ್ಲಿ ಎಲ್ಲ ರಿಗೂ ಸಾಮಾನ್ಯವಾಗಿ ಎರಡು ಭಾಷೆ ಬಂದೇ ಬರುತ್ತವೆ. ಅವು ಕನ್ನಡ ಮತ್ತು ಮರಾಠಿ. ಕನ್ನಡಿಗರ ಮತ್ತು ಮರಾಠಿಗರ ನಡುವಣ ಸಂಬಂಧ ಹಿಂದಿನಿಂದಲೂ ಬೆಳೆದುಬಂದದ್ದೇ. ಇಂಥ ಸ್ಥಳದಲ್ಲಿ ನಾವು ಜನ್ಮತಳೆದದ್ದು ನಮ್ಮದು ಜೈನಬ್ರಾಹ್ಮಣ ವಂಶ. ಧಾರ್ಮಿಕ ವಾತಾವರಣ. 1942ರ ಸ್ವಾತಂತ್ರ್ಯ ಚಳುವಳಿಯಲ್ಲಿ ಒಂದೆರಡು ವರ್ಷ ಭಾಗವಹಿಸಿದ್ದುಂಟು. ಮೊದಲಿನಿಂದಲೂ ಧರ್ಮದ ಕಡೆಗೇ ತಿರುಗಿದ್ದ ಮನಸ್ಸು ಆಧ್ಯಾತ್ಮಿಕ ಸಾಹಸಕ್ಕಾಗಿ ಎಳೆಸುತ್ತಿತ್ತು. 1946ರಲ್ಲಿ ಸ್ವಸ್ತಿ ಶ್ರೀ ಮಹಾವೀರಕೀರ್ತಿ ಮುನಿಜಿ ಶೇಡಬಾಳಕ್ಕೆ ಆಗಮಿಸಿದ್ದರು. ಆಗ ಆರಂಭವಾಯಿತು ಈ ಹೊಸ ಜೀವನ. ಮೊದಲು ಬ್ರಹ್ಮಚಾರಿ. ಅನಂತರ ಕ್ಷುಲ್ಲಕ ಆಮೇಲೆ ಮುನಿದೀಕ್ಷೆ ತದನಂತರ ಉಪಾ ಧ್ಯಾಯ. ಗುರುಗಳಾದ ಆಚಾರ್ಯ ರತ್ನ ದೇಶಭೂಷಣ ಮುನಿಜಿಯವರೇ ಆಶೀ

ವರ್ಣಿಸಿಕೊಟ್ಟಿದ್ದು. ಹನ್ನೆರಡು ವರ್ಷ ಹಿಂದೆ ದೆಹಲಿಯ ಜೈನ ಮಹಾಜನರೇ ಏಲಾಚಾರ್ಯರೆಂದು ಗೌರವಿಸಿದರು. ಜೈನಧರ್ಮದ ಇತಿಹಾಸದಲ್ಲಿ ಇದುವರೆಗೆ ಈ ಪದವಿ ಪಡೆದವರು ನಾಲ್ಕುಮಂದಿ ಆಚಾರ್ಯರು. ಮೊದಲನೆಯವರು ಕುಂದ ಕುಂದಾಚಾರ್ಯ. 'ಏಲ' ಎಂದರೆ ಕುಶಲ, ಬುದ್ಧಿವಂತ. ದ್ರಾವಿಡ ಮೂಲದ ಪದ ಇದು ಮೂಲದಲ್ಲೂ ಇದೆ ಅರ್ಥ.

ವಿದ್ಯಾನಂದರು 'ಸುಧಾ' ವಾರಪತ್ರಿಕೆಗೆ ನೀಡಿರುವ ಮೇಲಿನ ಉತ್ತರದಲ್ಲಿ ಬ್ರಹ್ಮಚರ್ಯ, ಕ್ಷುಲ್ಲಕ, ಮತ್ತು ಮುನಿದೀಕ್ಷೆಗಳನ್ನು ಕ್ರಮಬದ್ಧವಾಗಿ ಪಡೆದಿರುವುದನ್ನು ಹೇಳಿದ್ದಾರೆ. ಆಚಾರ್ಯ ದೇಶಭೂಷಣರಿಂದ ಉಪಾಧ್ಯಾಯ ಪದವಿಯನ್ನು ಆಶೀರ್ವಾದ ಪೂರ್ವಕ ಪಡೆದಿರುವುದಾಗಿಯೂ ಹೇಳಿಕೊಂಡಿದ್ದಾರೆ. ನಂತರ "ಹನ್ನೆರಡು ವರ್ಷ[1] ಹಿಂದೆ ದೆಹಲಿಯ ಮಹಾಜನರೇ ಏಲಾಚಾರ್ಯರೆಂದು ಗೌರವಿಸಿದರು" ಎಂದು ಹೇಳಿದ್ದಾರೆ. ಈ ಹೇಳಿಕೆ ಪ್ರಶ್ನಾರ್ಹವಾದುದು. ಸಂದರ್ಶನ ನಡೆಸಿದ ಕೃಷ್ಣಸ್ವಾಮಿರವರಿಗೆ ಜೈನಶಾಸ್ತ್ರದ ಮುನಿಚಾರಿತ್ರದ ಪರಿಚಯವಿದ್ದಿದ್ದರೆ ಅವರು ಮಹಾಜನತೆಯಿಂದ ಪದವಿ ಪಡೆದುದು ಸರಿಯೇ ? ಶಾಸ್ತ್ರ ಸಮ್ಮತವೇ ? ಎಂದು ಮರುಪ್ರಶ್ನೆ ಹಾಕಬಹುದಿತ್ತು. ವಿದ್ಯಾನಂದರು ಏಲಾಚಾರ್ಯ ಪದವಿಯ ವಿಚಾರವಾಗಿ ಉತ್ತರಭಾರತದ ಪತ್ರಿಕೆಗಳಲ್ಲಿ ಮತ್ತು ಕರ್ನಾಟಕದಲ್ಲಿ ಪ್ರಕಟವಾಗಿರುವ ವಿರೋಧಗಳನ್ನೆಲ್ಲಾ ಬಚ್ಚಿಟ್ಟು ಸಂದರ್ಶನಕಾರರನ್ನೂ ವಂಚಿಸಿದರು.

ಲೌಕಿಕ ಆಕರ್ಷಣೆಗಳಲ್ಲಿ ಮುಳುಗಿರುವ ಮಹಾಜನತೆ ಪಾರಮಾರ್ಥಿಕ ಕ್ಷೇತ್ರದ ಸಾಧಕನಿಗೆ ಆಚಾರ್ಯ ಪದವಿ ಕೊಡಬಹುದಾದರೆ ಅವರು ಕ್ಷುಲ್ಲಕದೀಕ್ಷೆ, ಮುನಿದೀಕ್ಷೆ ಮುಂತಾದವುಗಳನ್ನೂ ಸಹ ಕೊಡಲು ಅರ್ಹರಾಗುತ್ತಾರೆ. ಜೈನಧರ್ಮದ ಪ್ರಕಾರ ತನಗಾಗಿಯೇ ಆಹಾರವನ್ನು ದಾಸಿಗಳು ಸಿದ್ಧಪಡಿಸಿದ್ದಾರೆ ಎಂಬುದು ತ್ಯಾಗಿಯಾದವನಿಗೆ ತಿಳಿದಕೂಡಲೇ ಅವನು ಅಲ್ಲಿ ಭಿಕ್ಷೆಯನ್ನು ತೆಗೆದುಕೊಳ್ಳಲು ನಿರಾಕರಿಸಿ ತಕ್ಷಣ ಅಲ್ಲಿಂದ ನಿರ್ಗಮಿಸಬೇಕು. ಅಂತಹುದರಲ್ಲಿ ತನಗಾಗಿ ಆಚಾರ್ಯ ಪದವಿ ಕೊಡಲು ಲೌಕಿಕದಲ್ಲಿ ಮುಳುಗಿರುವ ಜನರು ಸಮಾರಂಭವೇರ್ಪಡಿಸಿದ್ದಾರೆ ಎಂದು ಸಾಕಷ್ಟು ಮುಂಚೆ ತಿಳಿದಿದ್ದರೂ ಸಹ ಅಂತರಂಗ ಬಹಿರಂಗ ಪರಿಗ್ರಹಗಳನ್ನು ಪೂರ್ಣವಾಗಿ ತ್ಯಾಗ ಮಾಡಿದ ವಿದ್ಯಾನಂದರು ಜೈನಾಚಾರ್ಯ ಪರಂಪರೆಯನ್ನು ಅಣಕಿಸುವ ಹಾಗೆ ಜನರಿಂದ ಧರ್ಮವಿರುದ್ಧವಾಗಿ ಪದವಿ ಪಡೆದುದು ಬಹುದೊಡ್ಡದಾದ ತಪ್ಪಲ್ಲವೆ ? ಮೋಸಗಾರಿಕೆಯಲ್ಲವೆ ? ಎಂದು ಮುಂತಾಗಿ ಸಂದರ್ಶನಕಾರರು ಕೇಳಲು ಅವಕಾಶವಿತ್ತು.

---

1. ಇದು ನಿಜವಾಗಿ ಎರಡುವರ್ಷ ಎಂದಿರಬೇಕಾಗಿತ್ತು.

ಒಂದು ಪಕ್ಷ ಕೈಸ್ವಾರವರೇನಾದರೂ ಮೇಲಿನಂತೆ ಪ್ರಶ್ನೆ ಕೇಳಿದ್ದರೆ ಆಗ "ಶಾಸ್ತ್ರಗೀಸ್ತ್ರ ಹಾಗಿರಲಿ ಮಹಾವೀರ ತೀರ್ಥಂಕರರ ಕಾಲ ಹಿಂದೆಯೇ ಹೋಯಿತು. ತೀರ್ಥಂಕರರು ಹೇಳಿರುವ ಮುನಿಧರ್ಮದ ಕಠೋರ ನಿಯಮಗಳು ನಮಗೆ ಬೇಕಿಲ್ಲ! ಕಾಲ ಕಳೆದಂತೆ ಎಲ್ಲವೂ ಬದಲಾಗುತ್ತವೆ. ಅದರಂತೆ ಧರ್ಮತತ್ವಗಳನ್ನೂ ನಾವು ಬದಲಾಯಿಸಬೇಕು! ಗಾಳಿ ಬೀಸಿದ ಕಡೆ ಕೊಡೆ ಹಿಡಿಯುವಂತೆ ಕಾಲ ಧರ್ಮಕ್ಕೆ ತಕ್ಕಂತೆ ಜೈನಸಿದ್ಧಾಂತವನ್ನೂ ಅವರವರ ಆಸೆ ಆಕಾಂಕ್ಷೆಗಳಿಗೆ ತಕ್ಕಂತೆ ಬದಲಾಯಿಸಿ ಕೊಳ್ಳುತ್ತಾ ಹೋಗಬೇಕು! ಇದು ಪ್ರಜಾಪ್ರಭುತ್ವದ ಕಾಲ, ಮಹಾಜನರೇ ಈಗ ಪ್ರಭುಗಳು. ರಾಜಕೀಯ ಮತ್ತು ಸಾಮಾಜಿಕ ರಂಗಗಳಲ್ಲಿ ಜನತೆಗೆ ಹೇಗೆ ಅಗ್ರಪಟ್ಟ ಸಿಕ್ಕಿದೆಯೋ ಹಾಗೆಯೇ ಆಧ್ಯಾತ್ಮಿಕ ರಂಗದಲ್ಲೂ ಮಹಾಜನತೆಯದೇ ತೀರ್ಮಾನ! ಆದ್ದರಿಂದ ಮಹಾಜನತೆಯೆಂಬ ಗುರು, ಮಹಾಜನತೆಯೆಂಬ ದೈವ ಕೊಟ್ಟಿರುವ ಏಲಾಚಾರ್ಯ ಪದವಿಯನ್ನು ನಾನು ಸ್ವೀಕರಿಸಿರುವುದು ಬದಲಾದ ಸಿದ್ಧಾಂತಕ್ಕೆ ಅನುಗುಣವಾಗಿ ಸರ್ವಸಮಂಜಸವಾಗಿದೆ. ಇದನ್ನು ವಿರೋಧಿಸುವವರು ಶಾಸ್ತ್ರಜಡರು. ನೂತನ ಆಧ್ಯಾತ್ಮ ತಿಳಿಯದ ಮೂಢರು" ಎಂದು ವಿದ್ಯಾನಂದರೇನಾದರೂ ಉತ್ತರ ಕೊಟ್ಟಿದ್ದರೆ ಅಂತಹ ಸಂದರ್ಭದಲ್ಲಿ "ಮಹಾಜನತೆಯೆಂಬ ಗುರು, ಮಹಾಜನತೆಯೆಂಬ ದೈವಕ್ಕೆ ನೀವು ನಮಸ್ಕಾರ ಮಾಡದೆ ಅವರಿಂದಲೇ ನಮಸ್ಕಾರ ಮಾಡಿಸಿಕೊಳ್ಳುತ್ತಿದ್ದೀರಲ್ಲ? ಇದು ಸರಿಯೇ? ಬದಲಾದ ಸಿದ್ಧಾಂತಕ್ಕೆ ಅನುಗುಣವಾಗಿ ಮಹಾಜನತೆಯ ಪಾದಗಳಿಗೇ ನೀವು ಏಕೆ ನಮಸ್ಕಾರ ಮಾಡಬಾರದು?" ಎಂದು ಸಂದರ್ಶನಕಾರರು ಮರುಪ್ರಶ್ನೆ ಕೇಳಲು ಅವಕಾಶವಾಗುತ್ತಿತ್ತು!

ವಿದ್ಯಾನಂದರು ಸಂದರ್ಶನದಲ್ಲಿ "ಜೈನಧರ್ಮದ ಇತಿಹಾಸದಲ್ಲಿ ಇದುವರೆಗೆ ಈ ಪದವಿ ಪಡೆದವರು ನಾಲ್ಕು ಮಂದಿ ಆಚಾರ್ಯರು, ಮೊದಲನೆಯವರು ಕುಂದಕುಂದಾಚಾರ್ಯರು" ಎಂದು ಹೇಳಿದ್ದಾರೆ ಕುಂದಕುಂದಾಚಾರ್ಯರಿಗೆ ಈ ಏಲಾಚಾರ್ಯ ಎಂಬ ಹೆಸರು ಹೇಗೆ ಬಂತು ಎಂಬುದಕ್ಕೆ ಯಾವ ಆಧಾರಗಳೂ ಲಭ್ಯವಾಗುವುದಿಲ್ಲ. ಜೈನಧರ್ಮದ ಯಾವ ಇತಿಹಾಸದಲ್ಲಿ, ಯಾರು ಬರೆದ ಇತಿಹಾಸದಲ್ಲಿ ಕುಂದಕುಂದಾಚಾರ್ಯರು ಈ ಏಲಾಚಾರ್ಯ ಪದವಿಯನ್ನು ಪಡೆದರು ಎಂದು ಹೇಳಿದೆ? ಪದವಿಯನ್ನು ಹೇಗೆ ಯಾವ ಕ್ರಮದಲ್ಲಿ ಎಲ್ಲಿ ಯಾರಿಂದ ಪಡೆದರು ಎಂಬ ವಿವರಗಳೆಲ್ಲಾ ಎಲ್ಲಿವೆ?–ಈ ಪ್ರಶ್ನೆಗಳಿಗೆಲ್ಲಾ ವಿದ್ಯಾನಂದರ ಬತ್ತಳಿಕೆಯಲ್ಲಿ ಸಮರ್ಪಕವಾದ ಉತ್ತರಗಳಿಲ್ಲ. ಹಿಟ್ಲರನನ್ನೂ ನಾಚಿಸುವಂತಹ ಅವರ ಸಾರ್ವಭೌಮತ್ವದ ಮನೋಧರ್ಮದ ಪ್ರಕಾರ ಅವರು ಹೇಳಿದ್ದೇ ಸಿದ್ಧಾಂತ! ಹೇಳಿದ್ದೇ ಶಾಸ್ತ್ರ!

"ಏಲ ಎಂದರೆ ಕುಶಲ ಬುದ್ಧಿವಂತ ದ್ರಾವಿಡ ಮೂಲದ ಪದ ಇದು. ಮೂಲದಲ್ಲೂ ಇದೇ ಅರ್ಥ" ಎಂಬುದಾಗಿಯೂ ವಿದ್ಯಾನಂದರು ತಮ್ಮ ಸಂದರ್ಶನ

ದಲ್ಲಿ ತಿಳಿಸಿದ್ದಾರೆ. ಏಲ ಎಂಬುದಕ್ಕೆ ಕುಶಲ ಬುದ್ಧಿವಂತ ಎಂಬ ಅರ್ಥವನ್ನು ಎಲ್ಲಿ ಹೇಳಲಾಗಿದೆ ಅದಕ್ಕೆ ಆಧಾರವೇನು ಎಂಬುದನ್ನು ವಿದ್ಯಾನಂದರು ಪ್ರಸ್ತಾಪಿಸಿಲ್ಲ.

ಏಲ ದ್ರಾವಿಡ ಮೂಲದ ಪದವೆ ? ಎಂಬುದನ್ನು ಪರಿಶೀಲಿಸಬಹುದು. ಕಿಟ್ಟೆಲರ ಕನ್ನಡ ಇಂಗ್ಲಿಷ್ ನಿಘಂಟಿನಲ್ಲಿ ಏಲ ಎಂಬುದಕ್ಕೆ ಏಲೆ, ಏಲಕ್ಕಿ, ಏಲಕ್ಕಿಗಿಡ ಎಂಬ ಅರ್ಥವಿದೆ. ನಿಘಂಟಿನ ಮುನ್ನುಡಿಯಲ್ಲಿ (ಪುಟ-37) ಏಲ ಪದದ ವಿಶೇಷ ವಿಶ್ಲೇಷಣೆಯಿದೆ. ಅದು ಹೀಗಿದೆ : ''ಏಲ ಎಂದರೆ ಏಲಕ್ಕಿ. ಈ ಪದ ಸಂಸ್ಕೃತ ಪದವಲ್ಲ. ಏಕೆಂದರೆ ಏಲ ಯಾವ ಸ್ಥಳಗಳಲ್ಲಿ ಬೆಳೆಯುತ್ತದೆಯೋ ಆ ಸ್ಥಳಗಳು ನಿಜ ವಾದ ದ್ರಾವಿಡ ದೇಶಕ್ಕೆ ಸೇರಿವೆ. 'ಏಲ' ದ್ರಾವಿಡ ಜನರಲ್ಲಿ ಅಸ್ತಿತ್ವದಲ್ಲಿದೆ. ಆರ್ಯರು ಬರುವುದಕ್ಕಿಂತ ಮೊದಲಿನಿಂದಲೂ ದ್ರಾವಿಡ ಜನರು ಏಲಕ್ಕಿಯನ್ನು ಉಪಯೋಗಿಸು ತ್ತಿದ್ದರು. ದ್ರಾವಿಡರಲ್ಲಿ ಏಲ ಶಬ್ದ ಯಾವಾಗಲೂ ಅಕ್ಕಿ ಎಂಬ ಶಬ್ದದೊಡಗೂಡಿ ಏಲಕ್ಕಿ, ಯಾಲಕ್ಕಿ, ಎಂಬ ರೂಪದಲ್ಲಿ ಪ್ರಯೋಗವಾಗುತ್ತದೆ. ತಮಿಳಿನಲ್ಲಿ ಇದರ ರೂಪ ಅಂಜಿ ಎಂದಾಗಿದೆ. ಮರಾಠಿ ಮತ್ತು ಹಿಂದಿಯಲ್ಲಿ ಇಲಾಚಿ, ಇಲಾಯಚಿ, ಏಲಚೀ ಮತ್ತು ಏಲಾಚೀ ಇವೆಲ್ಲಾ ರೂಪಗಳು ಹುಟ್ಟಿವೆ. ಆನೆಗಳು ವಿಹರಿಸುವ ದಟ್ಟವಾದ ಅರಣ್ಯಗಳಲ್ಲಿ ಏಲವು ಬಹಳ ಚೆನ್ನಾಗಿ ಬೆಳೆಯುತ್ತಿದ್ದ ಕಾರಣದಿಂದ ದ್ರಾವಿಡರು ಅದನ್ನು ಆನೆಗಳ ಅಕ್ಕಿ ಎಂದು ಕರೆದು 'ಏಲ' ಮತ್ತು 'ಅಕ್ಕಿ'ಯನ್ನು ಸೇರಿಸಿ ಏಲಕ್ಕಿ ಎಂಬ ರೂಪ ನಿಷ್ಪನ್ನವಾಗಿರುವುದು ಅಸಂಭಾವ್ಯವೇನಲ್ಲ.''

ಕಿಟ್ಟೆಲರು 'ಏಲ' ಶಬ್ದಕ್ಕೆ ಮೇಲಿನಂತೆ ನೀಡಿರುವ ಸಂಶೋಧನಾತ್ಮಕ ವಿವರಣೆ ಸಮಂಜಸವೆನಿಸುತ್ತದೆ. ಏಲ ದ್ರಾವಿಡ ಪದವೆಂದು ಕಿಟ್ಟೆಲರು ಹೇಳಿರುವುದು ವಾಸ್ತವ ವಾಗಿದೆ. ಇನ್ನು ವಿದ್ಯಾನಂದರು ಹೇಳಿರುವಂತೆ ಏಲಕ್ಕೆ ಕುಶಲ, ಬುದ್ಧಿವಂತ ಎಂಬ ಅರ್ಥ ದ್ರಾವಿಡ ಮೂಲದಲ್ಲಿ ನಮಗೆ ಕಂಡಂತೆ ಎಲ್ಲಿಯೂ ಸಿಗುವುದಿಲ್ಲ. ದ್ರಾವಿಡ ಮೂಲದಲ್ಲಿ 'ಏಲ'ಕ್ಕೆ ಕುಶಲ, ಬುದ್ಧಿವಂತ ಎಂದು ಎಲ್ಲಿ ಹೇಳಿದ್ದಾರೆ ಎಂಬುದನ್ನಾ ದರೂ ವಿದ್ಯಾನಂದರು ತಿಳಿಸುತ್ತಾರೆಯೇ ?

ಏಲಾಚಾರ್ಯ ಎಂಬ ಹೆಸರು ಕುಂದಕುಂದರಿಗೆ ಬರಲು ಸ್ಪಷ್ಟವಾದ ಕಾರಣ ವೇನಿರಬಹುದೆಂಬ ಪ್ರಶ್ನೆಗೆ ಇತಿಹಾಸದಲ್ಲಾಗಲೀ ಶಾಸ್ತ್ರಗ್ರಂಥಗಳಲ್ಲಾಗಲೀ ಖಚಿತ ವಾದ ಆಧಾರಗಳು ಸಿಗದೇ ಹೋದಾಗ ಕೆಲವರು ತಮ್ಮ ಕಲ್ಪನಾ ಸಾಮರ್ಥ್ಯದ ಬಲ ದಿಂದ ಅದಕ್ಕೊಂದು ಕಾರಣವನ್ನು ಹೇಳಲು ಪ್ರಯತ್ನಿಸುತ್ತಾರೆ. ಇಂತಹ ಪ್ರಯತ್ನ ಗಳು ದಂತಕಥೆಗಳ ರೂಪದಲ್ಲಿ ಸ್ಥಾನ ಪಡೆಯುವುದುಂಟು. ಕ್ರಿ. ಶ. 909ರಲ್ಲಿ ದೇವ ಸೇನನು ತನ್ನ 'ದರ್ಶನಸಾರ' ಗ್ರಂಥದಲ್ಲಿ ಕುಂದಕುಂದರಿಗೆ ತತ್ವದಲ್ಲಿ ಸಂದೇಹವುಂಟಾಗಿ ಅದರ ನಿವಾರಣೆಗಾಗಿ ತಮ್ಮ ತಪಃಪ್ರಭಾವದಿಂದ ಉಂಟಾದ ಚಾರಣಋದ್ಧಿಯಿಂದ ಆಕಾಶಮಾರ್ಗವಾಗಿ ವಿದೇಹ ಕ್ಷೇತ್ರದ ಸಿಮಂಧರ ತೀರ್ಥಂಕರರ ಸಮವಸರಣಕ್ಕೆ ಹೋಗಿ ತಮ್ಮ ಸಂದೇಹ ನಿವಾರಣೆ ಮಾಡಿಕೊಂಡು ಬಂದಿದ್ದರೆಂದು ಹೇಳುತ್ತಾನೆ.

ದೇವಸೇನನ ಈ ಹೇಳಿಕೆಯನ್ನು ಅನುಸರಿಸಿ ಕಲ್ಪನಾಸಾಮರ್ಥ್ಯವಿರುವ ಯಾರೋ ಒಬ್ಬರು—ವಿದೇಹ ಕ್ಷೇತ್ರದ ನಿವಾಸಿಗಳ ದೇಹಪ್ರಮಾಣದ ಮುಂದೆ ಕುಂದಕುಂದಾಚಾರ್ಯರ ದೇಹ 'ಏಲ'ದ ಹಾಗೆ ಚಿಕ್ಕದಾಗಿ ಕಂಡದ್ದರಿಂದ ಅಲ್ಲಿಯವರು ಇವರನ್ನು ಏಲಾಚಾರ್ಯರೆಂದು ಕರೆದರು—ಎಂದು ಹೇಳಿರಬಹುದು ಇದು ದಂತ ಕಥೆಯ ರೂಪದಲ್ಲಿ ಕರ್ನಾಟಕದಲ್ಲಿ ಪ್ರಚಲಿತವಾಗಿದೆ.

ಈ ದಂತಕಥೆಯ ವಾಸ್ತವಾಂಶ ಏನೇ ಇರಲಿ ಈ ಕಲ್ಪಿತ ಕಥೆ ಹೇಳಿದವರ ಪ್ರತಿಭಾಶಕ್ತಿಯನ್ನು ಯಾರೇ ಆಗಲಿ ಮೆಚ್ಚಬೇಕು. ಏಲಕ್ಕಿಗೆ ಬಾದಾಮಿ ಬಣ್ಣದ ಸಿಪ್ಪೆಯ ಹೊದಿಕೆಯಿರುತ್ತದೆ. ಸಿಪ್ಪೆಯನ್ನು ತೆಗೆದಾಗ ಪೂರ್ಣ ಕಪ್ಪಲ್ಲದ ಆದರೆ ಕಪ್ಪಾದ ಸುವಾಸನೆಯಿಂದ ಕೂಡಿದ ಏಲಕ್ಕಿಯ ತಿರುಳು ಕಂಡು ಬರುತ್ತದೆ. ಇದರಲ್ಲಿ ತೆಗೆದು ಹಾಕುವಂತಹ ಭಾಗವೇ ಇರುವುದಿಲ್ಲ. ಈ ಪದಾರ್ಥ ಇಡೀ ಅಡಿಗೆಗೇ ಒಂದು ವಿಶೇಷವಾದ ರುಚಿಯನ್ನು ಕೊಡುತ್ತದೆ. ಇಂತಹ ಏಲಕ್ಕಿಯನ್ನು ಕುಂದಕುಂದಾ ಚಾರ್ಯರಿಗೆ ಉಪಮಾನ ವಸ್ತುವನ್ನಾಗಿ ತೆಗೆದುಕೊಂಡಿರುವುದು ಬಹಳ ಉಚಿತ ವಾಗಿದೆ. ಕುಂದಕುಂದರು ದ್ರಾವಿಡ ದೇಶದವರು. ಅವರ ಮೈಬಣ್ಣ ಸಹಜವಾಗಿ ಕಪ್ಪು. ಸಿಪ್ಪೆಯನ್ನು ತೆಗೆದಾಗ ಕಪ್ಪು ಏಲಕ್ಕಿ ಗೋಚರಿಸುವ ಹಾಗೆ ಕುಂದಕುಂದರು ದಿಗಂಬರ ದೀಕ್ಷೆ ವಹಿಸಿದಾಗ ಇವರ ಸಾಧನಾ ಮಾರ್ಗದ ಕಪ್ಪು ಶರೀರ ಪೂರ್ಣವಾಗಿ ಗೋಚರವಾಯಿತು. ಆ ಸಮಯಕ್ಕೆ ತೆಗೆದು ಹಾಕಬೇಕಾದಂತಹ ಸ್ವಭಾವವಾವುದೂ ಅವರಲ್ಲಿರಲಿಲ್ಲ. ಏಲಕ್ಕಿ ತನ್ನನ್ನೇ ಅರ್ಪಿಸಿಕೊಂಡು ಅಡಿಗೆಗೆಲ್ಲಾ ರುಚಿ ನೀಡುವಂತೆ ಕುಂದಕುಂದರು ತಮ್ಮನ್ನೇ ಜೀವಕೋಟಿಯ ಹಿತಕ್ಕಾಗಿ ಸಮರ್ಪಿಸಿಕೊಂಡು ಎಲ್ಲಾ ಕಾಲಕ್ಕೂ ನಿಲ್ಲುವಂತಹ ಸಮಯಸಾರ, ಪ್ರವಚನಸಾರ, ನಿಯಮಸಾರ, ರಯಣಸಾರ ಪಂಚಾಸ್ತಿಕಾಯ ಮುಂತಾದ ಮೇರುಕೃತಿಗಳನ್ನು ನೀಡಿ ಆರೋಗ್ಯಕರವಾದ ಸಮಾಜ ರಚನೆಗೆ ಮಾರ್ಗದರ್ಶನ ಮಾಡಿದರು.

ದಂತ ಕಥೆಯಂತೆ ವಿದೇಹ ನಿವಾಸಿಗಳು ಕುಂದಕುಂದರನ್ನು ಏಲಾಚಾರ್ಯರೆಂದು ಕರೆದರೋ ಬಿಟ್ಟರೋ ಅದು ಮುಖ್ಯವಲ್ಲ! ಆದರೆ ಆ ದಂತಕಥೆ ತನ್ನಲ್ಲಿ ಉಪಯೋಗಿ ಸಿಕೊಂಡಿರುವ ಉಪಮಾನದ ಸಹಾಯದಿಂದ ಕುಂದಕುಂದಾಚಾರ್ಯರ ಪರಿಶುದ್ಧ ವ್ಯಕ್ತಿತ್ವವನ್ನು ಎಲ್ಲರ ಗಮನಕ್ಕೆ ತರುತ್ತದೆ. ಈ ಅಂತರ್ಗತ ಸತ್ಯ ಬಹಳ ಮುಖ್ಯ ವಾದುದು.

ಇನ್ನು ವಿದ್ಯಾನಂದರನ್ನು ಕುಶಲ-ಬುದ್ಧಿವಂತ ಎಂದೇ ಒಪ್ಪಿಕೊಂಡರೂ ಅವರಲ್ಲಿ ಕುಶಲತೆ ಬುದ್ಧಿವಂತಿಕೆ ಎಲ್ಲಿದೆ ? ಕಪಟತನದ ಪರಮಾವಧಿಯೇ ಕುಶಲತೆಯಾಗಿ ಪ್ರತಿ ವಾದದ ಅಭಿಪ್ರಾಯಗಳಿಗೆ ಬೆನ್ನು ತಿರುಗಿಸಿ ಬಿಡುವುದೇ ಬುದ್ಧಿವಂತಿಕೆಯಾದರೆ ಎಲ್ಲರೂ

ಸುಲಭವಾಗಿ ಏಲಾಚಾರ್ಯರಾಗಿ ಬಿಡುತ್ತಾರೆ. ಕಡೆಗೆ ತೀರ್ಥಂಕರರೂ, ಸಿದ್ಧರೂ ಆಗಿ ಬಿಡುತ್ತಾರೆ!

**ಅಧ್ಯಾಯ : ಇಪ್ಪತ್ತೊಂಬತ್ತು**

# ದೇಶಭೂಷಣರನ್ನು ವಂಚಿಸಿ 'ಸಿದ್ಧಾಂತಚಕ್ರವರ್ತಿ' ಯಾದ ಪ್ರಕರಣ

ವಿದ್ಯಾನಂದರು ಏಲಾಚಾರ್ಯರಾಗಲು ಮಾಡಿದ ಪಿತೂರಿ. ಅದರಿಂದಾದ ಜನ ವಂಚನೆ ಮತ್ತು ಶಾಸ್ತ್ರವಂಚನೆಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಿಯಾಗಿದೆ. 'ಏಲಾಚಾರ್ಯ' ಶಬ್ದವನ್ನು ತಮ್ಮ ಸ್ವಪ್ರಚಾರಕ್ಕಾಗಿ ಅವರು ವ್ಯಾಪಕವಾಗಿ ಉಪಯೋಗಿಸಿಕೊಂಡಿರುವುದು ಈಗ ಎಲ್ಲರ ಗಮನಕ್ಕೂ ಬಂದಿದೆ. ವಿದ್ಯಾನಂದ ಎಂಬ ಅವರ ದೀಕ್ಷಾನಾಮ ಮರೆಯಾಗಿ ಮೋಸದಿಂದ ಪಡೆದ ಏಲಾಚಾರ್ಯ ಪದವಿಯೇ ಅವರ ಹೆಸರಿನ ರೂಪದಲ್ಲಿ ಈಗಾಗಲೇ ಉಪಯೋಗವಾಗತೊಡಗಿದೆ. ಈ ಏಲಾಚಾರ್ಯದ ಜೊತೆ ಜೊತೆಯಲ್ಲಿಯೇ ಸಿದ್ಧಾಂತ ಚಕ್ರವರ್ತಿ ಎಂಬ ಬಿರುದನ್ನೂ ಪ್ರಚಾರ ಪತ್ರಿಕೆಗಳಲ್ಲಿ ತಪ್ಪದೇ ಉಪಯೋಗಿಸಲಾಗುತ್ತಿದೆ. ವಿದ್ಯಾನಂದರಿಗೆ ಈ ಸಿದ್ಧಾಂತ ಚಕ್ರವರ್ತಿ ಎಂಬ ಬಿರುದು ಹೇಗೆ ಬಂತು ? ಎಂದಿನಿಂದ ಇದನ್ನು ಉಪಯೋಗಿಸುತ್ತಿದ್ದಾರೆ, ವಿದ್ಯಾನಂದರು ತಮ್ಮ ಜೀವನದ ಪ್ರತಿಯೊಂದು ಪ್ರಸಂಗದಲ್ಲಿಯೂ ಅಪ್ರಾಮಾಣಿಕವಾಗಿ ನಡೆದುಕೊಂಡು ಸಂಬಂಧಪಟ್ಟವರನ್ನೆಲ್ಲಾ ಲೀಲಾಜಾಲವಾಗಿ ವಂಚಿಸಿರುವಂತೆ ಈ ಬಿರುದನ್ನು ಪಡೆಯುವಲ್ಲಿ ಅವರು ಮಾಡಿರುವ ಕುತಂತ್ರ, ಗುರುವಂಚನೆ ಮತ್ತು ಜನವಂಚನೆಗಳನ್ನು ಇಲ್ಲಿ ತಿಳಿದುಕೊಳ್ಳಬಹುದು.

ಸಿದ್ಧಾಂತ ಎಂಬ ಪದಕ್ಕೆ ಸ್ಥಾಪಿತ ಅಂತ್ಯ, ನಿಜವಾದ ತರ್ಕಬದ್ಧ ತೀರ್ಮಾನ, ಸ್ಥಾಪಿತವಾದ ಸತ್ಯ. ಎರಡನೇ ವಾದವಿಲ್ಲದ ತೀರ್ಮಾನ, ಪರಿಪೂರ್ಣವಾದ ಅಭಿಪ್ರಾಯ—ಎಂದು ಮುಂತಾದ ಅರ್ಥಗಳಿವೆ.

ತೀರ್ಥಂಕರರು ಬೋಧಿಸಿದ ಧರ್ಮತತ್ವಗಳನ್ನು ಸಿದ್ಧಾಂತ, ಜೈನಸಿದ್ಧಾಂತ ಎಂದು ಕರೆಯುವುದು ರೂಢಿಯಿಂದ ಬೆಳೆದು ಬಂದ ಪದ್ಧತಿಯಾಗಿದೆ. ಸಿದ್ಧಾಂತ ಚಕ್ರವರ್ತಿಯೆಂದರೆ ಜೈನಸಿದ್ಧಾಂತವನ್ನು ತಿಳಿದಿರುವವರಲ್ಲಿ ಚಕ್ರವರ್ತಿ ಇದ್ದಹಾಗೆ,

ಅಂದರೆ ಜೈನಸಿದ್ಧಾಂತವನ್ನು ಸಂದೇಹಗಳಿಗೆ ಆಸ್ಪದವಿಲ್ಲದಂತೆ ತಿಳಿದುಕೊಂಡವನು ಎಂಬರ್ಥವಾಗುತ್ತದೆ. ಈ ಸಂದರ್ಭದಲ್ಲಿ ತಿಳಿದುಕೊಂಡಿರುವುದು ಎಂದರೆ ಬರೇ ತಿಳಿದುಕೊಂಡಿರುವುದು ಮಾತ್ರವಲ್ಲ ಅದರಂತೆ ಆಚರಿಸುವುದು ಬಹಳ ಮುಖ್ಯವಾಗುತ್ತದೆ ನಿಜವಾದ ತಿಳುವಳಿಕೆ ಆಚರಣೆಯಿಂದ ಮಾತ್ರ ಸಾಧ್ಯ. ಜೈನ ಮುನಿಗಳಾದವರು ಅದರಲ್ಲೂ ಆಚಾರ್ಯ ಪದವಿಗೇರಿದವರು ಜೈನ ಸಿದ್ಧಾಂತವನ್ನು ತಲಸ್ಪರ್ಶಿಯಾಗಿ ಗ್ರಹಿಸಿ ಮೂವತ್ತಾರು ಗುಣಗಳನ್ನು ಅತಿಚಾರಕ್ಕವಕಾಶವಿಲ್ಲದಂತೆ ಆಚರಿಸಲೇಬೇಕು. ಆಚಾರದಿಂದ ಮಾತ್ರ ಆಚಾರ್ಯತ್ವವೇ ಹೊರತು ಕೇವಲ ತಿಳುವಳಿಕೆ ಮಾತ್ರದಿಂದಲ್ಲ. ಹೀಗೆ ನಿಜವಾದ ಜ್ಞಾನ ಆಚಾರವುಳ್ಳ ಆಚಾರ್ಯರನ್ನು ಸಿದ್ಧಾಂತಿ, ಸೈದ್ಧಾಂತಿಕ, ಸಿದ್ಧಾಂತ ಚಕ್ರವರ್ತಿ[1], ಸಿದ್ಧಾಂತದೇವ ಎಂದು ಕರೆದಾಗ ಆ ಬಿರುದು ಅವರಿಗೆ ಶೋಭಿಸಬಹುದು.

ಸಿದ್ಧಾಂತಿ ಎಂದಾಗ ಸಿದ್ಧಾಂತವನ್ನು ತಿಳಿದವನು ಎಂದಾಗುತ್ತದೆ; ಸಿದ್ಧಾಂತ ಚಕ್ರವರ್ತಿಯೆಂದಾಗ ಸಿದ್ಧಾಂತವನ್ನು ಬಹಳ ಚನ್ನಾಗಿ ತಿಳಿದವನು ಎಂದಾಗುತ್ತದೆ. ಸಿದ್ಧಾಂತದೇವ ಎಂದಾಗ ಸಿದ್ಧಾಂತವನ್ನು ಸರ್ವೋತ್ಕೃಷ್ಟವಾಗಿ ದೈವಕ್ಕೆ ಸಮಾನವಾಗಿ ತಿಳಿದವನೆಂದೂ ಅರ್ಥಮಾಡಬಹುದು. ಹೀಗಾದಾಗ ಸಿದ್ಧಾಂತ ಚಕ್ರವರ್ತಿ ಎಂಬ ಬಿರುದಿಗಿಂತಲೂ ಸಿದ್ಧಾಂತದೇವ ಎಂಬ ಬಿರುದು ದೊಡ್ಡದಾಗುತ್ತದೆ. ಶ್ರವಣಬೆಳಗೊಳದಲ್ಲಿರುವ 578 ಶಿಲಾಶಾಸನಗಳಲ್ಲಿ ಪ್ರಸಿದ್ಧರಾದ ಮುನಿಗಳನ್ನು ಸಿದ್ಧಾಂತದೇವ ಎಂದು ಕರೆದಿರುವುದು ಕಂಡುಬರುತ್ತದೆ ಸಿದ್ಧಾಂತಚಕ್ರವರ್ತಿ ಎಂದು ಕರೆದ ಮುನಿಗಳ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ ಸಿಗುತ್ತದೆ. ಸೋಮಚಂದ್ರ ಸಿದ್ಧಾಂತ ಚಕ್ರವರ್ತಿ, ನಯಕೀರ್ತಿ ಸಿದ್ಧಾಂತ ಚಕ್ರವರ್ತಿ, ಭಾನುಚಂದ್ರ ಸಿದ್ಧಾಂತ ಚಕ್ರವರ್ತಿ, ಮಾಘನಂದಿ ಸಿದ್ಧಾಂತ ಚಕ್ರವರ್ತಿ— ಇವರೆಲ್ಲಾ ಶ್ರವಣಬೆಳಗೊಳದ ಶಿಲಾಶಾಸನಗಳಲ್ಲಿ ಉಕ್ತರಾದ ಸಿದ್ಧಾಂತ ಚಕ್ರವರ್ತಿ ಎನಿಸಿಕೊಂಡ ಮುನಿಗಳು.

ಚಾಮುಂಡರಾಯನ ಗುರುಗಳಾದ ನೇಮಿಚಂದ್ರಾಚಾರ್ಯರಿಗೂ ಈ ಸಿದ್ಧಾಂತ ಚಕ್ರವರ್ತಿ ಎಂಬುದನ್ನು ಸೇರಿಸಿ ಅವರ ಹೆಸರನ್ನು ಹೇಳುವುದು ಸಂಪ್ರದಾಯವಾಗಿದೆ. ''ಚಾಮುಂಡರಾಯನು ತನ್ನ ಧರ್ಮಗುರುವಾದ ಶ್ರೀ ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳನ್ನು ಪ್ರಾರ್ಥಿಸಿಕೊಂಡು ಅವರನ್ನು ಗುರುಪೀಠಕ್ಕೆ ನೇಮಿಸಿ ಅವರ ವಾಸಕ್ಕಾಗಿ ಶ್ರವಣಬೆಳಗೊಳದಲ್ಲಿ ಒಂದು ಮಠವನ್ನು ಸ್ಥಾಪಿಸಿದನೆಂದೂ ಆದಿನಿಂದ ಇಂದಿನವರೆಗೂ ಈ ಗುರುಪರಂಪರೆಯು ನಡೆದುಬಂದಿರುವುದೆಂದೂ ಸ್ಥಳಪುರಾಣದಿಂದಲೂ ರೈಸ್‌ಗೆಜೆಟಿಯರ್‌ನಿಂದಲೂ ಗೊತ್ತಾಗುತ್ತದೆ.'' ಎಂದು ನೇಮಿಸಾಗರಸ್ವಾಮಿಗಳವರ

---

1 ಸಿದ್ಧಾಂತರಾಜ ಎಂಬ ಪದಪ್ರಯೋಗ ಎಲ್ಲಿಯಾದರೂ ಇದ್ದಂತೆ ಕಂಡುಬರುವುದಿಲ್ಲ.

ಅಭಿನಂದನ ಗ್ರಂಥಗಳಲ್ಲಿ (ಪುಟ 7) ಹೇಳಲಾಗಿದೆ. ಶ್ರವಣಬೆಳಗೊಳದ ಶಾಸನಗಳಲ್ಲಿ ನೇಮಿಚಂದ್ರಾಚಾರ್ಯರನ್ನು 'ನೇಮಿಚಂದ್ರ ಪಂಡಿತದೇವ' ಎಂದೇ ಉಲ್ಲೇಖಿಸ ಲಾಗಿದೆ. ಸಿದ್ಧಾಂತಚಕ್ರವರ್ತಿ ಎಂಬ ವಿಶೇಷಣ ಅವುಗಳಲ್ಲಿ ಸಿಗುವುದಿಲ್ಲ. ನೇಮಿ ಚಂದ್ರಾಚಾರ್ಯರಿಗೆ ಸಿದ್ಧಾಂತಚಕ್ರವರ್ತಿ ಎಂಬ ಬಿರುದು ಹೇಗೆ ಬಂತು ಎಂಬುದರ ಪ್ರಾಚೀನ ಲಿಖಿತ ಆಧಾರಗಳು ಬಹುಶಃ ಇಲ್ಲವೆಂದು ಕಾಣುತ್ತದೆ.

## ತೃಪ್ತಿ ಕಾಣದ ವಾಂಛೆ

ವಿದ್ಯಾನಂದರು 'ಏಲಾಚಾರ್ಯ'ರೆಂದು ಕರೆಸಿಕೊಂಡು ತಾವು ಮಹಾಪುರುಷರು ಅಭಿನವ ಕುಂದಕುಂದರು[1] ಎಂದೆಲ್ಲಾ ಸ್ವತಃ ಪ್ರಚಾರ ಮಾಡಿಸಿಕೊಂಡ ಮೇಲೆ ಅವರ ಆಸೆ ಅಲ್ಲಿಗೇ ನಿಲ್ಲಲಿಲ್ಲ. ಸಿದ್ಧಾಂತಚಕ್ರವರ್ತಿ ಎಂಬ ಪದದ ಮೇಲೆ ಇವರ ಹದ್ದಿನ ಕಣ್ಣು ಬಿದ್ದಿತು. ಸಿದ್ಧಾಂತ ಚಕ್ರವರ್ತಿ ಎಂದು ಪ್ರಚಾರ ಮಾಡಿಸಿಕೊಂಡು ನೇಮಿ ಚಂದ್ರ ಸಿದ್ಧಾಂತ ಚಕ್ರವರ್ತಿಗಳಿಗೆ ಸಮ ಎನ್ನಿಸಿಕೊಳ್ಳಲು ಹಾತೊರೆದರು. 1978ರ ನವೆಂಬರ್ ತಿಂಗಳಿನಲ್ಲಿ ದೆಹಲಿಯನ್ನು ಬಿಟ್ಟಮೇಲೆ ಇವರ ಪ್ರಚಾರಪತ್ರಗಳಲ್ಲಿ ಸಿದ್ಧಾಂತ ಚಕ್ರವರ್ತಿ ಎಂಬುದರ ಪ್ರಯೋಗ ಆಯಿತೋ ಇಲ್ಲವೋ ತಿಳಿಯದು ಆದರೆ ಇವರು 1979ರ ಚಾತುರ್ಮಾಸದ ನಾಟಕವನ್ನು ಇಂದೂರಿನಲ್ಲಿ ಮುಗಿಸಿ, ಶ್ರವಣಬೆಳಗೊಳದ ಕಡೆಗೆ ಹೊರಟಮೇಲೆ ಇನ್ನೂ ಶ್ರವಣಬೆಳಗೊಳವನ್ನು ತಲುಪುವುದಕ್ಕೆ ಮುಂಚೆಯೇ ಪ್ರಚಾರಪತ್ರಗಳಲ್ಲಿ 'ಸಿದ್ಧಾಂತಚಕ್ರವರ್ತಿ' ಪದದ ಪ್ರಯೋಗ ಇವರ ಪರವಾಗಿ ನಡೆಯ ತೊಡಗಿತು.

## ಹೆತ್ತ ತಾಯಿಗೆ ಆಶೀರ್ವಾದ

ವಿದ್ಯಾನಂದರು ಬೆಳಗಾವಿ ಜಿಲ್ಲೆಗೆ 1980ರ ಏಪ್ರಿಲ್ ತಿಂಗಳಿನಲ್ಲಿ ಬಂದಮೇಲೆ ತಮ್ಮನ್ನು ಹೆತ್ತ ತಾಯಿಯಾದ ಶ್ರೀಮತಿ ಸರಸ್ವತಿಬಾಯಿಯವರನ್ನು ಕಂಡರು. ಅವರ ತಲೆಯಮೇಲೆ ಪಿಂಛವನ್ನಿಟ್ಟು ಆಶೀರ್ವಾದ ಮಾಡುತ್ತಿರುವ ಭಂಗಿಯಲ್ಲಿ ಒಂದು ಫೋಟೋವನ್ನು ಸಹ ತೆಗೆಸಿಕೊಂಡರು. ಫೋಟೋ ತೆಗೆಯುತ್ತಿರುವಾಗ ವಿದ್ಯಾನಂದರು ಬಲಗೈನಲ್ಲಿ ಹಿಡಿದಿರುವ ಪಿಂಛ ಸರಸ್ವತಿಬಾಯಿಯವರ ತಲೆಯಮೇಲಿದೆ. ವಿದ್ಯಾ ನಂದರ ಎರಡು ಕಣ್ಣುಗಳೂ ಕ್ಯಾಮರವನ್ನು ನೋಡುತ್ತಿವೆ. ಒಂದು ಕೊರಡಿಯ ಮಂಚದ ಮೇಲೆ ಅವರು ಕುಳಿತಿದ್ದಾರೆ. ಅವರ ತಾಯಿ ನೆಲದಮೇಲೆ ಕುಳಿತು ಎರಡೂ ಕೈಗಳನ್ನು ಜೋಡಿಸಿ ನಮಸ್ಕರಿಸುವ ಭಂಗಿಯಲ್ಲಿದ್ದಾರೆ. ವಿದ್ಯಾನಂದರು ಕುಳಿತಿರುವ

---

1. ಜಿ. ಬ್ರಹ್ಮಪ್ಪನವರು ತಮ್ಮ 'ಮುನಿವಿದ್ಯಾನಂದ' ಪುಸ್ತಕದಲ್ಲಿ ವಿದ್ಯಾನಂದರನ್ನು ಅಭಿನವ ಕುಂದ ಕುಂದ ಎಂದು ಹೊಗಳಿರುವುದನ್ನು ವಿದ್ಯಾನಂದರು ಒಪ್ಪಿಕೊಂಡಿರುವುದಕ್ಕೆ ಅದೇ ಪುಸ್ತಕದಲ್ಲಿ ಸಮರ್ಥನೆಯಿದೆ. (ಪುಟ 177 ಮತ್ತು 'ಮೊದಲ ಮಾತು' ವಿಭಾಗ ನೋಡಿ)

ಮಂಚದ ಕೆಳಗೆ ಬೀಗಹಾಕಿದ ಕಬ್ಬಿಣದ ಒಂದು ಪೆಟ್ಟಿಗೆಯಿದೆ. ಮಂಚದ ಮೇಲೆ ಅವರ ಬಲಮಂಡಿಯ ಕೆಳಭಾಗದಲ್ಲಿ ಬೀಗದ ಕೈನ ಒಂದು ಗೊಂಚಲಿದೆ. ಅವರ ಬಲಪಕ್ಕದಲ್ಲಿ ಮಂಚದ ಮೇಲಿಟ್ಟಿರುವ ಒಂದು ಸ್ಟೂಲಿನ ಕೆಳಗಡೆ ಒಂದು ಟೇಪ್ ರೆಕಾರ್ಡರ್ ಇದೆ. ಈ ಸ್ಥಿತಿಯಲ್ಲಿ ಸರ್ವಸಂಗ ಪರಿತ್ಯಾಗಿಗಳಾದ (?) ವಿದ್ಯಾನಂದರು ಜನ್ಮ ನೀಡಿದ 'ಮಾತೃದೇವತೆ'ಯಾದ ತಾಯಿಗೆ ಆಶೀರ್ವಾದ ಮಾಡುತ್ತಿದ್ದಾರೆ[1].

ಇನ್ನೂ ವಿಶೇಷವೆಂದರೆ ಈ ಫೋಟೋದ ಪ್ರತಿಗಳನ್ನು ಮಾಡಿ ಅದನ್ನು ಮಾರಾಟಕ್ಕಾಗಿಯೂ ಬಿಡುಗಡೆ ಮಾಡಲಾಗಿದೆ. ಧಾರವಾಡದ ಮುದ್ರಣಾಲಯ ವೊಂದರಲ್ಲಿ ಮುದ್ರಿತವಾದ ಫೋಟೋ ಅಂಟಿಸುವ ಮೌಂಟಿನಲ್ಲಿರುವ ಫೋಟೋದ ವಿವರಣೆ ಹೀಗಿದೆ : "ಓಂ ನಮಃ, ಸಿದ್ಧಾಂತಚಕ್ರವರ್ತಿ ಪೂಜ್ಯ ಶ್ರೀ ಏಲಾಚಾರ್ಯ ವಿದ್ಯಾನಂದಜಿ. ಶ್ರೀ ಬಾಹುಬಲಿಸ್ವಾಮಿಯ 1000 ವರುಷದ ಸಹಸ್ರಾಬ್ದಿ ಮಹೋತ್ಸವ ಹಾಗೂ ಮಹಾಮಸ್ತಕಾಭಿಷೇಕದ ನಿಮಿತ್ತವಾಗಿ ಶ್ರವಣಬೆಳಗೊಳಕ್ಕೋಸ್ಕರ ಮಂಗಲ ವಿಹಾರ."

ವಿದ್ಯಾನಂದರು ಶ್ರವಣಬೆಳಗೊಳವನ್ನು ತಲುಪುವುದಕ್ಕೆ ಸಾಕಷ್ಟು ಕಾಲ ಮುಂಚಿತ ವಾಗಿಯೇ ಅವರನ್ನು ಸಿದ್ಧಾಂತ ಚಕ್ರವರ್ತಿ ಎಂದು ಕರೆದಿರುವುದನ್ನು ಮೇಲಿನ ದೃಷ್ಟಾಂತ ಸ್ಪಷ್ಟಪಡಿಸುತ್ತದೆ. ಸಿದ್ಧಾಂತ ಚಕ್ರವರ್ತಿ ಎಂಬ ಪದ ಹೀಗೆ ಪ್ರಚಾರ ಸಾಧನಗಳಲ್ಲಿ ಪ್ರಕಟವಾಗುವುದಕ್ಕೆ ವಿದ್ಯಾನಂದರ ಕೈವಾಡವೇ ಕಾರಣವೆಂಬುದರಲ್ಲಿ ಸಂಶಯವಿಲ್ಲ.

## ಕರಪತ್ರ ಮತ್ತು ಇತರ ಪತ್ರಿಕೆಗಳಲ್ಲಿ

ವಿದ್ಯಾನಂದರು 1980 ರ ಜುಲೈ 20 ರಂದು ಶ್ರವಣಬೆಳಗೊಳಕ್ಕೆ ಆಗಮಿಸಿದ ಸಂದರ್ಭದಲ್ಲಿ ಶ್ರವಣಬೆಳಗೊಳದ ಸ್ವಾಗತಸಮಿತಿಯವರು ಚನ್ನರಾಯಪಟ್ಟಣದ ನ್ಯಾಷನಲ್ ಪ್ರೆಸ್‌ನಲ್ಲಿ ಮುದ್ರಣ ಮಾಡಿಸಿ ಹಂಚಿದ ಪರಿಚಯಾತ್ಮಕ ಕರಪತ್ರದ ಎರಡನೇ ವಾಕ್ಯವೃಂದದಲ್ಲಿ ವಿದ್ಯಾನಂದರನ್ನು ಸಿದ್ಧಾಂತ ಚಕ್ರವರ್ತಿ ಎಂದು ಕರೆದಿದ್ದಾರೆ. ಆ ಭಾಗ ಹೀಗಿದೆ : "ಸಿದ್ಧಾಂತ ಚಕ್ರವರ್ತಿ, ಸಂತಶಿರೋಮಣಿ, ಏಲಾಚಾರ್ಯ

---

1. ಜನ್ಮದಾತೆಯಾದ ತಾಯಿಗೆ ಮುನಿದೀಕ್ಷೆ ಪಡೆದವರು ಅದರಲ್ಲೂ ದೀಕ್ಷೆ ಪಡೆದು ಅದರಂತೆ ಆಚರಿಸದವರು ಆಶೀರ್ವಾದ ಮಾಡುವುದು ಹೇಗೆ ಸಮಂಜಸ ಎಂಬುದನ್ನು ಅಭ್ಯಾಸಿಗಳು ವಿವರಿಸ ಬೇಕು. ಜೈನ ಸಾಹಿತ್ಯ ಶಾಸ್ತ್ರಗ್ರಂಥಗಳಲ್ಲಿ ಇಂತಹ ಪ್ರಸಂಗಗಳಿವೆಯೇ ? ಇತರ ಧರ್ಮಗಳಲ್ಲಿ ಇಂತಹ ಸನ್ನಿವೇಶ ಬಂದಾಗ ದೀಕ್ಷಾಧಾರಿಗಳ ನಡವಳಿಕೆಯೇನು ? ಮುಂತಾದ ವಿಚಾರಗಳು ವಿಚಾರ ಣೀಯ. ಆದಿಶಂಕರರು ದೀಕ್ಷಾಬದ್ಧರಾದ ನಂತರವೂ ತಾಯಿಯನ್ನು ದೇವರೆಂದು ಪರಿಗಣಿಸಿ ವಂದಿಸಿ ದರೆಂದು ನಾನು ಕೇಳಿದ್ದೇನೆ.

ಶ್ರೀ ವಿದ್ಯಾನಂದ ಮುನಿ ಮಹಾರಾಜರು ಉತ್ತರದಿಂದ ದಕ್ಷಿಣದ ಗೋಮಟೇಶ್ವರ ಕ್ಷೇತ್ರದತ್ತ ಸಾರುತ್ತಾ .. ಹಾದಿಯನ್ನು ಮುಗಿಸಿ ಜುಲೈ 20 ರಂದು ಕ್ಷೇತ್ರಕ್ಕೆ ಮಂಗಲ ಪ್ರವೇಶವನ್ನು ಮಾಡಿದ್ದಾರೆ''

ಶ್ರವಣಬೆಳಗೊಳದ ಸ್ವಾಗತಸಮಿತಿಯೆಂದರೆ ಅದರ ಸೂತ್ರದಾರರು ಚಾರು ಕೀರ್ತಿಸ್ವಾಮಿಗಳೆಂಬುದು ಸ್ವಯಂವೇದ್ಯ. ಚಾರುಕೀರ್ತಿಗಳು ತಾವು ವಿದ್ಯಾನಂದರ ಕೈಗೊಂಬೆಯೆಂಬುದು ಈಗಾಗಲೇ ಬಹಿರಂಗವಾಗಿರುವ ಸಂಗತಿ. ಅಲ್ಲಿಗೆ ಸಿದ್ಧಾಂತಚಕ್ರ ವರ್ತಿ, ಸಂತಶಿರೋಮಣಿ, ಎಂಬೆಲ್ಲಾ ಶಬ್ದಗಳು ಕರಪತ್ರದಲ್ಲಿ ಕಾಣಿಸಿಕೊಳ್ಳಲು ವಿದ್ಯಾನಂದರು ಕೈವಾಡ ನಡೆಸಿಲ್ಲ ಎಂದು ಹೇಳಲು ಅವಕಾಶವಾಗುವುದಿಲ್ಲ. ವಿದ್ಯಾ ನಂದರ ಸ್ವಾಗತ, ಮೆರವಣಿಗೆ, ಪ್ರಚಾರ—ಇವುಗಳ ಹಿಂದೆಲ್ಲಾ ಸ್ವತಃ ವಿದ್ಯಾಂದರೇ ಇರುವುದು ಈಗಾಗಲೇ ರುಜುವಾತಾದ ಸಂಗತಿ. ಹೀಗೆ ಸಿದ್ಧಾಂತ ಚಕ್ರವರ್ತಿ ಎಂಬ ಶಬ್ದ ನಾಣ್ಯವನ್ನು ವಿದ್ಯಾನಂದರು ತಾವು ಶ್ರವಣಬೆಳಗೊಳ ಸೇರುವುದಕ್ಕೆ ಮುಂಚೆಯೇ ಮುದ್ರಿಸಿ ಚಲಾವಣೆಗೆ ತಂದರು.

ಶ್ರವಣಬೆಳಗೊಳದ ಜೈನಮಠದ ಮೂಲಕ ಪ್ರಕಟವಾಗುವ 'ಗೊಮ್ಮಟವಾಣಿ' ಪಾಕ್ಷಿಕ ಪತ್ರಿಕೆ 1981 ರ ಸಹಸ್ರಾಬ್ದಿ ಮಹೋತ್ಸವಕ್ಕೆ ಮೊದಲಿನಿಂದಲೂ ಈ 'ಸಿದ್ಧಾಂತ ಚಕ್ರವರ್ತಿ' ಪದವನ್ನು ವಿದ್ಯಾನಂದರ ಹೆಸರಿನ ಜೊತೆ ಉಪಯೋಗಿಸುತ್ತಾ ಬಂದಿದೆ. ನಿದರ್ಶನಕ್ಕೆ ತಾ. 1-5-1980 ರ ಸಂಚಿಕೆಯ ಸ್ವಾಗತಪುರವಣಿಯ ಸಂಪಾದಕೀಯದಲ್ಲೂ ಮತ್ತು ತಾ. 15-7-1980 ರ ಸಂಚಿಕೆಯ ಸಂಪಾದಕೀಯ ದಲ್ಲೂ ವಿದ್ಯಾನಂದರ ಹೆಸರಿನ ಜೊತೆ ಸಿದ್ಧಾಂತ ಚಕ್ರವರ್ತಿ ಶಬ್ದವನ್ನು ಉಪಯೋಗಿ ಸಿದ್ದಾರೆ. ಇದೇ ಸಂಚಿಕೆಯ ಎಂಟನೇ ಪುಟದಲ್ಲಿ ವಿದ್ಯಾನಂದರ ಭಾವಚಿತ್ರ ಹಾಕಿ ಸಿದ್ಧಾಂತಚಕ್ರವರ್ತಿ ಎಂದು ಕರೆದಿದ್ದಾರೆ.

ಶ್ರೀ ಬಿ. ಬಿ. ಮಹೀಶವಾಡಿ ಎಂಬುವರು ಶಾಸ್ತ್ರದಾನಕ್ಕಾಗಿ ಬರೆದಿರುವ ಮಹಾವೀರರು ಹಾಗೂ ಅವರ ತತ್ವಸಂದೇಶ, ಎಂಬ ಕಿರುಪುಸ್ತಕದಲ್ಲಿ ಗೊಮ್ಮಟನ ಹಿನ್ನೆಲೆಯಿರುವ ವಿದ್ಯಾನಂದರ ಭಾವಚಿತ್ರದ ಕೆಳಗೆ 'ಸಿದ್ಧಾಂತಚಕ್ರವರ್ತಿ' ಎಂಬು ದನ್ನು ಬಳಸಲಾಗಿದೆ. ಈ ಪುಸ್ತಕ ತಾ. 20-5-80 ರಲ್ಲಿ ಧಾರವಾಡದಿಂದ ಬಿಡುಗಡೆ ಯಾಗಿದೆ.

ಬೆಂಗಳೂರಿನಿಂದ ಪ್ರಕಟವಾಗುವ 'ಪ್ರಜಾಮತ' ವಾರ ಪತ್ರಿಕೆಯ ತಾ. 8-2-1981 ರ ಸಂಚಿಕೆಯಲ್ಲಿ ಶ್ರವಣಬೆಳಗೊಳದ ಚಾರುಕೀರ್ತಿಸ್ವಾಮಿಗಳು ಬರೆದ 'ಬಾಹುಬಲಿ ಪ್ರತಿಮಾ ಸಂದೇಶ' ಎಂಬ ಲೇಖನದಲ್ಲಿ ವಿದ್ಯಾನಂದರನ್ನು ಸಿದ್ಧಾಂತ ಚಕ್ರವರ್ತಿ ಎಂದು ಸ್ಪಷ್ಟವಾಗಿ ಕರೆದಿದ್ದಾರೆ.

## ಗುರು ದೇಶಭೂಷಣರನ್ನು ವಂಚಿಸಿದ್ದು

ವಿದ್ಯಾನಂದರು ಪ್ರಚಾರದಿಂದ ದೊಡ್ಡವರೆನಿಸಿಕೊಂಡು ಶ್ರವಣಬೆಳಗೊಳದಲ್ಲಿ ಸ್ಥಾಪಿತರಾದ ಮೇಲೆ ಸಹಸ್ರಾಬ್ದಿಮಹೋತ್ಸವ ಹತ್ತಿರವಾಯಿತು. ಈ ಮಹೋತ್ಸವದ ಆಹ್ವಾನ ಭಾರತದಾದ್ಯಂತ ಇದ್ದ ದಿಂಗಬರ ಮುನಿಸಂಘಗಳಿಗೆ ಹೋಯಿತೋ ಇಲ್ಲವೋ ತಿಳಿಯದು ! ವಿದ್ಯಾನಂದರ ದೀಕ್ಷಾಗುರುಗಳಾದ ಆಚಾರ್ಯರತ್ನ ದೇಶಭೂಷಣರು ಈ ಸಮಯದಲ್ಲಿ ಬೆಳಗಾವಿ ಜಿಲ್ಲೆಯ ಕೋಥಳಿಯಲ್ಲಿದ್ದರು. ವಿಶೇಷವಾದ ಮಹಾಮಸ್ತಕಾಭಿಷೇಕ ಹತ್ತಿರವಾಗುತ್ತಿದ್ದರೂ ಇವರಿಗೆ ಯಾವ ಆಹ್ವಾನವೂ ಬರಲಿಲ್ಲ. ಅಂತೂ ಭಕ್ತರೊಬ್ಬರು ಮಾಡಿದ ವ್ಯವಸ್ಥೆಯಿಂದಾಗಿ ದೇಶಭೂಷಣರು ಶ್ರವಣಬೆಳಗೊಳದ ಕಡೆಗೆ ವಿಹಾರ ಹೊರಟರು. ಈ ಸುದ್ದಿ ಶ್ರವಣಬೆಳಗೊಳವನ್ನು ತಲುಪಿದ್ದೇ ತಡ ತಕ್ಷಣ ಮಸ್ತಕಾಭಿಷೇಕಕ್ಕಾಗಿ ದೇಶಭೂಷಣರನ್ನು ಆಹ್ವಾನಿಸುವುದರ ಕಡೆಗೆ ಸಂಬಂಧಪಟ್ಟವರು ಗಮನಕೊಟ್ಟರು. ದೇಶಭೂಷಣರು ಕೋಥಳಿಯನ್ನು ಬಿಟ್ಟು ಬಹಳದೂರ ಬಂದನಂತರ ಅವರಿಗೆ ಮಸ್ತಕಾಭಿಷೇಕದ ಆಹ್ವಾನ ನೀಡಲಾಯಿತು.

ದೀಕ್ಷಾಗುರುವನ್ನು ಉಪೇಕ್ಷೆ ಮಾಡಿ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕದ ಪ್ರಧಾನ ವ್ಯಕ್ತಿಯಾಗಿ ಸ್ಥಾಪಿತರಾಗಿದ್ದ ವಿದ್ಯಾನಂದರಿಗೆ ದೇಶಭೂಷಣರು ಶ್ರವಣಬೆಳಗೊಳದ ಕಡೆಗೆ ವಿಹಾರ ಹೊರಟಿರುವುದು ಸಹ್ಯವಾಗಲಿಲ್ಲ. ಆದರೆ ಗುರುವಿನ ಆಗಮನವನ್ನು ತಪ್ಪಿಸುವ ಶಕ್ತಿಯೇನೂ ವಿದ್ಯಾನಂದರಿಗಿರಲಿಲ್ಲ. ಈ ಸಂದರ್ಭದಲ್ಲಿ ವಿದ್ಯಾನಂದರು ಮಾಡಬಹುದಾಗಿದ್ದ ಕಾರ್ಯಗಳಾದರೂ ಏನು ? ತಾವು ನಿಜವಾಗಿ ಗುರುಭಕ್ತಿಯುಳ್ಳವರಾಗಿದ್ದರೆ, ಗುರುವಿನ ಮುಂದೆ ಶಿಷ್ಯ ಪ್ರಧಾನ ವ್ಯಕ್ತಿಯಾಗಿ ಮೆರೆಯುವುದು ಸರಿಯಲ್ಲ ಎಂದು ಗುರುವಿಗೆ ವಿಧೇಯರಾಗಿ ಅಗ್ರಮನ್ನಣೆಯನ್ನು ನೀಡಿ ತಾವು ಹಿಂದೆ ನಿಲ್ಲಬಹುದಾಗಿತ್ತು. ಆದರೆ ವಿದ್ಯಾನಂದರ ಜಾಯಮಾನ ಇದಾಗಿರಲಿಲ್ಲ. ದೇಶಭೂಷಣರು ಶ್ರವಣಬೆಳಗೊಳಕ್ಕೆ ಬಂದಾಗ ಅಲ್ಲಿ ಅವರ ಹಾಜರಿಯು ದುರ್ಲಾಭಪಡೆದು ಅವರನ್ನು ವಂಚಿಸಿ ತಾವು ಇಷ್ಟು ದಿವಸಗಳ ಕಾಲ ಮುಚ್ಚುಮರೆಯಲ್ಲಿ ಉಪಯೋಗಿಸಿಕೊಳ್ಳುತ್ತಿದ್ದ ಸಿದ್ಧಾಂತಚಕ್ರವರ್ತಿ ಶಬ್ದವನ್ನು ಸಕ್ರಮಗೊಳಿಸಿಕೊಳ್ಳಲು ಒಳಸಂಚೊಂದನ್ನು ಮಾಡಿದರು. ಯಥಾಪ್ರಕಾರ ವಿದ್ಯಾನಂದರ ದಳ್ಳಾಳಿಗಳು ಈ ಒಳಸಂಚನ್ನು ಜಾರಿಗೆ ಕೊಡಲು ಸಿದ್ಧವಾಗಿಯೇ ಇದ್ದರು. ದೇಶಭೂಷಣರು 1981ರ ಫೆಬ್ರವರಿ ತಿಂಗಳಿನಲ್ಲಿ ಶ್ರವಣಬೆಳಗೊಳವನ್ನು ಪ್ರವೇಶಿಸಿ ಅಲ್ಲಿ ಬಿಡಾರ ಹೂಡಿದರು. ವಿದ್ಯಾನಂದರು ಅವರನ್ನು ವಂಚಿಸಲು ಸಕಲ ವ್ಯವಸ್ಥೆಯನ್ನೂ ಮಾಡಿದರು.

1981ರ ಫೆಬ್ರವರಿ ತಿಂಗಳಿನಲ್ಲಿ ಮಸ್ತಕಾಭಿಷೇಕ ಆರಂಭವಾದ ದಿನಗಳಲ್ಲಿ ಬಹಿರಂಗ ಸಭೆಯೊಂದು ಶ್ರವಣಬೆಳಗೊಳದಲ್ಲಿ ನಡೆಯಿತು. ಇದರಲ್ಲಿ ಆಚಾರ್ಯ

ದೇಶಭೂಷಣರು, ಆಚಾರ್ಯ ವಿಮಲಸಾಗರರು ಮುಂತಾದವರೊಂದಿಗೆ ವಿದ್ಯಾನಂದರು ಕುಳಿತಿರುವಾಗ ವಿದ್ಯಾನಂದರ ಸವಿಾಪವರ್ತಿಗಳಾದವರೊಬ್ಬರು ವಿದ್ಯಾನಂದರು ಮಾಡಿದ ಒಳಸಂಚನ್ನು ತಿಳಿದೋ ತಿಳಿಯದೆಯೋ ದೇಶಭೂಷಣರ ಕಡೆ ಗಮನಹರಿಸಿ "ವಿದ್ಯಾನಂದರನ್ನು ಸಿದ್ಧಾಂತಚಕ್ರವರ್ತಿ ಎಂದು ಕರೆಯಬೇಕೆಂಬುದಾಗಿ ನಮ್ಮೆಲ್ಲರ ಅಪೇಕ್ಷೆಯಿದೆ. ಇದಕ್ಕೆ ತಾವು ಒಪ್ಪಿಗೆ ಸೂಚಿಸಬೇಕು" ಎಂದೇನೋ ಮುಂತಾಗಿ ಹೇಳಿದರು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ದೇಶಭೂಷಣರು ಖಚಿತವಾದ ತಮ್ಮ ಅಭಿಪ್ರಾಯವನ್ನಾಗಲೀ ಅಥವಾ ಒಪ್ಪಿಗೆಯನ್ನಾಗಲೀ ಸೂಚಿಸಲಿಲ್ಲ. ಇದಕ್ಕೆ ಮುಂಚೆ ಈ ವಿಚಾರವಾಗಿ ದೇಶಭೂಷಣರಿಗೆ ಯಾವ ಮಾಹಿತಿಯನ್ನೂ ಸಂಬಂಧಪಟ್ಟವರು ಒದಗಿಸಿರಲಿಲ್ಲ ಅಥವಾ ಇದರ ಬಗ್ಗೆ ಪೂರ್ವಭಾವಿಯಾಗಿ ಯಾವ ಸಲಹೆಯನ್ನೂ ಕೇಳಿರ ಲಿಲ್ಲ. ತುಂಬಿದ ಸಭೆಯಲ್ಲಿ ಇದ್ದಕ್ಕಿದ್ದಂತೆ ವಿದ್ಯಾನಂದರಿಗೆ 'ಸಿದ್ಧಾಂತ ಚಕ್ರವರ್ತಿ' ಎಂದು ಕರೆಯಲು ನಮ್ಮ ಅಪೇಕ್ಷೆಯಿದೆ ಅದಕ್ಕೆ ನೀವು ಒಪ್ಪಬೇಕು ಎಂದೇನೋ ಕೇಳಿ ದಾಗ ದೇಶಭೂಷಣರ ಮನಸ್ಥಿತಿ ಹೇಗಾಗಿರಬೇಕು ! ವಿದ್ಯಾನಂದರ ಒಳಸಂಚಿನ ಅರಿವು ತಕ್ಷಣ ಅವರಿಗಾಯಿತು. ಆದರೆ ಬಹಿರಂಗ ಸಭೆಯಲ್ಲಿ ಈ ವಿಚಾರವಾಗಿ ರಾದ್ಧಾಂತ ವೊಂದನ್ನು ಆ ಸಂದರ್ಭದಲ್ಲಿ ಉಂಟು ಮಾಡಲು ಅವರು ಇಷ್ಟಪಡಲಿಲ್ಲ. ಈ ಅನಿರೀಕ್ಷಿತ ಕೋರಿಕೆಗೆ ಯಾವ ಪ್ರತಿಕ್ರಿಯೆಯನ್ನೂ ತೋರದೆ ಸುಮ್ಮನಿದ್ದರು. ದೇಶ ಭೂಷಣರ ಈ ತಟಸ್ಥ ನೀತಿಯನ್ನೇ ಒಪ್ಪಿಗೆಯೆಂದು ಭಾವಿಸಿದ ಕೆಲವರು ದೇಶ ಭೂಷಣರು ವಿದ್ಯಾನಂದರನ್ನು 'ಸಿದ್ಧಾಂತ ಚಕ್ರವರ್ತಿ' ಎಂದು ಕರೆದು ಮನ್ನಿಸಿದ್ದಾರೆ ಎಂದು ಪ್ರಚಾರ ಮಾಡಿದರು. ಇದರ ಪಿತೂರಿ ಒಳಸಂಚು ಇತ್ಯಾದಿಗಳನ್ನು ತಿಳಿಯದ ಜನರು ಇದು ನಿಜವಿರಬಹುದು ಎಂದು ಭಾವಿಸಿದರು.

ತಮ್ಮ ಗುರುವನ್ನು ವಂಚಿಸಿದ ಈ ಘಟನೆಯಾದ ಮೇಲೆ ವಿದ್ಯಾನಂದರು ತಮ್ಮ ಪ್ರಚಾರ ಸಾಧನಗಳಲ್ಲಿ 'ಸಿದ್ಧಾಂತ ಚಕ್ರವರ್ತಿ' ಎಂಬ ಶಬ್ದ ತಮ್ಮ ಹೆಸರಿನ ಜೊತೆ ಪ್ರಧಾನವಾಗಿ ಎದ್ದು ಕಾಣುವಂತೆ ಉಪಯೋಗವಾಗುವ ಹಾಗೆ ನೋಡಿಕೊಂಡರು. ಇದುವರೆಗೂ ಒಳಗಿನ ಪುಟಗಳಲ್ಲಿ ಲೇಖನದೊಳಗಡೆ ಮುಚ್ಚುಮರೆಯಿಂದ ಈ ಶಬ್ದ ವನ್ನು ಉಪಯೋಗಿಸುತ್ತಿದ್ದ 'ಗೊಮ್ಮಟವಾಣಿ' ಪತ್ರಿಕೆ ಈ ವಂಚನೆಯ ನಾಟಕವಾದ ನಂತರ ಆ ಶಬ್ದವನ್ನು ಮುಖಪುಟದಲ್ಲಿ ಶೀರ್ಷಿಕೆಯ ಜೊತೆ ಉಪಯೋಗಿಸ ಲಾರಂಭಿಸಿತು. ಹೀಗೆ ಮಸ್ತಕಾಭಿಷೇಕ ಸಮಯದಲ್ಲಿ ಹಾಜರಿದ್ದ ಗುರು ದೇಶ ಭೂಷಣರನ್ನು ಶಿಷ್ಯ ವಿದ್ಯಾನಂದರು ಬಹಳ ವ್ಯವಸ್ಥಿತವಾಗಿ ವಂಚಿಸಿ ತಮ್ಮ ವಂಚನೆಯ ದುಷ್ಕೃತ್ಯಗಳ ಸರಮಾಲೆಗೆ ಈ ಒಂದು ಪ್ರಕರಣವನ್ನೂ ಸಹ ಸೇರಿಸಿಕೊಂಡರು.

**ದೇಶಭೂಷಣರನ್ನು ಉಪೇಕ್ಷಿಸಿದ್ದು**

ವಿದ್ಯಾನಂದರು ದೇಶಭೂಷಣರ ಹಾಜರಿಯ ದುರ್ಲಾಭ ಪಡೆದು ಸಿದ್ಧಾಂತ ಚಕ್ರವರ್ತಿಯೆಂದು ಕರೆಸಿಕೊಂಡಿದ್ದನ್ನು ಕಂಡು ದೇಶಭೂಷಣರ ಅಭಿಮಾನೀ ಶಿಷ್ಯ

ವರ್ಗಕ್ಕೆ ಬಹಳ ಬೇಸರವುಂಟಾಯಿತು. ಈ ಮುಂಚೆ ದೇಶಭೂಷಣರು ಶ್ರವಣ ಬೆಳಗೊಳಕ್ಕೆ ಆಗಮಿಸಿದ ಸಂದರ್ಭದಲ್ಲಿ ಮಸ್ತಕಾಭಿಷೇಕದ ವ್ಯವಸ್ಥಾಪಕರು ದೇಶ ಭೂಷಣರನ್ನು ಉಪೇಕ್ಷೆಯಿಂದ ಕಂಡದ್ದು, ಅವರ ವಸತಿಯ ವಿಚಾರದಲ್ಲಾಗಲೀ ಒಂದು ಒಳ್ಳೆಯ ವ್ಯವಸ್ಥೆಯನ್ನು ಮಾಡದೇ ಇದ್ದದ್ದು, ಅಭಿಮಾನಿ ಶಿಷ್ಯವರ್ಗಕ್ಕೆ ಬಹಳ ನೋವನ್ನುಂಟು ಮಾಡಿತ್ತು. ವಿದ್ಯಾನಂದರು ಶ್ರವಣಬೆಳಗೊಳಕ್ಕೆ ಬಂದಾಗ ಕ್ಷೇತ್ರದ ತೇರು ನಿಲ್ಲುವ ಮನೆಯನ್ನೇ ಧ್ವಂಸ ಮಾಡಿ ಆ ಸ್ಥಳದಲ್ಲಿ ಅವರಿಗೆ ಆಧುನಿಕ ಸೌಲಭ್ಯಗಳುಳ್ಳ 'ತ್ಯಾಗಿನಿವಾಸ'ವೆಂಬ ಭೋಗಮಂದಿರವನ್ನು ಕ್ಷೇತ್ರದ ವ್ಯವಸ್ಥಾಪಕರು ಕಟ್ಟಿಸಿಕೊಟ್ಟಿದ್ದರು. ಅದೇ ಆ ವಿದ್ಯಾನಂದರ ದೀಕ್ಷಾ ಗುರುಗಳಾದ ದೇಶಭೂಷಣರು ಬಂದಾಗ ವ್ಯವಸ್ಥಾಪಕರು ದೇಶಭೂಷಣರ ಇಳಿ ವಯಸ್ಸನ್ನೂ ಲೆಕ್ಕಿಸದೆ ಅವರನ್ನು ಒಂದು ಸಾಧಾರಣವಾದ ವಸತಿಯಲ್ಲಿ ಇಳಿಸಿ ಅಕ್ಷಮ್ಯವಾದ ಭೇದಭಾವವನ್ನೂ ಉಪೇಕ್ಷೆ ಯನ್ನೂ ತೋರಿಸಿದ್ದರು.

ವಿದ್ಯಾನಂದರು ತಮ್ಮ ಸ್ವಾಗತ ಸಮಾರಂಭಕ್ಕಾಗಿ ಇಪ್ಪತ್ತೈದು ಸಾವಿರ ರೂಪಾಯಿ ಹಣ ಬಿಡುಗಡೆ ಮಾಡಲಿಲ್ಲವೆಂಬ ಕಾರಣಕ್ಕಾಗಿ ತಾ॥ 14 7-80 ರಂದು ಬೆಳ್ಳೂರಿನಲ್ಲಿ, ವಿರೋಧ ವ್ಯಕ್ತಪಡಿಸಿದವರ ಮೇಲೆ ತಮ್ಮ ಗಂಟಲು ಹರಿಯು ವಂತೆ ಕೂಗಾಡಿದ್ದ[1]ವರು, ತಮ್ಮ ದೀಕ್ಷಾ ಗುರುಗಳಾದ ದೇಶಭೂಷಣರ ಸಂಭ್ರಮದ ಸ್ವಾಗತಕ್ಕಾಗಲೀ, ಉತ್ತಮವಾದ ವಸತಿ ವ್ಯವಸ್ಥೆಗಾಗಲೀ ಚಕಾರ ಶಬ್ದವನ್ನೂ ಎತ್ತ ಲಿಲ್ಲ. ಬದಲಾಗಿ ದೇಶಭೂಷಣರು ಸಾಮಾನ್ಯ ವಸತಿಯಲ್ಲಿದ್ದುಕೊಂಡು ಪರೀಷಹ ಬಾಧೆಗಳನ್ನು ಸಹಿಸುತ್ತಿದ್ದರೆ, ಶಿಷ್ಯರಾದ ವಿದ್ಯಾನಂದರು ಸುಸಜ್ಜಿತವಾದ ಬಂಗಲೆ ಯಲ್ಲಿದ್ದುಕೊಂಡು, ಪ್ರಾಣಭೀತಿಯಿಂದ ಮತ್ತು ತಮ್ಮ ದುರ್ವ್ಯವಹಾರಗಳ ರಹಸ್ಯ ಪಾಲನೆಯ ದೃಷ್ಟಿಯಿಂದ ದ್ವಾರಪಾಲಕನನ್ನು ನೇಮಿಸಿಕೊಂಡು ಸುಖಭೋಗಗಳಲ್ಲಿ ಮಗ್ನರಾಗಿರುತ್ತಿದ್ದರು. ಮಸ್ತಕಾಭಿಷೇಕಕ್ಕೆ ಬಂದಿದ್ದ ಜನರಿಗೆ ಈ ವಿಪರ್ಯಾಸಗಳೆಲ್ಲ ಅರ್ಥವಾಗಿ ಮನ ನೊಂದುಕೊಂಡರು.

## ದೇಶಭೂಷಣರ ಸ್ಪಷ್ಟೀಕರಣ

ಪ್ರದರ್ಶನಾತ್ಮಕ ಧಾರ್ಮಿಕತೆಗೆ ಪಟ್ಟಕಟ್ಟಿ ನೀತಿಯನ್ನು ತುಚ್ಛವಾಗಿ ಕಂಡಿದ್ದ ಶ್ರವಣಬೆಳಗೊಳದಲ್ಲಿ ದೇಶಭೂಷಣರು ಹೆಚ್ಚು ದಿನ ಉಳಿಯಲು ಇಷ್ಟಪಡಲಿಲ್ಲ. ಅವರು ದಕ್ಷಿಣ ಕನ್ನಡ ಜಿಲ್ಲಾಭಿಮುಖವಾಗಿ ವಿಹಾರ ಹೊರಟು ಕೋಥಳಿಯನ್ನು ತಲುಪಿದರು. ಈ ಸಮಯದಲ್ಲಿ ಉತ್ತರ ಭಾರತದ ಸುರೇಶ್‌ಕುಮಾರ್‌ಜೈನ್ ಎಂಬು ವರು ದೇಶಭೂಷಣರನ್ನು ಕಂಡು ವಿದ್ಯಾನಂದರನ್ನು ಸಿದ್ಧಾಂತಚಕ್ರವರ್ತಿಯೆಂದು

---

1. ವಿವರಗಳಿಗೆ ಇದೇ ಲೇಖಕರ 'ಮುನಿ ವಿದ್ಯಾನಂದರು ಸುಳ್ಳಾಡಿದ್ದೇಕೆ ?' ಪುಸ್ತಕ ಓದಿ.

ಕರೆದುದು ಸರಿಯೇ ? ಸಿದ್ಧಾಂತ ಚಕ್ರವರ್ತಿ ಎಂಬ ಉಪಾಧಿಯನ್ನು ತಾವು ಕೊಟ್ಟಿದ್ದೀರಿ ಎಂದು ವಿದ್ಯಾನಂದರ ಕಡೆಯವರು ಪ್ರಚಾರ ಮಾಡುತ್ತಿದ್ದಾರೆ. ಇದು ನಿಜವಾದುದೇ ? ಎಂದು ಮುಂತಾಗಿ ಪ್ರಶ್ನೆ ಹಾಕಿದರು. ಇದಕ್ಕೆ ದೇಶಭೂಷಣರು ತಮ್ಮ ಸ್ಪಷ್ಟೀಕರಣವನ್ನು ನೀಡಿದರು. ಸುರೇಶ್‌ಕುಮಾರ್‌ಜೈನ್‌ರವರು ತಾವು ಪಡೆದ ಸ್ಪಷ್ಟೀಕರಣವನ್ನು ಉತ್ತರಪ್ರದೇಶದ ಬಡೌತ್‌ನಿಂದ ಹೊರಡುವ 'ಧರ್ಮರಕ್ಷಾ' ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಅವರು ಬರೆದಿರುವ ಲೇಖನದಲ್ಲಿ ಸಂಬಂಧಪಟ್ಟ ಭಾಗ ಹೀಗಿದೆ :

''ಶ್ರವಣಬೆಳಗೊಳದಲ್ಲಿ ಯಾವುದೇ ಪದವಿಗಳನ್ನು ಹಂಚಿದ್ದರೂ, ಯಾವುದೇ ಕಾರ್ಯವಾಗಿದ್ದರೂ ಅವೆಲ್ಲವುಗಳು ಇಂದೂರ್, ದೆಹಲಿ, ಬೊಂಬಾಯಿಗಳಿಂದ ಪೂರ್ಣವಾಗಿ ನಿಯೋಜಿತವಾದ ನಿರ್ಣಯಕ್ಕೆ ಅನುಸಾರವಾಗಿ ಇತ್ತು. ನಾವಂತೂ ದರ್ಶಕ ಮಾತ್ರರಾಗಿದ್ದೆವು. ನಮ್ಮ ಹೆಸರಿನ ಉಪಯೋಗವಂತೂ ತೋರಿಕೆಯದಾಗಿತ್ತು. ವಿರೋಧ ವ್ಯರ್ಥವಾಗಿತ್ತು. ಸುಮ್ಮನಿದ್ದೆವು-ಎಂಬುದಾಗಿ ಪರಮಪೂಜ್ಯ ಪ್ರಾತಃ ಸ್ಮರಣೀಯ ಚರಿತ್ರ ಶಿರೋಮಣಿ ಶ್ರೀ 108 ಆಚಾರ್ಯ ದೇಶಭೂಷಣ ಮಹಾರಾಜರು ಕೋಥಳಿಯಲ್ಲಿ ಸ್ಪಷ್ಟಪಡಿಸಿದರು.''

ಧರ್ಮರಕ್ಷಾ ಪತ್ರಿಕೆಯ ತಾ॥ 15–8–1981 ರ ಸಂಚಿಕೆಯ 5ನೇ ಪುಟದಲ್ಲಿ ದೇಶಭೂಷಣರ ಈ ಸ್ಪಷ್ಟೀಕರಣ ಪ್ರಕಟವಾಗಿದೆ. ಈ ಪತ್ರಿಕೆಯನ್ನು ಬಡೌತ್‌ನ 'ಅಖಿಲ ಭಾರತ ವರ್ಷೀಯ ದಿಗಂಬರ ಜೈನ ಶಾಸ್ತ್ರಿ ಪರಿಷತ್ತು' ಪ್ರಕಟಿಸುತ್ತಿದೆ. ಜೈನ ಜಗತ್ತಿನ ಕರ್ಮಠ ಧರ್ಮವೀರ, ಸಮಾಜಭೂಷಣ, ಪಂಡಿತರತ್ನ, ಜೈನರತ್ನ, ವಾಣೀಭೂಷಣ ಮುಂತಾದ ಅನೇಕ ಪದವಿ ಬಿರುದುಗಳಿಂದ ವಿಭೂಷಿತರಾದ ಶ್ರೀ ಬಾಬು ಲಾಲ್ ಜೈನ್ ಜಮಾದಾರ್ ಎಂಬುವರು ಈ ಪತ್ರಿಕೆಯ ಸಂಪಾದಕರು. ಇವರು ಶಾಸ್ತ್ರಿ ಪರಿಷತ್ತಿನ ಮಹಾಮಂತ್ರಿಯೂ ಆಗಿದ್ದಾರೆ. ಸುರೇಶ್‌ಕುಮಾರ್‌ಜೈನ್‌ರವರು ದೇಶಭೂಷಣರಿಂದ ಸ್ಪಷ್ಟೀಕರಣ ಪಡೆದ ಸಮಯದಲ್ಲಿ ಬಾಬೂಲಾಲ್‌ಜೈನ್ ಜಮಾದಾರ್‌ರವರೂ ಸಹ ಅಲ್ಲಿ ಹಾಜರಿದ್ದರು.

ದೇಶಭೂಷಣರು ಮೇಲಿನ ಸ್ಪಷ್ಟೀಕರಣವನ್ನು ನೀಡದೇ ಹೋಗಿದ್ದರೆ ಶ್ರವಣಬೆಳಗೊಳದಲ್ಲಿ ವಿದ್ಯಾನಂದರು ಸಿದ್ಧಾಂತ ಚಕ್ರವರ್ತಿ ಎಂದು ಕರೆಸಿಕೊಳ್ಳಲು ನಡೆಸಿದ ವಂಚನೆಯ ಪ್ರಕರಣ ಇತಿಹಾಸದಲ್ಲಿ ಸತ್ಯಸಂಗತಿ ಎಂದು ದಾಖಲಾಗಿ ಹೋಗುತ್ತಿತ್ತು !

### ಕುರೂಪಿಯ ಅಲಂಕಾರ

ವಿದ್ಯಾನಂದರು ಏನೇ ಕುತಂತ್ರ ಒಳಸಂಚನ್ನು ಮಾಡಿ ಸಿದ್ಧಾಂತ ಚಕ್ರವರ್ತಿಯೆನಿಸಿಕೊಂಡಿರಲಿ, ಅದು ಅವರಿಗೆ ಶೋಭಿಸುತ್ತದೆಯೇ ಎಂದು ಆಲೋಚಿಸಬಹುದು.

ಸಹಜ ಸೌಂದರ್ಯವುಳ್ಳವರು ಬಹಿರಂಗದ ಸೌಂದರ್ಯ ಸಾಧನಗಳನ್ನು ಬಯಸ ಬೇಕಾಗಿಲ್ಲ. ಸಹಜ ಸೌಂದರ್ಯವೇ ಅವರಿಗೆ ಶೋಭೆಯನ್ನು ತರುತ್ತದೆ. ಕುರೂಪಿಗಳು ಎಷ್ಟೇ ಸೌಂದರ್ಯ ಸಾಧನಗಳನ್ನು ಉಪಯೋಗಿಸಿದರೂ ಇಲ್ಲದ ಸೌಂದರ್ಯ ಬರುವುದಿಲ್ಲ. ಒಂದುಪಕ್ಷ ಸೌಂದರ್ಯವಿರುವ ಹಾಗೆ ಕಂಡರೂ ಅದು ಸಾಧನಗಳ ಸೌಂದರ್ಯ ಮಾತ್ರ. ಹೀಗೆಯೇ ನಿಜವಾದ ಸಿದ್ಧಾಂತದ ಪರಿಜ್ಞಾನವಿದ್ದವನು ಆ ಸಂಬಂಧದ ಪದವಿ ಬಿರುದುಗಳನ್ನು ಬಯಸುವುದಿಲ್ಲ. ಸಿದ್ಧಾಂತದ ನೈಜವಾದ ತಿಳುವಳಿಕೆಯೇ ಅವನಿಗೆ ಶೋಭೆ ತರುವ ಸಂಗತಿಯಾಗುತ್ತದೆ. ಸಿದ್ಧಾಂತದ ಸಹಜ ತಿಳುವಳಿಕೆಯಿಲ್ಲದವರು ನಾನಾ ರೀತಿಯ ಪದವಿ ಬಿರುದುಗಳನ್ನು ತಮ್ಮ ಹೆಸರಿನ ಜೊತೆಗೆ ಯಾವ ವಿಧದಿಂದಲಾದರೂ ಸೇರಿಸಿಕೊಂಡು ತಾವು ದೊಡ್ಡವರೆಂದೆನ್ನಿಸಿಕೊಳ್ಳಲು ಹಗಲಿರುಳೂ ಒಂದೇ ಸಮನೆ ಹೋರಾಡುತ್ತಾರೆ. ವಿದ್ಯಾನಂದರು ನಿಸ್ಸಂದೇಹವಾಗಿ ಈ ಗುಂಪಿಗೆ ಸೇರಿದವರು. ಸಿದ್ಧಾಂತ ಚಕ್ರವರ್ತಿಯೆಂಬ ಬಿರುದು ಅವರಿಗೆ ಕುರೂಪಿಯ ಅಲಂಕಾರದಂತೆ ಹಾಸ್ಯಾಸ್ಪದವಾಗಿ ಕಾಣುತ್ತದೆ !

ವಿದ್ಯಾನಂದರು ನಿಜವಾಗಿ ಜೈನಸಿದ್ಧಾಂತವನ್ನು ತಿಳಿದವರಾಗಿದ್ದರೆ ತಾ: 17-11-1978ರಂದು ದೆಹಲಿಯಲ್ಲಿ ಕೆಲಜನರು ತಮಗೆ ಆಚಾರ್ಯಪದವಿ ಕೊಡಲು ಮುಂದಾದಾಗ "ಜನಗಳು ಮುನಿಗಳಿಗೆ ಆಚಾರ್ಯ ಪದವಿ ಕೊಡುವುದು ಜೈನ ಸಿದ್ಧಾಂತಕ್ಕೆ ವಿರುದ್ಧ. ನೀವು ಈ ಅಧರ್ಮದಕಾರ್ಯಕ್ಕೆ ಖಂಡಿತಾ ಕೈಹಾಕಬೇಡಿ ಎಂದು ಅವರಿಗೆ ತಿಳುವಳಿಕೆ ನೀಡಬೇಕಾಗಿತ್ತು. ಆದರೆ ವಿದ್ಯಾನಂದರು ಹಾಗೆ ನಡೆದುಕೊಳ್ಳಲಿಲ್ಲ. ಜೈನಸಿದ್ಧಾಂತಕ್ಕೆ ಅಪಮಾನ ಮಾಡುವ ರೀತಿಯಲ್ಲಿ ಆಚಾರ್ಯರೆನಿಸಿಕೊಂಡರು. ಇಂಥವಂಚಕರನ್ನು 'ಸಿದ್ಧಾಂತ ಚಕ್ರವರ್ತಿ' ಎಂದು ಕರೆದರೆ ಅದು ಜೈನ ಸಿದ್ಧಾಂತಕ್ಕೆ ಬಗೆದ ಮಹಾದ್ರೋಹವಾಗುತ್ತದೆ.

ವಿದ್ಯಾನಂದರು ಮುನಿದೀಕ್ಷೆ ವಹಿಸಿದ್ದರೂ ಜೈನ ಸಿದ್ಧಾಂತದಲ್ಲಿ ದಿಗಂಬರ ಮುನಿಗಳಿಗೆ ವಿಧಿಸಿರುವ 'ಮುನಿಚಾರಿತ್ರ'ದ ನಿಯಮಗಳಂತೆ ಇವರು ನಡೆದುಕೊಳ್ಳದೇ, ಮಿತಿಮೀರಿದ ಸ್ವೇಚ್ಛಾಚಾರದಿಂದ ವರ್ತಿಸುತ್ತಾ ಮುನಿಕುಲಕ್ಕೇ ಅಳಿಸಲಾಗದಂತಹ ಕಳಂಕವನ್ನು ತಂದಿದ್ದಾರೆ. ಇಂತಹ ಕಳಂಕ ಶಿಖಾಮಣಿಗಳನ್ನು ಸಿದ್ಧಾಂತಚಕ್ರವರ್ತಿಯೆಂದು ಕರೆದರೆ ಅದು ಜೈನ ಸಿದ್ಧಾಂತಕ್ಕೆ ಎಸಗಿದ ಅಪಚಾರವಲ್ಲದೆ ಬೇರಲ್ಲ !

ಜೈನಸಿದ್ಧಾಂತಕ್ಕೆ ಅನುಗುಣವಾಗಿ ಮುನಿಗಳಾದವರು ಪರೋಕ್ಷವಾಗಿಯೂ ಇತರರನ್ನು ದೂಷಿಸಬಾರದು. ಅಂತಹುದರಲ್ಲಿ ವಿದ್ಯಾನಂದರು ತಮ್ಮ ಸ್ವಾಗತ ಸಮಾರಂಭದ ಹಣಕ್ಕೆ ಆಕ್ಷೇಪವೆತ್ತಿದವರನ್ನು ಒತ್ತಡಹೇರಿ ಕರೆಸಿ ತುಂಬಿದ ಸಭೆಯಲ್ಲಿ ಅವರ ಮೇಲೆ ಸುಳ್ಳು ಆಪಾದನೆಗಳನ್ನು ಹೊರಿಸಿ ಪ್ರತ್ಯಕ್ಷವಾಗಿ ಸಾವಿರಾರು ಜನಗಳ

ಎದುರಿನಲ್ಲಿಯೇ ಕ್ರೋಧವಿಕಾರಕ್ಕೊಳಗಾಗಿ ನಿಂದಿಸಿದರು[1]. ಇದು ಸಾಲದು ಎಂಬಂತೆ ಮುಗ್ಧ ಜನರನ್ನು ಅವರಮೇಲೆ ಎತ್ತಿಕಟ್ಟಿದರು. ಅದೇ ಸಭೆಯಲ್ಲಿ ಆ ನಿರಪರಾಧಿಗಳ ಮೇಲೆ ಕೆಂಡ ಕಾರುತ್ತಾ "ನಾನು ಬಿಡೋದಿಲ್ಲ, ಬಿಡೋ ಹಾಗಿಲ್ಲ ! ಕ್ಷಮೆ ಮಾಡೊದಾದರೂ, ಕ್ಷಮೆ ಮಾಡೋದಿಲ್ಲ" ಎಂದು ಆರ್ಭಟಿಸಿ ತಮ್ಮ ಕ್ರೂರತನದ ಪರಮಾವಧಿಯನ್ನು ಬಹಿರಂಗಪಡಿಸಿದರು. ಇದಕ್ಕೆ ಪಶ್ಚಾತ್ತಾಪವೆಂಬುದಾದರೂ ಅವರಲ್ಲಿ ಮೂಡಿಬರಲಿಲ್ಲ. ಜೈನಸಿದ್ಧಾಂತದ 'ಪ್ರತಿಕ್ರಮಣ' ತತ್ವಕ್ಕೆ ಅನುಗುಣವಾಗಿ ಮುನಿಯಾದವನು ತಿಳಿಯದೆ ತಪ್ಪು ಮಾಡಿದಾಗ ಪಶ್ಚಾತ್ತಾಪ ಪಟ್ಟು ಪ್ರಾಯಶ್ಚಿತ್ತವನ್ನು ವಿಧಿಸಿಕೊಳ್ಳಬೇಕು, ಆದರೆ ವಿದ್ಯಾನಂದರು ತಮ್ಮ ಜೀವನಾವಧಿಯಲ್ಲಿ ತಿಳಿದೂ ತಿಳಿದೂ ನಿರಂತರವಾಗಿ ಮಾಡಿರುವ ಅಸಂಖ್ಯಾತ ತಪ್ಪುಗಳಿಗೆ ಯಾವಾಗಲೂ ನಿಜವಾಗಿಯೂ ಪಶ್ಚಾತ್ತಾಪ ಪಟ್ಟಿಲ್ಲ. ಆದುದರಿಂದ ಆಚರಣೆಯಲ್ಲಿ ಜೈನಸಿದ್ಧಾಂತಕ್ಕೆ ಅಪಚಾರವೆಸಗಿರುವ ಇವರನ್ನು ಸಿದ್ಧಾಂತ ಚಕ್ರವರ್ತಿಯೆಂದು ಕರೆದರೆ ಚಪ್ಪಲಿ ತಿನ್ನುವ ದೈವಕ್ಕೆ ಅಷ್ಟವಿದಾರ್ಚನೆ ಮಾಡಿದಂತಾಗುತ್ತದೆ.

ವಿದ್ಯಾನಂದರು ನಿಜವಾಗಿ ತಿಳಿದಿರುವ ಸಿದ್ಧಾಂತವೇನಿದ್ದರೂ ಅದು ವಂಚನೆ, ಕಪಟತನ ಮತ್ತು ಕುತಂತ್ರಗಳ ಸಿದ್ಧಾಂತ ! ಅನಾಚಾರ, ದೌರ್ಜನ್ಯ ಮತ್ತು ಭಂಡತನಗಳ ಸಿದ್ಧಾಂತ ! ಈ ಸಿದ್ಧಾಂತಗಳಲ್ಲಿ ವಿದ್ಯಾನಂದರನ್ನು ಹೋಲುವ ಮುನಿ ಜೈನ ದಿಗಂಬರ ಮುನಿಗಳ ಇತಿಹಾಸದಲ್ಲಿ ಇನ್ನೊಬ್ಬರು ಅಲಭ್ಯ.

ಅಧ್ಯಾಯ : ಇಪ್ಪತ್ನಾಲ್ಕು

# ಭಟ್ಟಾರಕ ಸಂಘವನ್ನು ವಶಪಡಿಸಿಕೊಳ್ಳುವ ಒಳಸಂಚು

ವಿದ್ಯಾನಂದರಿಲ್ಲದೆ ಒಳಸಂಚುಗಳಿಲ್ಲ ; ಒಳಸಂಚುಗಳಿಲ್ಲದೆ ವಿದ್ಯಾನಂದರಿಲ್ಲ ಎಂಬಂತೆ ವಿದ್ಯಾನಂದರು ತಮ್ಮ ಜೀವನದಲ್ಲಿ ಇದುವರೆಗೂ ನಡೆದುಕೊಂಡಿದ್ದಾರೆ. ಅವರಲ್ಲಿ ಮನೆಮಾಡಿಕೊಂಡಿರುವ ದುಂಡಾವರ್ತಿ ಅವರ ಒಳಸಂಚುಗಳಿಗೆ ರಕ್ಷಣೆಯಾಗಿದೆ. ಅವರ ದುಷ್ಕೃತ್ಯಗಳನ್ನು ತಿಳಿದವರೂ ಸಹ ಅವರನ್ನು ಕೆಣಕಿದರೆ ತಾವೆಲ್ಲಿ ಅವರ ಪಿತೂ

---

1. ಇದೇ ಲೇಖಕರ 'ಮುನಿ ವಿದ್ಯಾನಂದರು ಸುಳ್ಳಾಡಿದ್ದೇಕೆ' ಪುಸ್ತಕದ ಪುಟ 29 ನೋಡಿ

ರಿಯ ಗುರಿಯಾಗುತ್ತೇವೆಯೋ ಎಂದು ಅಂಜಿ ತಟಸ್ಥರಾಗುತ್ತಾರೆ. ಜನರ ಈ ಜಡ ಮನೋಧರ್ಮವೇ ವಿದ್ಯಾನಂದರು ನಿರಂತರವಾಗಿ ಒಳಸಂಚುಗಳನ್ನು ಮಾಡುತ್ತಾ ಬಹಿರಂಗದಲ್ಲಿ ಆಧ್ಯಾತ್ಮದ ನಾಟಕವಾಡಲು ಅವಕಾಶವಾಗಿದೆ. ಇವರು ಮಾಡಿರುವ ಅನೇಕ ಒಳಸಂಚುಗಳಲ್ಲಿ ಭಟ್ಟಾರಕ ಸಂಘವನ್ನು ವಶಪಡಿಸಿಕೊಳ್ಳುವ ಒಳಸಂಚೂ ಸಹ ಸೇರಿದೆ.

ಭಾರತ ದೇಶದಲ್ಲಿ ದಿಗಂಬರ ಜೈನಭಟ್ಟಾರಕ ಪೀಠಗಳು ಹನ್ನೆರಡು ಮಾತ್ರ ಇವೆ.

1. ಹೊಂಬುಜ (ಶ್ರೀ ದೇವೇಂದ್ರಕೀರ್ತಿ ಸ್ವಾಮಿಗಳು) 2. ನರಸಿಂಹರಾಜಪುರ (ಶ್ರೀ ಲಕ್ಷ್ಮೀಸೇನ ಸ್ವಾಮಿಗಳು) 3. ಸೋದೆ (ಶ್ರೀ ಭಟ್ಟಾಕಳಂಕಸ್ವಾಮಿಗಳು) 4. ಕಾರ್ಕಳ (ಶ್ರೀ ಲಲಿತಕೀರ್ತಿ ಸ್ವಾಮಿಗಳು) 5 ಶ್ರವಣಬೆಳಗೊಳ (ಶ್ರೀ ಚಾರುಕೀರ್ತಿ ಸ್ವಾಮಿಗಳು) 6. ಮೂಡುಬಿದರೆ (ಶ್ರೀ ಚಾರುಕೀರ್ತಿ ಸ್ವಾಮಿಗಳು—ಈ ಆರು ಕ್ಷೇತ್ರಗಳ ಮಠಗಳು ಕರ್ನಾಟಕದಲ್ಲಿವೆ. 7. ಕೊಲ್ಲಾಪುರ (ಶ್ರೀ ಲಕ್ಷ್ಮೀಸೇನ ಸ್ವಾಮಿಗಳು) 8. ನಾಂದನಿ (ಶ್ರೀ ಜಿನಸೇನ ಭಟ್ಟಾರಕ ಸ್ವಾಮಿಗಳು) 9. ಲಾತೂರು (ಶ್ರೀ ವಿಶಾಲಕೀರ್ತಿ ಭಟ್ಟಾರಕ ಸ್ವಾಮಿಗಳು)—ಈ ಮೂರು ಮಠಗಳು ಮಹಾರಾಷ್ಟ್ರದಲ್ಲಿವೆ. 10. ಜಿನಕಂಚಿ (ಶ್ರೀ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳು)—ಇದೊಂದು ತಮಿಳುನಾಡಿನಲ್ಲಿದೆ. 11. ಕೇಸರಿಯಾಜಿ (ಪದ್ಮಕೀರ್ತಿ ಸ್ವಾಮಿಗಳು) 12) ಪ್ರತಾಪಗಡ —ಈ ಎರಡು ಮಠಗಳು ರಾಜಾಸ್ಥಾನದಲ್ಲಿವೆ

ಮೇಲಿನ ಮಠಗಳ ಪೈಕಿ ಕೇಸರಿಯಾಜಿ ಮಠ ಈಗ ಅಸ್ತಿತ್ವದಲ್ಲಿಲ್ಲ. ಪ್ರತಾಪಗಡದ ಮಠ ಭಟ್ಟಾರಕರಿಲ್ಲದೆ ತೆರವಾಗಿದೆ. ಉಳಿದ ಹತ್ತು ಮಠಗಳಲ್ಲಿ ಭಟ್ಟಾರಕ ಸ್ವಾಮಿಗಳಿದ್ದಾರೆ. ಈ ಭಟ್ಟಾರಕ ಸ್ವಾಮಿಗಳೆಲ್ಲ ಸೇರಿ 'ಅಖಿಲ ಭಾರತ ದಿಗಂಬರ 'ಜೈನ ಭಟ್ಟಾರಕ ಅಸೋಸಿಯೇಷನ್' ಎಂಬ ಒಂದು ಸಂಘವನ್ನು ರಚಿಸಿಕೊಂಡಿದ್ದಾರೆ. ಇವರ ಆಡಳಿತ ಕಛೇರಿ ಮಹಾರಾಷ್ಟ್ರದ ಕೊಲ್ಲಾಪುರದಲ್ಲಿದೆ. ಪ್ರಸ್ತುತ ಹೊಂಬುಜ ಮಠದ ಶ್ರೀ ದೇವೇಂದ್ರಕೀರ್ತಿ ಸ್ವಾಮಿಗಳು ಈ ಸಂಘದ ಅಧ್ಯಕ್ಷರಾಗಿದ್ದಾರೆ. ಜಿನಕಂಚಿ ಮಠದ ಶ್ರೀ ಲಕ್ಷ್ಮೀಸೇನಸ್ವಾಮಿಗಳು ಉಪಾಧ್ಯಕ್ಷರಾಗಿದ್ದಾರೆ. ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನಸ್ವಾಮಿಗಳು ಕಾರ್ಯದರ್ಶಿಗಳಾಗಿದ್ದಾರೆ.

ವಿದ್ಯಾನಂದರನ್ನು 1978ರ ನವೆಂಬರ್‌ನಲ್ಲಿ ದಕ್ಷಿಣದ ಕಡೆ ಬೀಳ್ಕೊಡುವಾಗ ನಡೆದ ಮೂರು ದಿನಗಳ ಕಾರ್ಯಕ್ರಮದಲ್ಲಿ ಭಾಗವಹಿಸುವಂತೆ ಕೋರಿ ಎಲ್ಲಾ ಭಟ್ಟಾರಕರಿಗೂ ಆಹ್ವಾನ ಹೋಗಿತ್ತು. ಇವರಲ್ಲಿ ಕೊಲ್ಲಾಪುರ, ನರಸಿಂಹರಾಜಪುರ,

ನಾಂದನಿ, ಮೂಡಬಿದರೆ ಮತ್ತು ಶ್ರವಣಬೆಳಗೊಳ—ಈ ಐದು ಮಠಗಳ ಸ್ವಾಮಿಗಳು ಮಾತ್ರ ದೆಹಲಿಯ ಸಮಾರಂಭಗಳಲ್ಲಿ ಭಾಗಿಗಳಾಗಿದ್ದರು.

## ಒಳಸಂಚಿನ ಪ್ರಥಮ ಪ್ರಯತ್ನ

1978ರ ನವೆಂಬರ್ ತಿಂಗಳಿನಲ್ಲಿ ವಿದ್ಯಾನಂದರು ದೆಹಲಿಯನ್ನು ಬಿಡುವ ಸಂದರ್ಭದಲ್ಲಿ ಏಲಾಚಾರ್ಯರಾಗಲು ಮಾಡಿದ ಪಿತೂರಿಯನ್ನು ಈಗಾಗಲೇ ವಿವರಿಸಿಯಾಗಿದೆ. ಇದೇ ಸಂದರ್ಭದಲ್ಲಿ ಅವರು 'ಅಖಿಲಭಾರತ ದಿಗಂಬರಜೈನ ಭಟ್ಟಾರಕ ಅಸೋಸಿಯೇಷನ್' ಅನ್ನು ತಮ್ಮ ನೇರ ಹತೋಟಿಗೊಳಪಡಿಸಿಕೊಳ್ಳಲು ಒಳಸಂಚನ್ನು ಮಾಡಿದರು. ಈ ಒಳಸಂಚಿನ ಪ್ರಥಮ ಪ್ರಯತ್ನ ತಾ. 18-11-1978ರಂದು ದೆಹಲಿಯ ಶ್ರೀ ಸುರೇಶ್ ಚಂದ್‌ಜೈನ್[1]ರವರ ಮನೆಯಲ್ಲಿ ನಡೆಯಿತು. ಇವರೇ ಹಿಂದಿನ ದಿನ ವಿದ್ಯಾನಂದರನ್ನು ಏಲಾಚಾರ್ಯರಾಗಲು ಕೇಳಿಕೊಂಡಿದ್ದವರು. ಈ ದಿವಸ ಇವರ ಮನೆಯಲ್ಲಿಯೇ ವಿದ್ಯಾನಂದರಿಗೂ ಮತ್ತು ದಕ್ಷಿಣದಿಂದ ಬಂದಿದ್ದ ಐದು ಜನ ಭಟ್ಟಾರಕರಿಗೂ ಆಹಾರದ ವ್ಯವಸ್ಥೆಯಾಗಿತ್ತು.

ನಿಗದಿಯಾದ ಸಮಯಕ್ಕೆ ವಿದ್ಯಾನಂದರೂ ಮತ್ತು ಐವರು ಭಟ್ಟಾರಕರೂ ತಾ. 18-11-1978ರಂದು ಆಹಾರಕ್ಕಾಗಿ ಸುರೇಶ್‌ಚಂದ್ ಜೈನ್‌ರವರ ಮನೆಯಲ್ಲಿ ಸೇರಿದ್ದರು. ಮೊದಲು ವಿದ್ಯಾನಂದರು ಆಹಾರಕ್ಕಾಗಿ ಏರ್ಪಾಟಾಗಿದ್ದ ಸ್ಥಳಕ್ಕೆ ಹೋದರು. ಇತ್ತ ಭಟ್ಟಾರಕರ ಗುಂಪು ಪ್ರತ್ಯೇಕವಾದ ಕೊಠಡಿಯಲ್ಲಿಯೇ ಉಳಿದುಕೊಂಡಿತು. ಅಲ್ಲಿ ಹಾಜರಿದ್ದವರು ಶ್ರವಣಬೆಳಗೊಳ, ಮೂಡಬಿದರೆ, ನರಸಿಂಹರಾಜಪುರ, ಕೊಲ್ಲಾಪುರ ಮತ್ತು ನಾಂದನಿ—ಈ ಮಠಗಳ ಸ್ವಾಮಿಗಳು.

ಈ ಐದು ಜನಭಟ್ಟಾರಕರ ಸಮೂಹದಲ್ಲಿ ಇದ್ದಕ್ಕಿದ್ದಂತೆಯೇ ಒಂದು ಘಟನೆ ಆರಂಭವಾಯಿತು. ಶ್ರವಣ ಬೆಳಗೊಳ ಮತ್ತು ಮೂಡಬಿದರೆಯ ಚಾರುಕೀರ್ತಿದ್ವಯರು ಭಟ್ಟಾರಕ ಅಸೋಸಿಯೇಷನ್ನಿನ ಕಾರ್ಯದರ್ಶಿಗಳಾದ ಕೊಲ್ಲಾಪುರದ ಲಕ್ಷ್ಮೀಸೇನರ ಮೇಲೆ ಸೌಜನ್ಯ ಮೀರಿ ಕೂಗಾಡುತ್ತಾ ಆಪಾದನೆಗಳನ್ನು ಮಾಡತೊಡಗಿದರು. "ನಿಮ್ಮ ಭಟ್ಟಾರಕ ಅಸೋಸಿಯೇಷನ್ ಸರಿಯಾಗಿ ಕೆಲಸ ಮಾಡುತ್ತಿಲ್ಲ. ನಿಮಗೆ ಅಸೋಸಿಯೇಷನ್ ನಡೆಸಲು ಸಾಮರ್ಥ್ಯವಿಲ್ಲ. ಆದ್ದರಿಂದ ನೀವು ಕೂಡಲೇ ರಾಜೀನಾಮೆ ಕೊಡಿ" ಎಂದು ಮುಂತಾಗಿ ಆಕ್ರೋಶದ ಮಾತುಗಳು ಸಿಡಿದುಬಂದುವು. ಕೊಲ್ಲಾಪುರದ ಲಕ್ಷ್ಮೀಸೇನರು ಚಾರುಕೀರ್ತಿದ್ವಯರಿಂದ ಇಂತಹ ಅಸಭ್ಯವರ್ತನೆಯನ್ನು ನಿರೀಕ್ಷಿಸಿರಲಿಲ್ಲ. ಅನಿರೀಕ್ಷಿತವಾದ ಈ ಧಾಳಿಯಿಂದ ಅವರು ಕಕ್ಕಾಬಿಕ್ಕಿಯಾದರೂ

---

1. ವಿಳಾಸ: ಶ್ರೀ ಸುರೇಶ್‌ಚಂದ್ ಜೈನ್, ಮೆಸರ್ಸ್ ಘಮಂಡಿಲಾಲ್ ನಾನೇಶ್‌ಮಲ್ ಜೈನ್, ಜಿ. ಎನ್. ಜೆ. ಇಂಡಸ್ಟ್ರೀಸ್. ಸದರ್‌ಬಜಾರ್, ದೆಹಲಿ 11006.

ತಕ್ಷಣ ಸಾವರಿಸಿಕೊಂಡು "ನಾನು ರಾಜೀನಾಮೆಯನ್ನು ಇಲ್ಲಿ ಹೇಗೆ ಕೊಡಲಿ ? ಸಂಘದ ಅಧ್ಯಕ್ಷರಾದ ಹೊಂಬುಜದ ಸ್ವಾಮಿಗಳೂ ಇಲ್ಲಿಲ್ಲ. ಉಪಾಧ್ಯಕ್ಷರಾದ ಜಿನಕಂಚಿ ಮಠದ ಸ್ವಾಮಿಗಳೂ ಇಲ್ಲಿಲ್ಲ. ಸಂಘದ ಕಾರ್ಯದರ್ಶಿಯಾಗಿರಲೇಬೇಕೆಂಬ ಹಠವೇನೂ ನನಗಿಲ್ಲ. ನಾನು ಕೊಲ್ಲಾಪುರಕ್ಕೆ ಹೋದಮೇಲೆ ರಾಜೀನಾಮೆ ಪತ್ರವನ್ನು ಅಧ್ಯಕ್ಷರಿಗೆ ಕಳುಹಿಸುತ್ತೇನೆ." ಎಂದು ಮೆಲ್ಲಗಾಗಿ ಮಾತನಾಡಿದರು.

ಚಾರುಕೀರ್ತಿಗಳಿಬ್ಬರೂ ಲಕ್ಷ್ಮೀಸೇನರನ್ನು ಅಲ್ಲಿಗೇ ಬಿಡಲು ಸಿದ್ಧರಿರಲಿಲ್ಲ. ಆಗ ಮೂಡಬಿದರೆಯ ಚಾರುಕೀರ್ತಿಗಳು "ಅದೆಲ್ಲಾ ನಡೆಯೋದಿಲ್ಲ ! ಈಗಲೇ ಇಲ್ಲಿಯೇ ನೀವು ರಾಜೀನಾಮೆ ಪತ್ರವನ್ನು ಕೊಡಬೇಕು . .. ನಿಮಗೆ ಧಿಕ್ಕಾರ ! ನಿಮ್ಮ ಭಟ್ಟಾರಕ ಅಸೋಸಿಯೇಷನ್ನಿಗೆ ಧಿಕ್ಕಾರ ! ಎಂದು ಕೂಗುತ್ತಾ ಪೀಠವನ್ನು ತೆಗೆದುಕೊಂಡು ಕೊಲ್ಲಾಪುರದ ಸ್ವಾಮಿಗಳ ಕಡೆ ಧಾವಿಸಿ ಅವರ ಮೇಲೆ ಹಲ್ಲೆ ಮಾಡಲು ಮುನ್ನುಗ್ಗಿದರು. ಅಷ್ಟರಲ್ಲಿ ಚಾರುಕೀರ್ತಿಯರಿಬ್ಬರ ಅಳತೆಮೀರಿದ ವರ್ತನೆಯನ್ನು ಗಮನಿಸುತ್ತಾ ಕಳವಳಪಡುತ್ತಿದ್ದ ನರಸಿಂಹರಾಜಪುರದ ಸ್ವಾಮಿಗಳಿಗೆ ಇನ್ನು ಸುಮ್ಮನೆ ಕೂರಲಾಗಲಿಲ್ಲ. ಅವರು ತಕ್ಷಣ ನಡುವೆ ನುಗ್ಗಿ ಪೀಠ ಹಿಡಿದು ಹೊಡೆಯಲು ಮೇಲೆತ್ತಿದ್ದ ಚಾರುಕೀರ್ತಿಗಳ ಕೃಷ್ಣವರ್ಣದ ಕೈಯನ್ನು ಬಲವಾಗಿ ಹಿಡಿದು ಕೊಲ್ಲಾಪುರದ ಲಕ್ಷ್ಮೀಸೇನರಿಗೆ ಬೀಳಲಿದ್ದ ಹೊಡೆತವನ್ನು ತಪ್ಪಿಸಿದರು.

ಇತ್ತ ವಿದ್ಯಾನಂದರ ಆಹಾರದಾನದ ಕಡೆ ಗಮನ ಹರಿಸಿದ್ದ ಸುರೇಶ್‌ಚಂದ್ ಜೈನರಿಗೆ ಭಟ್ಟಾರಕರ ಬೀಡಿನಲ್ಲಿ ಬಿರುಸಾದ ಮಾತುಗಳ ಆರ್ಭಟ ನಡೆಯುತ್ತಿರುವುದು ಗಮನಕ್ಕೆ ಬಂದಿತು. ಆ ಕಡೆ ಹೊರಟರು. ಬರುತ್ತಿದ್ದ ಹಾಗೆ ಭಟ್ಟಾರಕರು ಕನ್ನಡ ಭಾಷೆಯಲ್ಲಿ ಕೂಗಾಡುತ್ತಿದ್ದುದರಿಂದ ಯಾವ ವಿಷಯವಾಗಿ ಜಗಳ ನಡೆದಿದೆಯೆಂಬುದು ಜೈನರಿಗೆ ಅರ್ಥವಾಗಲಿಲ್ಲ ಅಂತೂ ಏನೋ ರಾಗ-ದ್ವೇಷಗಳ, ಒರಟು ಮಾತುಗಳ ಚಲಾವಣೆಯಾಗುತ್ತಿದೆಯೆಂಬುದು ಮನವರಿಕೆಯಾಯಿತು. ಒಂದು ಕ್ಷಣ ಅವರಿಗೆ ದುಗುಡವೂ ಉಂಟಾಯಿತು. ನಮ್ಮ ಮನೆಗೆ ಬಂದು ಈ ವಿರಕ್ತರು ಗುದ್ದಾಡಲು ಪ್ರಾರಂಭಿಸಿದ್ದಾರಲ್ಲ ! ಇದು ನಮ್ಮ ಮನೆಯಲ್ಲಿಯೇ ಆಗಬೇಕಿತ್ತೆ ? ಜಗಳವಾಗಿ ಏನು ಅನಾಹುತವಾಗುತ್ತೋ ? ನಮಗೆ ಕೆಟ್ಟ ಹೆಸರು ಬರುವಂತಾಯಿತಲ್ಲ ? ಎಂದು ಮುಂತಾಗಿ ಕಳವಳಪಟ್ಟರು. ನಾನು ಅವರಿರುವ ಸ್ಥಳಕ್ಕೆ ಹೋದರೆ ಅವರೇನಾದರೂ ಸಂಕೋಚಪಟ್ಟು ತಮ್ಮ ಜಗಳವನ್ನು ನಿಲ್ಲಿಸಬಹುದೆಂದು ನಿರೀಕ್ಷಿಸಿ ಜೈನರು ತಮ್ಮ ಹೆಜ್ಜೆಯನ್ನು ಬೇಗ ಬೇಗ ಹಾಕಿದರು.

ತಾವಿದ್ದೆಡೆಗೆ ಯಾರೋ ಬರುತ್ತಿರುವುದರ ಸುಳಿವು ತಿಳಿದ ಚಾರುಕೀರ್ತಿದ್ವಯರು ತಮ್ಮ ದನಿಯನ್ನು ತಗ್ಗಿಸಿದರು. ಸುರೇಶ್ ಚಂದ್‌ಜೈನರನ್ನು ಕಂಡಕೂಡಲೇ ತರಗತಿಗೆ ಬಂದ ಮಾಸ್ತರನ್ನು ಕಂಡ ಶಾಲಾಮಕ್ಕಳಂತೆ ಎಲ್ಲರೂ ಮೊದಲಿನ ಸ್ಥಿತಿಗೆ ಹಿಂತಿರುಗಿ

ದರು. ಸುರೇಶ್‌ಚಂದ್‌ಜೈನ್‌ರವರ ನಿರೀಕ್ಷೆ ನಿಜವಾಯಿತು. ಆದರೆ ಭಟ್ಟಾರಕಗಣದ ಈ ವಿಚಿತ್ರ ವರ್ತನೆಯನ್ನು ಕಂಡು ಜುಗುಪ್ಸೆಯೂ ಉಂಟಾಯಿತು. ಈ ಹೊತ್ತಿಗೆ ತಮ್ಮ ಆಹಾರವನ್ನು ಮುಗಿಸಿಕೊಂಡು ವಿದ್ಯಾನಂದರೂ ಭಟ್ಟಾರಕಗಣವಿದ್ದೆಡೆಗೆ ದಯಂ ಮಾಡಿಸಿದರು. ಬರುತ್ತಿದ್ದಂತೆಯೇ "ಏನು ನಿಮ್ಮ ಭಟ್ಟಾರಕ ಅಸೋಸಿಯೇಷನ್ನಿನ ಮೀಟಿಂಗ್ ಚನ್ನಾಗಿ ನಡೆಯಿತೆ ?" ಎಂದು ಪ್ರಶ್ನೆ ಹಾಕಿ ಮುಗುಳ್ನಕ್ಕರು. ಈ ಘಟನೆಯ ಹಿಂದೆ ವಿದ್ಯಾನಂದರ ಕೈವಾಡವಿದ್ದುದು ಆ ಸಂದರ್ಭದಲ್ಲಿ ಸುರೇಶ್‌ಚಂದ್‌ಜೈನ್ ರವರಿಗೆ ಅರ್ಥವಾಗಲಿಲ್ಲ.

ಕೊಲ್ಲಾಪುರದ ಲಕ್ಷ್ಮೀಸೇನರು ಕೊಲ್ಲಾಪುರಕ್ಕೆ ಹಿಂತಿರುಗಿ ಬಂದ ಕೆಲವೇ ದಿನಗಳಲ್ಲಿ ಭಟ್ಟಾರಕ ಅಸೋಸಿಯೇಷನ್ನಿನ ತಮ್ಮ ಕಾರ್ಯದರ್ಶಿಸ್ಥಾನಕ್ಕೆ ರಾಜೀನಾಮೆ ಪತ್ರವನ್ನು ಬರೆದು, ಅದನ್ನು ಸಂಘದ ಅಧ್ಯಕ್ಷರಾದ ಹೊಂಬುಜದ ಸ್ವಾಮಿಗಳಿಗೂ, ಪ್ರತಿಗಳನ್ನು ಇತರ ಸ್ವಾಮಿಂಗಳಿಗೂ ಕಳುಹಿಸಿಕೊಟ್ಟರು.[1] ರಾಜೀನಾಮೆ ಪತ್ರದಲ್ಲಿ ರಾಜೀನಾಮೆ ಕೊಡಲು ನಿಜವಾಗಿ ಕಾರಣವಾದ ತಾ. 18-11-78ರ ತಮ್ಮ ಮೇಲಿನ ಹಲ್ಲೆ ಮತ್ತು ಬೆದರಿಕೆ ಯತ್ನದ ಘಟನೆಯನ್ನು ಲಕ್ಷ್ಮೀಸೇನರು ಪ್ರಸ್ತಾಪಿಸಲಿಲ್ಲ. ಬೇರೊಂದು ಕಾರಣವನ್ನು ನೀಡಿದರು.

ಕೊಲ್ಲಾಪುರದ ಲಕ್ಷ್ಮೀಸೇನರು ರಾಜೀನಾಮೆ ಸಲ್ಲಿಸಿದ ಮೇಲೆ ಒಮ್ಮೆ ವಿದ್ಯಾನಂದರನ್ನು ಕಂಡುಬರಲು ಜೈಪುರಕ್ಕೆ ಹೋದರು. ಆ ಸಮಯದಲ್ಲಿ ವಿದ್ಯಾನಂದರು ಇಂದೂರಿನ ಮಾರ್ಗವಾಗಿ ಜೈಪುರದಲ್ಲಿ ಬಿಡಾರ ಹೂಡಿದ್ದರು. ವಿದ್ಯಾನಂದರು ಕೊಲ್ಲಾಪುರದ ಸ್ವಾಮಿಗಳನ್ನು ಕಾಣುತ್ತಿದ್ದಂತೆಯೇ "ನೀವು ಭಟ್ಟಾರಕ ಅಸೋಸಿಯೇಷನ್ನಿನ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟಿದ್ದನ್ನು ಕೇಳಿದೆ. ತುಂಬಾ ಸಂತೋಷವಾಯಿತು. ಒಳ್ಳೆಯದನ್ನು ಮಾಡಿದಿರಿ" ಎಂದು ಮುಂತಾಗಿ ಮಾತನಾಡಿ ತಮ್ಮ ಸಂತೋಷವನ್ನು ತೋರಿಸಿಕೊಂಡರು.

ವಿದ್ಯಾನಂದರು ತಾ। 18-11-1978ರಂದು "ಏನು ನಿಮ್ಮ ಭಟ್ಟಾರಕ ಅಸೋಸಿಯೇಷನ್ನಿನ ಮೀಟಿಂಗ್ ಚನ್ನಾಗಿ ನಡೆಯಿತೆ ?" ಎಂದು ಪ್ರಶ್ನಿಸಿದ್ದು ಅನಂತರ ಜೈಪುರದಲ್ಲಿ ಲಕ್ಷ್ಮೀಸೇನರ ಮುಂದೆಯೇ ಅವರ ರಾಜೀನಾಮೆಯನ್ನು ವಿವರ ಕೇಳದೆ ಸಮರ್ಥಿಸಿದ್ದು, ಇವೆಲ್ಲಾ ವಿದ್ಯಾನಂದರು ಭಟ್ಟಾರಕ ಸಂಘವನ್ನು ತಮ್ಮ ಹತೋಟಿಗೆ ತಂದುಕೊಳ್ಳುವ ಒಳಸಂಚನ್ನು ಮಾಡಿದರು ಎಂಬುದನ್ನು ಹೇಳುತ್ತವೆ. ಈ ಸಂದರ್ಭದಲ್ಲಿ ಶ್ರವಣಬೆಳಗೊಳ ಮತ್ತು ಮೂಡಬಿದರೆಯ ಭಟ್ಟಾರಕರು ವಿದ್ಯಾನಂದರ

---

1. ಕೊಲ್ಲಾಪುರದ ಲಕ್ಷ್ಮೀಸೇನರು ಭಟ್ಟಾರಕಸಂಘದ ಕಾರ್ಯದರ್ಶಿ ಸ್ಥಾನಕ್ಕೆ ನೀಡಿರುವ ರಾಜೀನಾಮೆ ಪತ್ರದ ಬಗ್ಗೆ ಸಂಬಂಧಪಟ್ಟವರು ಇನ್ನೂ ಯಾವ ತೀರ್ಮಾನವನ್ನೂ ತೆಗೆದುಕೊಂಡಿಲ್ಲ.

ಕುಯುಕ್ತಿಯಲ್ಲಿ ಭಾಗಿಗಳಾಗಿ ಕೊಲ್ಲಾಪುರದ ಲಕ್ಷ್ಮೀಸೇನರ ಮೇಲೆ ಧಾಳಿ ಮಾಡಿದರು. ವಿದ್ಯಾನಂದರು ನೀಡಿದ್ದ ಪೂರ್ವನಿಯೋಜಿತ ಸೂಚನೆಗಳಂತೆ ಈ ಆಕ್ರಮಣ ನಡೆಯಿತು. ಈ ದಬ್ಬಾಳಿಕೆ ಮತ್ತು ಮುಂದೆ ಉಂಟಾಗಬಹುದಾದ ಘಟನೆಗಳಿಗೆ ಹೆದರಿ ಕೊಲ್ಲಾಪುರದ ಸ್ವಾಮಿಗಳು ರಾಜೀನಾಮೆ ಕೊಟ್ಟಿದ್ದೂ ಆಯಿತು. ಇದು ಒಳಸಂಚಿನ ಪ್ರಥಮ ಪ್ರಯತ್ನದ ಪರಿಣಾಮ. ಇಷ್ಟಾದರೂ ಈ ರಾಜೀನಾಮೆ ತ್ರಿಶಂಕು ಸ್ಥಿತಿಯಲ್ಲಿ ನಿಲ್ಲುವಂತಾಯಿತು.

## ಒಳಸಂಚಿನ ಮೂಲೋದ್ದೇಶ

ವಿದ್ಯಾನಂದರು ಭಟ್ಟಾರಕ ಸಂಘವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸುವುದಕ್ಕೆ ಅವರದೇ ಆದ ಸ್ವಾರ್ಥದ ಕಾರಣಗಳಿವೆ. ಭಟ್ಟಾರಕ ಸಂಘದ ಮುಖ್ಯ ಅಧಿಕಾರ ಸ್ಥಾನಗಳನ್ನು ತಮ್ಮ ಪರಮಾಪ್ತರಾದ ಭಟ್ಟಾರಕರಿಬ್ಬರಿಗೆ ವಹಿಸಿಕೊಟ್ಟು ಆ ಮೂಲಕ ದಿಗಂಬರ ಜೈನ ವಲಯದಲ್ಲಿ ತಮ್ಮ ಪ್ರಭಾವ ಪ್ರತಿಷ್ಠೆಗಳ ಸಾರ್ವಭೌಮತ್ವವನ್ನು ಸರ್ವಕಾಲಿಕವಾಗಿ ಉಳಿಸಿಕೊಳ್ಳುವ ದುರುದ್ದೇಶ ಈ ಒಳಸಂಚಿನ ಮೂಲೋದ್ದೇಶವಾಗಿದೆ. 'ಸಿದ್ಧಾಂತ ಚಕ್ರವರ್ತಿ' ಎಂಬ ಬಿರುದನ್ನು ಭಟ್ಟಾರಕ ಸಂಘದ ಮೂಲಕ ಪಡೆದುಕೊಳ್ಳುವ ಇಚ್ಛೆ ಬಹುಶಃ ವಿದ್ಯಾನಂದರಿಗೆ ಇದ್ದಿರಬಹುದು. ಆದರೆ ಭಟ್ಟಾರಕ ಸಂಘ ಇವರ ಆಜ್ಞಾನುವರ್ತಿಯಲ್ಲದ ಕಾರಣದಿಂದ ಇದು ಸಾಧ್ಯವಾಗಲಿಲ್ಲ. ಅಂತೂ ದೇಶಭೂಷಣರ ಹಾಜರಿಯ ದುರ್ಲಾಭವನ್ನು ಪಡೆದು ಸಿದ್ಧಾಂತಚಕ್ರವರ್ತಿಯಾದುದಾಯಿತು !

ಒಂದು ವೇಳೆ ಭಟ್ಟಾರಕ ಸಂಘವೇನಾದರೂ ಇವರ ನಿಯಂತ್ರಣಕ್ಕೆ ಬಂದು ಯಾವ ರೀತಿಯ ಬಹಿರಂಗ ಸಾರ್ವಜನಿಕ ಪ್ರತಿಭಟನೆಯೂ ಇವರ ವಿರುದ್ಧ ಇಲ್ಲದೇ ಹೋಗಿರುತ್ತಿದ್ದರೆ, ಇಷ್ಟು ಹೊತ್ತಿಗೆ ವಿದ್ಯಾನಂದರು 'ಅಭಿನವಭದ್ರಬಾಹು' 'ಶ್ರುತಕೇವಲಿ ವಿದ್ಯಾನಂದ' 'ಚಾರಿತ್ರಚಕ್ರವರ್ತಿ ವಿದ್ಯಾನಂದ' ಎಂಬ ಮುಂತಾದ ಹೆಸರುಗಳಿಂದ ಕರೆಸಿಕೊಳ್ಳುತ್ತಿದ್ದರೆಂದು ತೋರುತ್ತದೆ. ಲೆಕ್ಕವಿಲ್ಲದಷ್ಟು ಸಲ ಜನತೆಯನ್ನು ಬಿಡದ ಹಾಗೆ ವಂಚಿಸಿದವರು ಮತ್ತೆ ಮತ್ತೆ ವಂಚಿಸುವುದಿಲ್ಲವೆಂಬ ನಿಶ್ಚಯವಾದರೂ ಏನು ? ದೀಕ್ಷಾಪ್ರಧಾನ ಮಾಡಿದ ಸದ್ಗುರುವನ್ನೇ ವಂಚಿಸಿ ದೊಡ್ಡವರಾಗಲು ಹೇಸದ ವಿದ್ಯಾನಂದರಿಗೆ ಬೇರೆಯವರು ಯಾವ ಲೆಕ್ಕ ?

## ಭಟ್ಟಾರಕರು ಸುರಿಸಿದ ಕಣ್ಣೀರು

ಭಟ್ಟಾರಕರಾದವರಿಗೆ ಸಹಧರ್ಮೀಯ ಭಟ್ಟಾರಕರೆನಿಸಿಕೊಂಡವರಿಂದಲೇ ತೇಜೋವಧೆಯಾದಾಗ ಅದನ್ನು ಸಹಿಸಿಕೊಂಡಿರುವುದು ಹೇಗೆ ? ಕೊಲ್ಲಾಪುರದ ಲಕ್ಷ್ಮೀಸೇನರು ತಮಗಾದ ಅಪಮಾನದ ಬೆಂಕಿಯಲ್ಲಿ ಎಷ್ಟು ದಿನ ಬೇಯುತ್ತಿರಲು ಸಾಧ್ಯ ?

ಶ್ರಾವಕರ ಮುಂದೆ ಹರಿದುಬರಲು ಸಂಕೋಚ ಪಟ್ಟ ಅವರ ವೇದನೆಯು ಬೆಂಕಿ ಮಾನ ವೀಯತೆಯು ಸಲೆಗಳನ್ನುಳ್ಳ ಮತ್ತೊಬ್ಬರು ಭಟ್ಟಾರಕರ ಮುಂದೆ ಪ್ರಕಟವಾಗಿ ಶಾಂತ ವಾಯಿತು. ಆ ಪ್ರಸಂಗದ ವಿವರ ಕೆಳಗಿನಂತಿದೆ :

ಲಕ್ಷ್ಮೀಸೇನರು ದೆಹಲಿಯಲ್ಲಿ ಚಾರುಕೀರ್ತಿದ್ವಯರಿಂದ ಭಂಗಿತರಾದ ಮೇಲೆ ಈ ಪ್ರಸಂಗವನ್ನು ಅವರು ವಿದ್ಯಾನಂದರಿಗೆ ತಿಳಿಸಿದರೋ ಇಲ್ಲವೋ ತಿಳಿಯದು. ಆದರೆ ಈ ಘಟನೆಯಾದ ಹಲವಾರು ದಿನಗಳ ಮೇಲೆ ಲಕ್ಷ್ಮೀಸೇನರು (ಬಹುಶಃ ಫೆಬ್ರವರಿ ಅಥವಾ ಮಾರ್ಚ್ ತಿಂಗಳು 1979ರಲ್ಲಿ) ಬೆಳಗಾವಿ ಜಿಲ್ಲೆಯ ಗೋಕಾಕಿನ ಶ್ರಾವಕ ರೊಬ್ಬರ ಆಮಂತ್ರಣದಂತೆ ಅವರ ಮನೆಯ ಮದುವೆಯ ಸಮಾರಂಭದಲ್ಲಿ ಭಾಗವಹಿಸಿ ದ್ದರು. ಈ ಮದುವೆಗೆ ಹೃದಯವಂತಿಕೆಯುಳ್ಳ ಕರ್ನಾಟಕದ ಇನ್ನೊಬ್ಬರು ಭಟ್ಟಾರಕರೂ ಸಹ ಆಗಮಿಸಿದ್ದರು. ಈ ಭಟ್ಟಾರಕರ ಮುಂದೆ ಲಕ್ಷ್ಮೀಸೇನರು ತಮ ಗಾದ ಅನ್ಯಾಯವನ್ನೆಲ್ಲಾ ವಿವರಿಸಿದರು. ಅದುವರೆಗೆ ಸಹಿಸಿಕೊಂಡಿದ್ದ ಲಕ್ಷ್ಮೀಸೇನರ ದುಃಖ ಕಣ್ಣೀರಿನ ರೂಪದಲ್ಲಿ ಧಾರಾಕಾರವಾಗಿ ಹರಿಯಿತು.

ಲಕ್ಷ್ಮೀಸೇನ ಸ್ವಾಮಿಗಳು ಕಣ್ಣೀರು ಸುರಿಸುತ್ತಿರುವುದನ್ನು ಮದುವೆಗೆ ಬಂದಿದ್ದ ಬಹುಜನರು ನೋಡಿದರು. ಇದೇನು...ಸ್ವಾಮಿಗಳ ಕಣ್ಣಲ್ಲಿ ಒಂದೇ ಸಮನೆ ಕಣ್ಣೀರು ಸುರಿಯುತ್ತಿದೆ. ಎಂದು ಅವರೆಲ್ಲಾ ಆಶ್ಚರ್ಯದಿಂದ ಇತ್ತ ಕಡೆಯೇ ನೋಡತೊಡಗಿ ದರು. ಕಣ್ಣೀರಿನ ಕಾರಣ ಜನರಿಗೆ ತಿಳಿಯಲಿಲ್ಲ. ಜನರೆಲ್ಲಾ ತಮ್ಮ ಕಡೆಯೇ ನೋಡುತ್ತಿರುವುದನ್ನು ಕಂಡು ಭಟ್ಟಾರಕರಿಬ್ಬರಿಗೂ ಮುಜುಗರವುಂಟಾಯಿತು. ವಿದ್ಯಾನಂದರ ಒಳಸಂಚು ಕಾರಣವಾಗಿ ಲಕ್ಷ್ಮೀಸೇನರು ಅಂದು ಸುರಿಸಿದ ಕಣ್ಣೀರು, ವಿದ್ಯಾನಂದರ ಕೃತಕ ಜೀವನದ ಗಾಜಿನ ಮನೆಯನ್ನು ಆಸ್ಫೋಟಿಸುವ ಸಿಡಿಗುಂಡಾಗು ತ್ತದೆ ಎಂಬುದನ್ನು ಅಲ್ಲಿದ್ದ ಯಾರೂ ಅರಿತಿರಲಿಲ್ಲ !

ವಿದ್ಯಾನಂದರು ಭಟ್ಟಾರಕರಿಬ್ಬರ ಮೂಲಕ ಭಟ್ಟಾರಕರೊಬ್ಬರಿಗೆ ಉಂಟು ಮಾಡಿದ ಮಾನಸಿಕ ಹಿಂಸೆಯನ್ನು ಕೇಳಿದಮೇಲೆ ಹೃದಯವಂತಿಕೆಯುಳ್ಳ ಭಟ್ಟಾರಕರು ಬಹಳ ನೊಂದುಕೊಂಡರು. ಕೊಲ್ಲಾಪುರದ ಸ್ವಾಮಿಗಳಿಗೆ ಸಾಂತ್ವನದ ಮಾತುಗಳನ್ನು ಹೇಳಿದರು. ಇದರ ಪರಿಣಾಮವಾಗಿ ಹೃದಯವಂತಿಕೆಯುಳ್ಳ ಭಟ್ಟಾರಕರಿಗೆ ವಿದ್ಯಾನಂದರ ಮೇಲೆ ಜುಗುಪ್ಸೆ ಹುಟ್ಟಿತು. ಇದೇ ಕಾರಣವಾಗಿ ಇನ್ನುಮೇಲೆ ವಿದ್ಯಾ ನಂದರ ಜೊತೆ ಸಂಪರ್ಕವಿಟ್ಟುಕೊಳ್ಳಬಾರದು ಅವರನ್ನು ಹೋಗಿ ಕಾಣಬಾರದು. ಎಂದು ತೀರ್ಮಾನಿಸಿಕೊಂಡರು. ಮೂರು ವರ್ಷಗಳಿಗಿಂತ ಹೆಚ್ಚು ಕಾಲ ಈ ನಿರ್ಧಾರ ವನ್ನು ಅವರು ಪಾಲಿಸಿದರು. ಇಂತಹ ಒಂದು ನಿರ್ಧಾರವಾವುದೂ ಕೊಲ್ಲಾಪುರದ ಸ್ವಾಮಿಗಳಿಂದ ಮೂಡಿಬರದೇ ಇದ್ದುದು ಆಶ್ಚರ್ಯಕರವಾಗಿದೆ.

ವಿದ್ಯಾನಂದರು ಭಟ್ಟಾರಕ ಸಂಘವನ್ನು ತಮ್ಮ ಹತೋಟಿಗೊಳಪಡಿಸಿಕೊಳ್ಳುವ ಆಸೆಯನ್ನು ಇನ್ನೂ ಬಿಟ್ಟಿಲ್ಲ ಬಿಡುವಂತಹ ವ್ಯಕ್ತಿಯೂ ಅವರಲ್ಲ. ನಿರಪರಾಧಿಗಳ ಮೇಲೆ ಸುಳ್ಳು ಆಪಾದನೆ ಹೊರಿಸಿ "ನಾನು ಅವರನ್ನು ಬಿಡೋದಿಲ್ಲ ; ಕ್ಷಮೆ ಮಾಡೋದಾದರೂ ಕ್ಷಮೆ ಮಾಡೋದಿಲ್ಲ ! '' ಎಂದು ಬಹಿರಂಗವಾಗಿಯೇ ಘೋಷಿಸುವ ಈ ವಿದ್ಯಾನಂದರು ಆಸೆಗಳನ್ನು ಬಿಡುವುದಾದರೂ ಹೇಗೆ ಸಾಧ್ಯ ? ರಾಜ್ಯಗಳೆಲ್ಲಾ ಒಂದೊಂದಾಗಿ ಕೈಬಿಟ್ಟು ಹೋಗುತ್ತಿರುವಾಗಲೂ ನಾನಿನ್ನೂ ಚಕ್ರವರ್ತಿಯೇ ಎಂದು ಪ್ರಲಾಪಿಸುವ ಮತಿಭ್ರಾಂತ ಚಕ್ರವರ್ತಿಯ ಹಾಗೆ ವಿದ್ಯಾನಂದರಿಂದಲೇ ತಂತ್ರ ಕುತಂತ್ರ ವಂಚನೆಯ ಪಾಠಗಳನ್ನು ಕಲಿತ ಅವರ ಪರಮಾಪ್ತ ಭಟ್ಟಾರಕರುಗಳು— ಒಬ್ಬೊಬ್ಬರಾಗಿ ಅವರೊಂದಿಗೆ ಕಣ್ಣಾ ಮುಚ್ಚಾಲೆಯಾಡುತ್ತಾ ಕಡೆಕಡೆಗೆ ಗುರುವಿಗೇ ತಿರುಮಂತ್ರ ಹೇಳುತ್ತಾ ತಮ್ಮ ತಮ್ಮ ಸಾಮ್ರಾಜ್ಯಗಳನ್ನು ಕಟ್ಟಿಕೊಳ್ಳುತ್ತಿದ್ದರೂ ತಾವಿನ್ನೂ ದೊಡ್ಡವರಾಗುವ ಭ್ರಮೆಯನ್ನು ಮಾತ್ರ ವಿದ್ಯಾನಂದರು ಬಿಡಲು ಸಾಧ್ಯವೇ ಇಲ್ಲ !

ಅಧ್ಯಾಯ : ಇಪ್ಪತ್ತೈದು

# ವಿರೋಧಿಗಳ ಮೇಲೆ ಭಯೋತ್ಪಾದಕ ದೌರ್ಜನ್ಯಗಳು

ಒಳಗೆ ಕ್ರೂರವಾದ ಮೊಸಳೆಗಳ ಸಮೂಹದಿಂದ ಕೂಡಿರುವ ಸರೋವರ ಹೊರಗೆ ನಿರ್ಮಲವಾಗಿಯೂ ಗಂಭೀರವಾಗಿಯೂ ವಿಸ್ತಾರವಾಗಿಯೂ ಕಾಣುತ್ತದೆಯಂತೆ. ಹೀಗೆಯೇ ವಿದ್ಯಾನಂದರು ಬಹಿರಂಗದಲ್ಲಿ ದೊಡ್ಡ ಸಂತರ ಹಾಗೆ ನಾಟಕ ಮಾಡುತ್ತಾರೆ. ಆದರೆ ಅವರ ಅಂತರಂಗದಲ್ಲಿ ಅರಿಷಡ್ವರ್ಗಗಳು ಸದಾ ಎಚ್ಚರವಾಗಿದ್ದು ಮುಗ್ಧರನ್ನು ಮತ್ತು ವಿರೋಧಿಗಳನ್ನು ಆಹುತಿ ತೆಗೆದುಕೊಳ್ಳಲು ಬುಸುಗುಟ್ಟುತ್ತಿರುತ್ತವೆ. ಶೇಡಬಾಳದ ಮುಗ್ಧೆ ಬನಾರಸೀಬಾಯಿ ಅವರ ಕಾಮದಾಹಕ್ಕೆ ಒಳಗಾದ ಬಗೆಯನ್ನು ಐದನೇ ಅಧ್ಯಾಯದಲ್ಲಿ ವಿವರಿಸಿಯಾಗಿದೆ. ಇವರ ಕ್ರೌರ್ಯದಿಂದಾಗಿ ಮುಗ್ಧ ಬಾಲಕ ಸತೀಶನ ದುರ್ಮರಣವಾದುದನ್ನು ಆರನೇ ಅಧ್ಯಾಯದಲ್ಲಿ ನಿರೂಪಿಸಿಯಾಗಿದೆ.

ವಿದ್ಯಾನಂದರು ತಮ್ಮ ಜೀವನದಲ್ಲಿ ಯಾವ ವೇಷವನ್ನೇ ಧರಿಸಲಿ ಅವರ ಕ್ರೌರ್ಯ ಮತ್ತು ದೌರ್ಜನ್ಯದ ದುಃಸ್ವಭಾವಗಳು ಮಾತ್ರ ಯಥಾಸ್ಥಿತಿಯಲ್ಲಿದ್ದುಕೊಂಡು

ವಿರೋಧಿಗಳ ಮೇಲೆ ಹಾವಿನಂತೆ ಸೇಡು ತೀರಿಸಿಕೊಳ್ಳಲು ಒಂದೇ ಸಮನೆ ಒಳಸಂಚುಗಳನ್ನು ಮಾಡುತ್ತಿರುತ್ತವೆ. ಕೆಲವೊಮ್ಮೆ ಅವರ ಅಂತರಂಗದ ಹಾಲಾಹಲ ಬಹಿರಂಗವಾಗಿಯೇ ವಿರೋಧಿಗಳ ಮೇಲೆ ಹರಿಹಾಯುವುದುಂಟು. ಇದರ ಪ್ರತ್ಯಕ್ಷ ಅನುಭವ ಕರ್ನಾಟಕದಲ್ಲಿ ಈಗಾಗಲೇ ಸಹಸ್ರಾರು ಜನರಿಗೆ ಆಗಿದೆ.

ವಿದ್ಯಾನಂದರು ದಿಗಂಬರ ವೇಷಧಾರಿಯಾದ ಮೇಲೆ ದೊಡ್ಡವೇಷಕ್ಕೆ ತಕ್ಕಂತೆ ದೊಡ್ಡ ದೊಡ್ಡ ವಂಚನೆಯ ದುಷ್ಕೃತ್ಯಗಳನ್ನು ಮಾಡಿದರು. ಇವರ ಸೋಗಿನ ಮುನಿ ಧರ್ಮವನ್ನು ಕಂಡು ಅನೇಕರು ಇವರಿಗೆ ಪತ್ರ ಬರೆದು ವಿರೋಧವನ್ನು ಪ್ರಕಟಿಸಿದರು. ಹಾಗೆ ಬರೆದ ಪತ್ರಗಳೆಲ್ಲ ಕಸದಬುಟ್ಟಿಯನ್ನು ಸೇರಿದುವು. ಕೆಲವರು ಬಹಿರಂಗವಾಗಿ ಇವರ ಆಚಾರ–ವಿಚಾರಗಳಲ್ಲಿರುವ ಅಂತರವನ್ನು ಪತ್ರಿಕೆಗಳ ಮೂಲಕ ಬಹಿರಂಗ ಪಡಿಸಿದರು. ಇಂಥವರ ಮೇಲೆ ವಿದ್ಯಾನಂದರು ಜನರನ್ನೆತ್ತಿ ಕಟ್ಟುವುದರ ಮೂಲಕ ಮತ್ತು ಕೊಲೆ ಬೆದರಿಕೆ ಪತ್ರ, ಅಶ್ಲೀಲ ಕರಪತ್ರಗಳನ್ನು ಮುದ್ರಿಸಿ ಹಂಚಿಸುವುದರ ಮೂಲಕ ದೌರ್ಜನ್ಯವನ್ನೆಸಗಿದರು. ಬೆದರಿಯ ಪತ್ರಗಳು ಮತ್ತು ಅಶ್ಲೀಲ ಕರ ಪತ್ರಗಳು ಯಾವಾಗಲೂ ಇನ್ನೊಬ್ಬರ ಹೆಸರು ಅಥವಾ ಗುಪ್ತ ಹೆಸರುಗಳಲ್ಲಿರುತ್ತಿದ್ದವು. ವಿದ್ಯಾನಂದರು ತೆರೆಯಹಿಂದೆ ನಿಂತು ತಾವು ಸಾಕಿಕೊಂಡಿರುವ ದಳ್ಳಾಳಿಗಳ ಮೂಲಕ ತಮ್ಮ ವಿರೋಧಿಗಳನ್ನು ಸದೆಬಡಿಯಲು ಮಾಡಿರುವ ಭಯೋತ್ಪಾದಕ ದೌರ್ಜನ್ಯಗಳಿಗೆ ಇತಿಮಿತಿಯೆಂಬುದೇ ಇಲ್ಲ! ಚಿಕ್ಕಂದಿನಿಂದಲೂ ಈ ದುರ್ಗುಣ ಇವರಿಗೆ ಮೈಗೂಡಿ ಬಂದು ಈಗ ಹೆಮ್ಮರವಾಗಿ ಬೆಳೆದಿದೆ.

ವಿದ್ಯಾನಂದರಿಂದ ದೌರ್ಜನ್ಯಗಳಿಗೆ ಒಳಗಾದವರು, ಒಳಗಾಗಲಿದ್ದವರು ಅನೇಕ ಮಂದಿ. ಇಂಥವರಲ್ಲಿ ಕೆಲವರ ಪರಿಚಯ ಇಲ್ಲಿದೆ. ಇವರು ವಿದ್ಯಾನಂದರಿಗೆ ತೋರಿದ ವಿರೋಧವನ್ನೂ ಮತ್ತು ಅದರ ಪರಿಣಾಮಗಳನ್ನು ಗಮನಿಸಬಹುದು.

## ಶ್ರೀ ಬಾಬೂಲಾಲ್ ಜೈನ್ ಜಮಾದಾರ್

ಇವರು 'ಅಖಿಲಭಾರತ ವರ್ಷೀಯ ದಿಗಂಬರ ಜೈನ ಶಾಸ್ತ್ರಿ ಪರಿಷತ್ತು–ಬಡೌತ್' ಈ ಸಂಸ್ಥೆಯ ಮಹಾಮಂತ್ರಿಯಾಗಿದ್ದಾರೆ. ಶಾಸ್ತ್ರಿಪರಿಷತ್ತಿನ ಮುಖವಾಣಿಯಾದ 'ಧರ್ಮರಕ್ಷಾ' ಪತ್ರಿಕೆಯ ಸಂಪಾದಕರೂ ಹೌದು. ಇವರಿಗೆ ಸಮಾಜಭೂಷಣ, ಪಂಡಿತರತ್ನ, ಜೈನರತ್ನ, ವಾಣೀಭೂಷಣ, ಜೈನ ಜಗತ್ತಿನ ಕರ್ಮಠ ಧರ್ಮವೀರ ಮುಂತಾದ ಪದವಿ ಬಿರುದುಗಳಿವೆ ಇಂತಹ ಬಾಬೂಲಾಲರು ವಿದ್ಯಾನಂದರ ಕೃತ್ರಿಮತೆಯನ್ನು ವಿರೋಧಿಸಿದರು. ಅವರ ಶಿಥಿಲಾಚಾರಗಳನ್ನು ಖಂಡಿಸಿದರು. ನಿಜವಾದ ಬಣ್ಣವನ್ನು ಬಯಲು ಮಾಡಿದರು.

ವಿದ್ಯಾನಂದರ ಆಕ್ರೋಶ ಬಾಬೂಲಾಲರ ಕಡೆ ತಿರುಗಿತು. ಜನರನ್ನು ಅವರ ಮೇಲೆ ಎತ್ತಿಕಟ್ಟಿದರು. ಬಾಬೂಲಾಲರ ವಿರುದ್ಧ ವಿದ್ಯಾನಂದರ ಕಿರುಕುಳ ಹೆಚ್ಚಾದಾಗ ಅವರು ವಿದ್ಯಾನಂದರ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡುವುದಕ್ಕೂ ಸಿದ್ಧರಾಗಿ ನಿಂತರು. ಇದರಿಂದ ಹೆದರಿದ ವಿದ್ಯಾನಂದರು ಬಾಬೂಲಾಲರ ವಿರುದ್ಧ ನಡೆಸುತ್ತಿದ್ದ ಕಿತಾಪತಿಗಳನ್ನು ನಿಲ್ಲಿಸಬೇಕಾಯಿತು. ಒಮ್ಮೆ ವಿದ್ಯಾನಂದರು ಆಚಾರ್ಯ ಧರ್ಮಸಾಗರರ ಹತ್ತಿರವೂ ಬಾಬೂಲಾಲರ ವಿರುದ್ಧ ದೂರು ಹೇಳಿದರು. ಇದಕ್ಕೆ ಧರ್ಮಸಾಗರರು "ನೀವು ಮುನಿಯರಾಗಿದ್ದುಕೊಂಡು ಹೀಗೆ ವಿಕಾರವಶರಾಗಬಾರದು" ಎಂದು ಮುಂತಾಗಿ ವಿದ್ಯಾನಂದರಿಗೆ ಬುದ್ಧಿ ಹೇಳಿ ಕಳುಹಿಸಿದರು.

ಬಾಬೂಲಾಲರು ವಿದ್ಯಾನಂದರ ಧರ್ಮಬಾಹಿರ ಕೃತ್ಯಗಳನ್ನು ಖಂಡಿಸುತ್ತಿದ್ದ ಸಂಗತಿ ಸ್ವರ್ಗೀಯ ಸಾಹು ಶಾಂತಿಪ್ರಸಾದ್ ಜೈನ್‌ರವರ ಗಮನಕ್ಕೂ ಬಂದಿತ್ತು. ಒಮ್ಮೆ ಅವರು ಬಾಬೂಲಾಲರನ್ನು ಭೇಟಿಯಾಗಿದ್ದಾಗ ಪ್ರಾಸಂಗಿಕವಾಗಿ ಮಾತನಾಡುತ್ತಾ "ನೀವು ವಿದ್ಯಾನಂದರ ಜೊತೆ ಯಾಕಾದರೂ ಸಂಘರ್ಷಕ್ಕಿಳಿಯುತ್ತೀರಿ ? ಅವರ ಪಾಡಿಗೆ ಅವರನ್ನು ಬಿಟ್ಟು ನಿಮ್ಮ ಪಾಡಿಗೆ ನೀವು ಇರಬಾರದೆ ? ವಿದ್ಯಾನಂದರು ಬ್ಲಾಕ್‌ಸರ್ಪೆಂಟ್ (ಕಾಳಿಂಗಸರ್ಪ) ಇದ್ದ ಹಾಗೆ. ಅಂಥವರನ್ನು ಕೆಣಕುವುದು ಅಪಾಯಕರ" ಎಂದು ಮುಂತಾಗಿ ಹೇಳಿ ಬಾಬೂಲಾಲರನ್ನು ತಟಸ್ಥರನ್ನಾಗಿ ಮಾಡಲು ಪ್ರಯತ್ನಿಸಿದರು. ಬಾಬೂಲಾಲರು ಈ ಸಲಹೆಯನ್ನು ಉಪೇಕ್ಷೆ ಮಾಡಿ ಕಾಳಿಂಗ ಸರ್ಪಕ್ಕೆ ಹೆದರದೆ ನಿಂತರು.

ತಾ. 24-2-1981ರಂದು ಶ್ರವಣಬೆಳಗೊಳದಲ್ಲಿ ನಡೆದ ಅಖಿಲಭಾರತ ದಿಗಂಬರ ಜೈನ ಮಹಾಸಭೆಯ ಅಧಿವೇಶನದಲ್ಲಿ ವಿದ್ಯಾನಂದರು ರೋಷಪೂರ್ಣವಾದ ತಮ್ಮ ಭಾಷಣದಲ್ಲಿ ಬಾಬುಲಾಲ್ ಜೈನ್ ಜಮಾದಾರರನ್ನು ಮತ್ತೊಮ್ಮೆ ಖಂಡಿಸಿ ಮಾತನಾಡಿದರು. ಈ ಪ್ರಸಂಗವಾದ ಮೂರುತಿಂಗಳ ನಂತರ 1981ರ ಜೂನ್ ತಿಂಗಳ ಆದಿಭಾಗದಲ್ಲಿ ಬಾಬೂಲಾಲರು ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕಕ್ಕೆ ಆಗಮಿಸಿದ್ದರು. ಆ ಸಮಯದಲ್ಲಿ ಶ್ರವಣಬೆಳಗೊಳದಲ್ಲಿಯೇ ಇದ್ದ ವಿದ್ಯಾನಂದರು ಬಾಬೂಲಾಲರು ಬಂದಿರುವುದನ್ನು ತಿಳಿದು ಅವರಿಗೆ ಕರೆಕಳುಹಿಸಿದರು. ಬಾಬೂಲಾಲರು ಈ ಕರೆಗೆ ಓಗೊಡಲಿಲ್ಲ. ಕಡೆಗೆ ವಿದ್ಯಾನಂದರೇ ಬಾಬೂಲಾಲರಿದ್ದ ಧರ್ಮಶಾಲೆಯ ಕಡೆ ಹೊರಟರು. ದಾರಿಯಲ್ಲಿಯೇ ಬಾಬೂಲಾಲರು ಪರಿವಾರದವರೊಂದಿಗೆ ಎದುರಾದರು. ವಿದ್ಯಾನಂದರೇ ಮುಂದಾಗಿ "ಏನು ಬಾಬೂಲಾಲರೇ ಎಲ್ಲರೂ ಚನ್ನಾಗಿದ್ದೀರಾ ? ಎಂದು ಕುಶಲಪ್ರಶ್ನೆ ಮಾಡಿದರು. ಬಾಬೂಲಾಲರು ವಿದ್ಯಾನಂದರಿಗೆ ಯಾವ ನಮಸ್ಕಾರವನ್ನೂ ಮಾಡದೆ "ಚನ್ನಾಗಿದ್ದೇವೆ. ನೀವು ಹೇಗಿದ್ದೀರಿ ? ಎಂದು ಉಪಚಾರಕ್ಕೆ ಮಾತನಾಡಿದರು. ಮಾತು ಕತೆ ಹೆಚ್ಚು ಮುಂದುವರೆಯಲಿಲ್ಲ.

1981ರ ಜೂನ್ ತಿಂಗಳಲ್ಲಿ ಬಾಬೂಲಾಲರು ಮೈಸೂರು ನಗರಕ್ಕೆ ಭೇಟಿ ನೀಡಿದ್ದಾಗ ಅವರಿಗೆ 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ ?' ಎಂಬ ಪುಸ್ತಕವನ್ನು ಕೊಡಲಾಯಿತು. ಬಾಬೂಲಾಲರು 'ಧರ್ಮರಕ್ಷಾ' ಪತ್ರಿಕೆಯ 15-8-81ರ ಸಂಚಿಕೆಯಲ್ಲಿ ವಿದ್ಯಾನಂದರ ವಿರುದ್ಧ ಕನ್ನಡದಲ್ಲಿ ಪುಸ್ತಕ ಪ್ರಕಟವಾಗಿರುವುದನ್ನು ಉಲ್ಲೇಖಿಸುವ ಲೇಖನವನ್ನು ಪ್ರಕಟ ಮಾಡಿದರು.

## ಶ್ರೀ ಕೈಲಾಸ ಚಂದ್ರಶಾಸ್ತ್ರಿ

ಈ ಪುಸ್ತಕದ ಇಪ್ಪತ್ತೊಂದನೇ ಅಧ್ಯಾಯದಲ್ಲಿ ಕೈಲಾಸಚಂದ್ರಶಾಸ್ತ್ರಿಯವರು 'ಏಲಾಚಾರ್ಯ' ಪದವಿಯ ಬಗ್ಗೆ ಲೇಖನಗಳನ್ನು ಪ್ರಕಟಿಸಿದ ವಿವರ ಬಂದಿದೆ. 'ಜೈನ್' ಎಂಬ ಗುಪ್ತನಾಮದಲ್ಲಿ ವಿದ್ಯಾನಂದರ ಕಡೆಯವರು ಕೈಲಾಸಚಂದ್ರ ಶಾಸ್ತ್ರಿಗಳನ್ನು ಬೆದರಿಸಿದ ವಿಚಾರವೂ ಅಲ್ಲಿಯೇ ಬಂದಿದೆ.

## ಭರತ್‌ಕುಮಾರ್ ಕಾಲಾ

ಮಹಾರಾಷ್ಟ್ರದ ನಾಸಿಕ್ ಜಿಲ್ಲೆಯ ನಾಂದಗಾವ್ ಊರಿನ ಶ್ರೀ ತೇಜಪಾಲ ಕಾಲಾರವರ ಮಕ್ಕಳೇ ಭರತ್ ಕುಮಾರ್ ಕಾಲಾ ಇವರು ಬೊಂಬಾಯಿಯಲ್ಲಿ ಸುಮಾರು ಎರಡು ಸಾವಿರ ರೂಪಾಯಿಗಳ ಒಂದು ಉದ್ಯೋಗದಲ್ಲಿದ್ದರು ತರುಣ ಲೇಖಕರೂ ಆದ ಇವರು ಜನಮಂಗಲ ಕಲಶದ ಒಂದು ಅಸಂಗತ ಪ್ರಸಂಗದ ವಿಚಾರವಾಗಿ ಒಂದು ಲೇಖನ ಬರೆದು ಪತ್ರಿಕೆಯೊಂದರಲ್ಲಿ ಪ್ರಕಟಿಸಿದರು. ಇವರು ಬರೆದ ಲೇಖನ ಧರ್ಮದ ದೃಷ್ಟಿಯಿಂದ ಔಚಿತ್ಯಪೂರ್ಣವಾಗಿತ್ತು. ಪ್ರತಿಯೊಂದನ್ನೂ ರಾಜಕೀಯ ದೃಷ್ಟಿಕೋನದ ಕನ್ನಡಕದಿಂದ ನೋಡುವ ವಿದ್ಯಾನಂದರಿಗೆ ಇವರ ಲೇಖನ ಕಹಿಗುಳಿಗೆಯಾಯಿತು. ಲೇಖನ ನೋಡುತ್ತಿದ್ದಂತೆಯೇ ಕೆಂಡ ಕೆಂಡವಾದ ವಿದ್ಯಾನಂದರು ಸಂಬಂಧಪಟ್ಟವರಲ್ಲಿ ತಮ್ಮ ಪ್ರಭಾವವನ್ನುಪಯೋಗಿಸಿ ಭರತ್‌ಕುಮಾರ್ ಕಾಲಾರವರ ಉದ್ಯೋಗಕ್ಕೆ ಕಲ್ಲು ಹಾಕಿಸಿದರು.

ಭರತ್‌ಕುಮಾರ್ ಕಾಲಾರವರು ಮಹಾಮಸ್ತಕಾಭಿಷೇಕದ ನಿಮಿತ್ತ ರಜೆಯ ಮೇಲೆ ಶ್ರವಣಬೆಳಗೊಳಕ್ಕೆ ಆ ಸಮಯದಲ್ಲಿ ಬಂದಿದ್ದರು. ಇವರ ಗೈರುಹಾಜರಿಯ ಕಾಲದಲ್ಲಿ ಇವರ ಉದ್ಯೋಗಕ್ಕೆ ಚ್ಯುತಿಯುಂಟಾಯಿತು. ಶ್ರವಣಬೆಳಗೊಳದಲ್ಲಿ ತಾ॥ 25-2-1981ರಂದು ನಡೆದ ಬಹಿರಂಗ ಸಭೆಯಲ್ಲಿ ಭಾಷಣಕಾರರ ಪಟ್ಟಿಯಲ್ಲಿ ಭರತ್ ಕುಮಾರ್ ಕಾಲಾ ಅವರ ಹೆಸರೂ ಸಹ ಸೇರಿತ್ತು. ಅದೇ ಸಭೆಯಲ್ಲಿ ವೇದಿಕೆಯ ಮೇಲೆ ವಿದ್ಯಾನಂದರು ಆಸೀನರಾಗಿದ್ದರು. ಭಾಷಣ ಮಾಡಲು ಭರತ್‌ಕುಮಾರ್ ಕಾಲಾರವರು ವೇದಿಕೆಗೆ ಬಂದ ಕೂಡಲೇ ಅವರನ್ನು ಗುರುತಿಸಿದ ವಿದ್ಯಾನಂದರು ರೋಷತಪ್ತರಾಗಿ ಭರತ್‌ಕುಮಾರ್ ಕಾಲಾರನ್ನು ಅವಾಚ್ಯ ಶಬ್ದಗಳಿಂದ ನಿಂದಿಸಿ ವೇದಿಕೆಯಿಂದ

ನಿರ್ಗಮಿಸುವಂತೆ ಆರ್ಭಟಿಸಿದರು. ವಿದ್ಯಾನಂದರ ಈ ದುಂಡಾವೃತ್ತಿಯನ್ನು ಅಂದು ಸಭೆಯಲ್ಲಿದ್ದವರೆಲ್ಲಾ ಪ್ರತ್ಯಕ್ಷವಾಗಿ ಕಂಡರು. ಭರತ್‌ಕುಮಾರರ ಸಹಾಯಕ್ಕೆ ಯಾರೂ ಬರಲಿಲ್ಲ. ಬದಲಾಗಿ ಅವರನ್ನು ವೇದಿಕೆಯಿಂದ ಇಳಿಯುವಂತೆ ಕೂಯ್‌ಗುಟ್ಟಿದವರೇ ಹೆಚ್ಚಾದರು. ಅಸಹಾಯಕರಾಗಿ ಭರತ್‌ಕುಮಾರರು ವೇದಿಕೆಯಿಂದ ನಿರ್ಗಮಿಸಿದರು.

ಮುಂಬಯಿಯ ತಮ್ಮ ಉದ್ಯೋಗ ಹೋದಮೇಲೆ ಸ್ವತಂತ್ರವಾದ ವೃತ್ತಿಯೊಂದನ್ನು ಭರತ್‌ಕುಮಾರರು ಅವಲಂಬಿಸಿದರು. ಇವರ ತಂದೆ ತೇಜಪಾಲಕಾಲಾರವರು ತಮ್ಮ ಪುತ್ರನ ಮೇಲೆ ವಿದ್ಯಾನಂದರಿಂದ ಉಂಟಾದ ದೌರ್ಜನ್ಯದ ಆಘಾತದಿಂದ ಚೇತರಿಸಿಕೊಳ್ಳಲಾಗಲಿಲ್ಲ. ಕಡೆಗೆ ಅವರು ಕೊನೆಯುಸಿರೆಳೆದರು. ಹೀಗೆ ವಿದ್ಯಾನಂದರ ಕ್ರೌರ್ಯದಿಂದಾಗಿ ಭರತ್‌ಕುಮಾರ್ ಕಾಲಾರವರು ತಮ್ಮ ಉದ್ಯೋಗದೊಂದಿಗೆ ತಂದೆಯನ್ನೂ ಕಳೆದುಕೊಳ್ಳುವಂತಾಯಿತು.

ಭರತ್‌ಕುಮಾರ್ ಕಾಲಾರವರು ಅಖಿಲಭಾರತ ಮರ್ಷೀಯ ದಿಗಂಬರಜೈನ ಶಾಸ್ತ್ರಿ ಪರಿಷತ್ತಿನ ಸದಸ್ಯರೂ ಆಗಿದ್ದುದರಿಂದ ಶಾಸ್ತ್ರಿ ಪರಿಷತ್ತು ಭರತ್‌ಕುಮಾರ್ ಕಾಲಾರವರಿಗೆ ಶ್ರವಣಬೆಳಗೊಳದಲ್ಲಾದ ಅಪಮಾನದ ಘಟನೆಯನ್ನು ತೀವ್ರವಾಗಿ ಪರಿಗಣಿಸಿತು. ಪರಿಷತ್ತಿನ ಮುಂದಿನ ಸರ್ವಸದಸ್ಯರ ಸಭೆಯಲ್ಲಿ ಈ ಬಗ್ಗೆ ಚರ್ಚೆ ಮಾಡಿ ಶ್ರವಣಬೆಳಗೊಳದ ಚಾರುಕೀರ್ತಿಭಟ್ಟಾರಕರನ್ನು ಶಾಸ್ತ್ರಿ ಪರಿಷತ್ತಿನ ಸಂರಕ್ಷಕ ಸ್ಥಾನದಿಂದ ವಜಾ ಮಾಡಿತು. ಈ ವಜಾಮಾಡುವ ನಿರ್ಣಯ ಸರ್ವಾನುಮತದಿಂದ ಆಯಿತು.

## ಇತರ ತ್ಯಾಗಿಗಳು

ವಿದ್ಯಾನಂದರು ತಾವೊಬ್ಬರೇ ನಿಜವಾದ ಸನ್ಯಾಸಿಯೆಂದೆನ್ನಿಸಿಕೊಳ್ಳಲು ಇತರ ಸಹಧರ್ಮೀಯ ಜೈನತ್ಯಾಗಿಗಳ ವಿರುದ್ಧ ನಡೆಸಿರುವ ದೌರ್ಜನ್ಯಗಳಿಗೆ ಕೊನೆ ಮೊದಲಿಲ್ಲ. 1980ರಲ್ಲಿ ಇವರು ತಮ್ಮ ಚಾತುರ್ಮಾಸದ ನಾಟಕಕ್ಕೆ ಶ್ರವಣಬೆಳಗೊಳವನ್ನು ಆಯ್ಕೆ ಮಾಡಿಕೊಂಡಾಗ, ಇತರ ಯಾವ ಮುನಿಗಳೇ ಆಗಲಿ ಅಥವಾ ಆರ್ಯಿಕೆಯರೇ ಆಗಲಿ ಅಲ್ಲಿ ಚಾತುರ್ಮಾಸ ಮಾಡದಂತೆ ಖಾತರಿ ಮಾಡಿದರು. ವಿದ್ಯಾನಂದರ ಆಜ್ಞಾನುವರ್ತಿ ಚಾರುಕೀರ್ತಿ ಭಟ್ಟಾರಕರು ಆ ಸಮಯದಲ್ಲಿ ಶ್ರವಣ ಬೆಳಗೊಳದಲ್ಲಿ ಚಾತುರ್ಮಾಸ ಮಾಡಬೇಕೆಂದು ಬಂದ ಮುನಿ ಮತ್ತು ಆರ್ಯಿಕೆಯರ ತಂಡಗಳನ್ನೆಲ್ಲಾ ನಿರ್ದಾಕ್ಷಿಣ್ಯವಾಗಿ ಹೊರಗಟ್ಟಿದರು. ನಿದರ್ಶನಕ್ಕೆ ನಮಿಸಾಗರರ ಮುನಿ ಸಂಘಕ್ಕೆ 1980ರಲ್ಲಿ ಶ್ರವಣ ಬೆಳಗೊಳದಲ್ಲಿ ಚಾತುರ್ಮಾಸ ಮಾಡಲು ಚಾರುಕೀರ್ತಿಗಳು ಅವಕಾಶ ಕೊಡದೆ ಅವರನ್ನು ಸುಮಾರು ನಲವತ್ತು ಮೈಲಿ ದೂರದಲ್ಲಿದ್ದ ಸಾಲಿಗ್ರಾಮಕ್ಕೆ ಕರೆದೊಯ್ದರು. ಸಾಲಿಗ್ರಾಮದವರು ಈ ಮುನಿತಂಡಕ್ಕೆ ಅವಕಾಶ ಮಾಡಿಕೊಡದೆ ಹೋದಾಗ ಚಾರುಕೀರ್ತಿಗಳು ಸಾಲಿಗ್ರಾಮದವರ ಮೇಲೆ ಕಿಡಿಕಾರುತ್ತಾ ಆ ಮುನಿತಂಡವನ್ನು ನೂರಾರು ಮೈಲಿಗಳ ದೂರದಲ್ಲಿದ್ದ ತುಮಕೂರಿಗೆ ಸಾಗು ಹಾಕಿದರು.

ವಿದ್ಯಾನಂದರು ಬೇರೆಡೆಯಲ್ಲೂ ಇಂಥ ಅಮಾನವೀಯ ದೌರ್ಜನ್ಯವನ್ನು ಇತರ ತ್ಯಾಗಿಗಳ ಮೇಲೆ ಮಾಡಿಸಿದ್ದಾರೆ. 1981ರ ಮಹಾಮಸ್ತಕಾಭಿಷೇಕದಲ್ಲಿಯೇ ಇವರು ತಮ್ಮ ದೀಕ್ಷಾಗುರುಗಳಾದ ದೇಶಭೂಷಣರ ತೇಜೋವಧೆ ಮಾಡುವ ನಾಲ್ಕು ಪುಟಗಳ ಅಸಭ್ಯ ಕರಪತ್ರವನ್ನು ತಮ್ಮ ವಿರೋಧಿಯೊಬ್ಬರ ಹೆಸರಿನಲ್ಲಿ ಮುದ್ರಿಸಿ ಶ್ರವಣಬೆಳಗೊಳದಲ್ಲೆಲ್ಲಾ ಹಂಚಿಸಿದರು. ಹೀಗೆ ತಮ್ಮ ಗುರುವಿಗೇ ದ್ರೋಹವೆಸಗಿದ ವಿದ್ಯಾನಂದರಿಗೆ ಇತರ ತ್ಯಾಗಿಗಳ ಮೇಲೆ ನಾನಾ ರೂಪದಲ್ಲಿ ದೌರ್ಜನ್ಯವೆಸಗುವುದು ನೀರು ಕುಡಿದಷ್ಟು ಸುಲಭವಾಗಿ ಹೋಗಿದೆ. ಇತ್ತೀಚೆಗೆ ಕೋಥಳಿ ಸೇರಿದ ಮೇಲೆ ಇವರು ಆಚಾರ್ಯ ವಿಮಲಸಾಗರರ ವಿರುದ್ಧ, ತಮ್ಮ ಬಾಲಬಡುಕ ಪತ್ರಿಕೆಗಳ ಮೂಲಕ ವ್ಯವಸ್ಥಿತವಾಗಿ ಅಪಪ್ರಚಾರ ಮಾಡಿಸುತ್ತಿದ್ದಾರೆ.

## ಶ್ರೀ ಸಿ. ಬಿ. ಎಂ. ಚಂದ್ರಯ್ಯ, ಶ್ರೀ ಎಸ್. ಪಿ. ಶಾಂತರಾಜ್

ಮೈಸೂರು ನಗರದ ಸಮಾಜಹಿತಚಿಂತಕರಾದ ಶ್ರೀ ಸಿ.ಬಿ.ಎಂ. ಚಂದ್ರಯ್ಯ ಮತ್ತು ಶ್ರೀ ಎಸ್.ಪಿ. ಶಾಂತರಾಜ್ ಅವರಿಗೆ ವಿದ್ಯಾನಂದರು ಉಂಟು ಮಾಡಿದ ಮಾನಸಿಕ ಹಿಂಸೆ ಮತ್ತು ಅವರಿಬ್ಬರ ಮೇಲೆ ನಡೆಸಿದ ದೌರ್ಜನ್ಯಗಳು, ವಿದ್ಯಾನಂದರು ಯಾವ ಕಾರಣಕ್ಕೂ ಕ್ಷಮಾರ್ಹರಲ್ಲ ಎನ್ನುವಂತೆ ಮಾಡಿವೆ.

ಶ್ರವಣಬೆಳಗೊಳದ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳು ಅಕ್ರಮ ವಿಧಾನಗಳ ಮೂಲಕ ಯಾತ್ರಿಕರಿಂದ ಹಣ ದೋಚುತ್ತಿರುವುದನ್ನು ಸಿ ಬಿ.ಎಂ. ಚಂದ್ರಯ್ಯನವರು ಪತ್ತೆಮಾಡಿ ಶ್ರವಣಬೆಳಗೊಳದ ಎಸ್.ಡಿ ಜೆ ಎಂ.ಐ. ಮೇನೇಜಿಂಗ್ ಕಮಿಟಿಯ ಗಮನಕ್ಕೆ ತಂದರು. ಈ ಬಗ್ಗೆ ಕ್ರಮ ಕೈಗೊಳ್ಳಲು ಕಮಿಟಿ ವಿಫಲವಾದಾಗ ಚಂದ್ರಯ್ಯನವರು ಚಾರುಕೀರ್ತಿಗಳ ಹಗಲು ದರೋಡೆಯ ಬಗೆಗೆ ಸರ್ಕಾರಕ್ಕೆ ದೂರು ಸಲ್ಲಿಸಿದರು. ಈ ಮೊದಲೇ ಇದೇ ವಿಚಾರವಾಗಿ ಚಂದ್ರಯ್ಯನವರು ಮುಂಬಯಿಯ ಶ್ರೀ ಸಾಹು ಶ್ರೇಯಾಂಸ ಪ್ರಸಾದ್‌ಜೈನ್ ಮತ್ತು ಶ್ರೀ ಲಾಲ್‌ಚಂದ್ ಹೀರಾಚಂದ್‌ಸೇಟ್‌ರವರಿಗೂ ದೂರು ಸಲ್ಲಿಸಿದ್ದರು.

ಎಸ್.ಪಿ. ಶಾಂತರಾಜ್‌ರವರು 1979ರ ಶ್ರವಣಬೆಳಗೊಳದ ರಥೋತ್ಸವದ ವೆಚ್ಚಗಳ ಅವ್ಯವಹಾರ ಮತ್ತು ದುಂದುಗಾರಿಕೆಯನ್ನು ಬೆಳಕಿಗೆ ತಂದರು. ಇವುಗಳ ಜೊತೆಗೆ ಇವರಿಬ್ಬರೂ ವಿದ್ಯಾನಂದರ 'ದಕ್ಷಿಣಾಪಥ ವಿಹಾರ ಸ್ವಾಗತ ಸಮಿತಿಗೆ ಮೊದಲನೆ ಕಂತಾಗಿ 25,000 ರೂಪಾಯಿ ಹಣವನ್ನು ಕಮಿಟಿಯು ಅಕ್ರಮ ವಿಧಾನದಿಂದ ಬಿಡುಗಡೆ ಮಾಡಲು ಆಕ್ಷೇಪಣೆಯನ್ನೆತ್ತಿದರು. ಇವರಿಬ್ಬರೂ ಶ್ರವಣಬೆಳಗೊಳ ಕ್ಷೇತ್ರದ ಆಡಳಿತ ಸಂಸ್ಥೆಯಾದ ಎಸ್.ಡಿ.ಜೆ.ಎಂ.ಐ. ಮೇನೇಜಿಂಗ್ ಕಮಿಟಿಯ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದುದರಿಂದ ತಮ್ಮ ಗಮನಕ್ಕೆ ಬಂದ ಅನ್ಯಾಯಗಳನ್ನು ಬಯಲಿಗೆಳೆದರು.

ಮೇಲಿನ ಸದಸ್ಯರಿಬ್ಬರ ನ್ಯಾಯಬದ್ಧ ನಡವಳಿಕೆಗಳು ಕಮಿಟಿಯ ಛೇರ್ಮನ್ನರಾದ ಚಾರುಕೀರ್ತಿಸ್ವಾಮಿಗಳಿಗೆ ಹಿಡಿಸಲಿಲ್ಲ. ತಮ್ಮ ಕಳ್ಳ ವ್ಯವಹಾರಗಳು ಬಯಲಾದ ಕೂಡಲೇ ಚಾರುಕೀರ್ತಿಗಳು ವಿದ್ಯಾನಂದರ ಮೊರೆಹೊಕ್ಕರು. ಆ ಸಮಯದಲ್ಲಿ ಶ್ರವಣ ಬೆಳಗೊಳದಿಂದ ಬಹು ದೂರದಲ್ಲಿಯೇ ಇದ್ದ ವಿದ್ಯಾನಂದರಿಗೆ ಈ ವಿವರಗಳೆಲ್ಲಾ ತಿಳಿದು ಕೋಪಗೊಂಡರು. ಅವರ ಅಪರಾಧ ಪ್ರಜ್ಞೆ ಜಾಗೃತವಾಯಿತು. ತಮ್ಮ ಹತೋಟಿಯಲ್ಲಿದ್ದ ಶ್ರವಣಬೆಳಗೊಳ ಸ್ವಾಮಿಗಳ ಅಕ್ರಮ ವ್ಯವಹಾರಗಳನ್ನು ಪತ್ತೆ ಮಾಡುವವರನ್ನು, ತಮ್ಮ ಸ್ವಾಗತ ಸಮಾರಂಭಗಳಿಗೆ ಆಕ್ಷೇಪವೆತ್ತುವವರನ್ನು ನಿರ್ಮೂಲ ಮಾಡಲು ವಿದ್ಯಾನಂದರು ತಕ್ಷಣ ತೀರ್ಮಾನಿಸಿದರು. ಇದಕ್ಕಾಗಿ ಪಿತೂರಿಗಳನ್ನು ನಿಯೋಜಿಸ ತೊಡಗಿದರು.[1] ಪಿತೂರಿಗಳು ಸಾಕಷ್ಟು ಫಲಕಾರಿಯಾಗದೇ ಹೋದಾಗ ವಿದ್ಯಾನಂದರು ತಾ॥ 14-7-1980ರಂದು ಬೆಳ್ಳೂರಿನ ಬಹಿರಂಗ ಸಭೆಯಲ್ಲಿ ಚಂದ್ರಯ್ಯ ಮತ್ತು ಶಾಂತ ರಾಜರ ವಿರುದ್ಧ ಸುಳ್ಳು ಆಪಾದನೆಗಳನ್ನು ಹೊರಿಸಿ "ನಾನು ಅವರನ್ನು ಬಿಡೋದಿಲ್ಲ ; ಬಿಡೋ ಹಾಗಿಲ್ಲ. ಕ್ಷಮೆ ಮಾಡೋದಾದರೂ ಕ್ಷಮೆ ಮಾಡೋದಿಲ್ಲ" ಎಂದು ಆಕ್ರೋಶ ದಿಂದ ಕೂಗಾಡಿದರು. ಇದೇ ಸಂದರ್ಭದಲ್ಲಿ ಅವರಿಬ್ಬರನ್ನೂ ಸರಿ ಮಾಡಿ ಎಂದು ಜನಗಳಿಗೆ ಕರೆಕೊಟ್ಟು ದೊಂಬಿ ಮಾಡಲು ಪ್ರಚೋದನೆ ನೀಡಿದರು. ಮುಂದೆ ಶ್ರವಣ ಬೆಳಗೊಳ ಮತ್ತು ಮೈಸೂರಿನ ಸಾರ್ವಜನಿಕ ಗೋಡೆಗಳ ಮೇಲೆ ಇವರಿಬ್ಬರ ವಿರುದ್ಧ ಅಸಭ್ಯ ಘೋಷಣೆಗಳನ್ನು ಬರೆಸಿದ್ದಲ್ಲದೆ ಅವರಿಬ್ಬರ ತೇಜೋವಧೆ ಮಾಡುವ ಬಟ್ಟೆಯ ಬ್ಯಾನರ್‌ಗಳನ್ನು ಸಹಾ ಎರಡು ಊರುಗಳಲ್ಲಿಯೂ ಕಟ್ಟಿಸಿದರು. ಇಷ್ಟು ಸಾಲ ದೆಂಬಂತೆ ಇವರಿಬ್ಬರನ್ನೂ ಸಂಪೂರ್ಣವಾಗಿ ಮುಗಿಸಿ ಬಿಡಲು ಅವರ ವಿರುದ್ಧ ಬೇರೆ ಯವರ ಹೆಸರಿನಲ್ಲಿ ಅಶ್ಲೀಲ ಕರಪತ್ರಗಳನ್ನು ಮುದ್ರಿಸಿ ಕರ್ನಾಟಕದಾದ್ಯಂತ ಹಂಚಿಸಿ ದರು. ಈ ದುಷ್ಕೃತ್ಯಗಳನ್ನೆಲ್ಲಾ ಮಾಡಿಸಲು ಶ್ರವಣಬೆಳಗೊಳ ಮತ್ತು ಮೈಸೂರಿನ ಕೆಲವರು ಪುಂಡರನ್ನು ವಿದ್ಯಾನಂದರು ಅವಲಂಬಿಸಿದರು.

ಸುಮಾರು ಮೂರು ತಿಂಗಳವರೆಗೆ ಚಂದ್ರಯ್ಯ ಮತ್ತು ಶಾಂತರಾಜರ ಮೇಲೆ ಸತತವಾಗಿ ಭಯೋತ್ಪಾದಕ ದೌರ್ಜನ್ಯಗಳ ಧಾಳಿ ನಡೆಯಿತು. ಈ ಸಂದರ್ಭದಲ್ಲಿ ವಿದ್ಯಾನಂದರ ಪರವಾಗಿ ಇವರಿಬ್ಬರ ಮೇಲೆ 'ಶ್ರೀ ಮಹಾವೀರ ಭಗವಾನಕಿ ಜೈ' ಎಂಬ ಶಿರೋನಾಮೆಯಲ್ಲಿ ಒಂದು ಅಶ್ಲೀಲ ಕರಪತ್ರ ಮುದ್ರಿಸಿ ಹಂಚಿದ್ದ, ಮೈಸೂರಿನ ಬ್ರಹ್ಮಪ್ಪ ಎಂಬುವರ ವಿರುದ್ಧ ಚಂದ್ರಯ್ಯನವರು ಮಾನನಷ್ಟ ಮೊಕದ್ದಮೆ[2] ಹೂಡಿ ದರು.

---

1. ಈ ಪಿತೂರಿಗಳ ವಿವರಗಳಿಗೆ 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ ?' ಪುಸ್ತಕ ನೋಡಿ.

2. ಈ ಮಾನನಷ್ಟ ಮೊಕದ್ದಮೆಯಲ್ಲಿ ಈಗಾಗಲೇ ಚಂದ್ರಯ್ಯನವರು ಗೆದ್ದಿದ್ದಾರೆ. ಆರೋಪಿ ಕೋರ್ಟಿಗೆ ಮನವಿ ಸಲ್ಲಿಸಿದ್ದಾರೆ.

ಇದೇ ಸಮಯದಲ್ಲಿ ಚಂದ್ರಯ್ಯನವರು ಅಧ್ಯಕ್ಷರಾಗಿದ್ದ 'ಶ್ರೀ ಗೋಮಟಗಿರಿ ಕ್ಷೇತ್ರ ಸೇವಾ ಸಮಿತಿ'ಯ ವಿರುದ್ಧವೂ ವಿದ್ಯಾನಂದರು ಮೈಸೂರಿನ ಕೆಲವು ಜನರನ್ನು ಎತ್ತಿ ಕಟ್ಟಿದರು. ಓ ಎಂದರೆ ಟೋ ಎನ್ನಲು ಬಾರದ ಮೈಸೂರಿನ ಕೆಲವು ಮಂದಿ ವಿದ್ಯಾನಂದರು ಮತ್ತು ಚಾರುಕೀರ್ತಿಗಳ ನಿಜವಾದ ಬಣ್ಣವನ್ನು ತಿಳಿಯಲು ಅಸಮರ್ಥ ರಾಗಿ, ಅವರಿಂದ ಪ್ರಚೋದಿತರಾಗಿ ಶ್ರೀ ಗೋಮಟಗಿರಿ ಕ್ಷೇತ್ರವನ್ನು ಚಂದ್ರಯ್ಯನವರ ಅಂಕೆಯಿಂದ ಕಸಿದುಕೊಳ್ಳಲು ಮೂರ್ಖಸಾಹಸ ಮಾಡಿದರು. ಈ ಸಂಬಂಧದಲ್ಲಿಯೂ ಸಹ ಮೊಕದ್ದಮೆಯೊಂದು[1] ಕೋರ್ಟಿನ ಕಟ್ಟೆ ಹತ್ತಿತು.

ಈ ನಡುವೆ ವಿದ್ಯಾನಂದರು, ಚಂದ್ರಯ್ಯ ಮತ್ತು ಶಾಂತರಾಜರ ಮೇಲೆ ನಡೆಸು ತ್ತಿರುವ ದೌರ್ಜನ್ಯಗಳು ಭದ್ರಾವತಿಯ ಬಿ.ಎಸ್. ನಂದಕುಮಾರರ ಗಮನಕ್ಕೆ ಬಂದುವು. ನಂದಕುಮಾರರಿಗೆ ಇವರಿಬ್ಬರ ಪರಿಚಯ 1970ನೇ ಇಸವಿಯಿಂದಲೂ ಇತ್ತು. ಈ ಇಬ್ಬರು ಧರ್ಮಿಷ್ಠರ ಮೇಲೆ ನಡೆಯುತ್ತಿದ್ದ ದೌರ್ಜನ್ಯವನ್ನು ಚನ್ನಾಗಿ ಗ್ರಹಿಸಿದ ನಂದಕುಮಾರರು ಅವರಿಬ್ಬರೂ ತೋರುತ್ತಿದ್ದ ವಾತ್ಸಲ್ಯ ಭಾವನೆಯಿಂದ ಪ್ರೇರಿತರಾಗಿ ಅವರಿಬ್ಬರ ನೆರವಿಗೆ ಬಂದರು.

ನಂದಕುಮಾರರು ವಿದ್ಯಾನಂದರನ್ನು ಪ ಮು ರಿ ಸ ಲು ಸಿದ್ಧರಾಗಿ ತಾ॥ 3-11-1980ರಂದು ಸೋಮವಾರ ಶ್ರವಣ ಬೆಳಗೊಳದಲ್ಲಿ ವಿದ್ಯಾನಂದರನ್ನು ಕಂಡು ಮಾತುಕತೆಯಾಡಲು ಪ್ರಯತ್ನಿಸಿದರು. ಭೇಟಿಯಾದರೂ ಮಾತುಕತೆಯಾಡಲು ವಿದ್ಯಾನಂದರು ಅವಕಾಶ ಕೊಡದೇ ಹೋದುದರಿಂದ ಬಿ.ಎಸ್ ನಂದಕುಮಾರರು ಅಲ್ಲಿಂದ ಹಿಂತಿರುಗಿದರು. ಆದರೆ ವಿದ್ಯಾನಂದರಿಂದ ಸ್ಪಷ್ಟೀಕರಣ ಕೇಳುವ ತಮ್ಮ ಪ್ರಯತ್ನವನ್ನು ನಂದಕುಮಾರರು ನಿಲ್ಲಿಸಲಿಲ್ಲ. ತಾ॥ 11-11-1980ರಿಂದ ಆರಂಭಿಸಿ ನಾಲ್ಕು ಬಹಿರಂಗ ಪತ್ರಗಳನ್ನು ಇವರು ವಿದ್ಯಾನಂದರಿಗೆ ಬರೆದರು. ವಿದ್ಯಾನಂದರು ಒಂದು ಪತ್ರಕ್ಕೂ ಉತ್ತರ ನೀಡಲಿಲ್ಲ. ಇದರ ಬಗ್ಗೆ ಏನೂ ಗೊತ್ತಿಲ್ಲದವರಂತೆ ನಟಿಸ ತೊಡಗಿದರು. ಸಮಾಜದ ಜನರಲ್ಲಿ ನಾಲ್ಕು ಬಹಿರಂಗ ಪತ್ರಗಳ ಮುದ್ರಿತ ಪ್ರತಿಗಳು ಹಂಚಿಕೆಯಾಗಿ ಜನರು ವಿದ್ಯಾನಂದರ ಬಗೆಗೆ ಸಂಶಯ ಪಡುವಂತಾಯಿತು.

ಮುಂದೆ ನಂದಕುಮಾರರು 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ ?' ಎಂಬ ಪುಸ್ತಕವನ್ನು 1981 ರ ಜೂನ್ ತಿಂಗಳಿನಲ್ಲಿ ಪ್ರಕಟಿಸಿ ವಿದ್ಯಾನಂದರು ಮತ್ತು ಅವರ ಶಿಷ್ಯ ಚಾರುಕೀರ್ತಿಗಳ ಧರ್ಮಬಾಹಿರ ಕೃತ್ಯಗಳನ್ನು ಬಯಲಿಗೆಳೆದರು. ಗುರುಶಿಷ್ಯ ರಿಬ್ಬರ ಸೋಗಿನ ನಡವಳಿಕೆಗಳಿಗೆ ಕನ್ನಡಿ ಹಿಡಿದಿರುವ ಈ ಪುಸ್ತಕದ ಕಡೆಗೆ ಇಬ್ಬರೂ ಬೆನ್ನು ತಿರುಗಿಸಿಯೇ ಇದುವರೆಗೆ ಓಡಾಡಿಕೊಂಡಿದ್ದಾರೆ.

---

1. ಈ ಮೊಕದ್ದಮೆಯಲ್ಲಿಯೂ ಸಹ ಚಂದ್ರಯ್ಯನವರು ಜಯಗಳಿಸಿದ್ದಾರೆ.

ವಿದ್ಯಾನಂದರು ಚಂದ್ರಯ್ಯ ಮತ್ತು ಶಾಂತರಾಜರಿಬ್ಬರ ಮೇಲೆ ನಡೆಸಿದ ದೌರ್ಜನ್ಯಗಳು ಅದರ ಹಿನ್ನೆಲೆ ಮತ್ತು ಪರಿಣಾಮಗಳ ಪೂರ್ಣ ವಿವರಗಳನ್ನು 'ಮುನಿ ವಿದ್ಯಾನಂದರು ಸುಳ್ಳಾಡಿದ್ದೇಕೆ ?' ಪುಸ್ತಕದಲ್ಲಿ ನೋಡಬಹುದು.

### ಬಿ. ಎಸ್. ನಂದಕುಮಾರ್

ಬಿ.ಎಸ್. ನಂದಕುಮಾರರು ನಾಲ್ಕು ಬಹಿರಂಗ ಪತ್ರಗಳು ಮತ್ತು ಒಂದು ಪುಸ್ತಕವನ್ನು ವಿದ್ಯಾನಂದರ ವಿರುದ್ಧ ಬರೆದು ಪ್ರಕಟಿಸಿದುದರಿಂದ ವಿದ್ಯಾನಂದರು ಮತ್ತು ಚಾರುಕೀರ್ತಿಗಳಿಬ್ಬರ ಒಳಗುಟ್ಟು ರಟ್ಟಾಯಿತು. ಇದರಿಂದ ತಮ್ಮ ಚಿತ್ತ ಸ್ವಾಸ್ಥ್ಯವನ್ನು ಕಳೆದುಕೊಂಡ ವಿದ್ಯಾನಂದರು ನಂದಕುಮಾರರ ವಿರುದ್ಧ ಒಟ್ಟು ಆರು ಅಶ್ಲೀಲಕರ ಪತ್ರಗಳನ್ನು ಬೇರೆಯವರ ಹೆಸರು ಮತ್ತು ಕಲ್ಪಿತ ಹೆಸರುಗಳಲ್ಲಿ ಮುದ್ರಿಸಿ ವ್ಯಾಪಕವಾಗಿ ಅಂಚೆಯ ಮೂಲಕ ಹಂಚಿಸಿದರು. ಈ ಅಪಪ್ರಚಾರಕ್ಕೆ ನಂದಕುಮಾರರು ಸೊಪ್ಪು ಹಾಕಲಿಲ್ಲ.

ವಿದ್ಯಾನಂದರಿಂದ ದೌರ್ಜನ್ಯಕ್ಕೊಳಗಾಗಿ ನಾನಾ ರೀತಿಯ ಕಷ್ಟನಷ್ಟಕ್ಕೊಳಗಾದವರು ಅಥವಾ ದೌರ್ಜನ್ಯಗಳನ್ನು ಎದುರಿಸಿದವರು ಇಷ್ಟೇ ಜನರೆಂದಲ್ಲ. ಶ್ರಮ ವಹಿಸಿ ಪತ್ತೆ ಮಾಡಿದರೆ ಕರುಣಾಜನಕವಾದ, ಸ್ವಾರಸ್ಯಕರವಾದ, ಅನೇಕ ಪ್ರಸಂಗಗಳು ಬಯಲಿಗೆ ಬರಬಹುದು.

ಅಧ್ಯಾಯ : ಇಪ್ಪತ್ತಾರು

## ಶೇಡಬಾಳ ಮತ್ತು ಹೊಂಬುಜಗಳ ಭೇಟಿ

ವಿದ್ಯಾನಂದರು 1980 ರ ಏಪ್ರಿಲ್ ತಿಂಗಳ ಕಡೆಯ ವಾರದಲ್ಲಿ ತಮ್ಮ ಸ್ವಸ್ಥಳವಾದ ಶೇಡಬಾಳಕ್ಕೆ ಭೇಟಿ ನೀಡಿದ್ದರು. ದಿಗಂಬರ ವೇಷಧಾರಿಯಾದ ನಂತರದ ಪ್ರಥಮ ಭೇಟಿ ಇದು. ಸ್ವಂತ ಊರಿನಲ್ಲಿ ತಮಗೆ ಯಾವ ವಿರೋಧವೂ ಇಲ್ಲ ಎಂದು ತೋರಿಸಿಕೊಳ್ಳುವುದೇ ಇವರ ಭೇಟಿಯ ನಿಜವಾದ ಉದ್ದೇಶವಾಗಿತ್ತು. ಇಪ್ಪತ್ತೂರು ವರ್ಷಗಳ ಹಿಂದೆ ಇವರು ಕ್ಷುಲ್ಲಕ ಪಾರ್ಶ್ವಕೀರ್ತಿಗಳ ವೇಷದಲ್ಲಿ ನಡೆಸಿದ ದುರಾಚಾರಗಳು ಶೇಡಬಾಳದ ಜನರ ಮನಸ್ಸಿನಲ್ಲಿ ಇನ್ನೂ ಹಚ್ಚ ಹಸುರಾಗಿಯೇ ಇದ್ದುವು. ಇಂಥವರು ದಿಗಂಬರ ಮುನಿಯಾಗಿ ಊರಿಗೆ ಬರುತ್ತಾರೆಂದು ಕೇಳಿದ ಶೇಡಬಾಳದ ಬಹು ಜನರು ವಿದ್ಯಾನಂದರ ಬಗ್ಗೆ ಕುತೂಹಲ ತಾಳಿದರು.

ಕೆಲವರು ವಿದ್ಯಾನಂದರಲ್ಲಿ ಮೂಲಭೂತವಾದ ಮಾನಸಿಕ ಪರಿವರ್ತನೆಗಳಾಗಿರಬಹುದು ಎಂದುಕೊಂಡರು. ಕೆಲವರು ಹಿಂದೆ ಅಷ್ಟೆಲ್ಲಾ ಅನಾಚಾರಗಳನ್ನು ಮಾಡಿದವನು ಖರೇ ಮನುಷ್ಯ ಆಗಿರಲಿಕ್ಕಿಲ್ಲ ಎಂದುಕೊಂಡರು. ಕೆಲವರು ಈತ ಹಿಮಾಲಯಕ್ಕೆಲ್ಲಾ ಹೋಗಿಬಂದಮೇಲೆ ದೊಡ್ಡವನಾಗಿದ್ದರೂ ಆಗಿರಬಹುದು ಎಂದುಕೊಂಡರು. ಈತ ಹಿಮಾಲಯಕ್ಕೆ ಹೋಗಿ ಬಂದಿರಬಹುದು ಆದರೆ ದಿಗಂಬರ ಮುನಿಗಳಾದವರು ಹೋಗಲೇಬೇಕಾದ ಪುಣ್ಯಕ್ಷೇತ್ರವಾದ ಸಮ್ಮೇದ ಶಿಖರಜಿಗೆ ಈತ ಏಕೆ ಇನ್ನೂ ಹೋಗಿಯೇ ಇಲ್ಲ ? ಎಂದು ಕೆಲವರು ಪ್ರಶ್ನೆ ಹಾಕಿಕೊಂಡರು. ಕೆಲವರಂತೂ ವಿದ್ಯಾನಂದರ ಯಾವ ಕಾರ್ಯಕ್ರಮದ ಕಡೆಯೂ ತಿರುಗಿಯೂ ಸಹ ನೋಡಲಿಲ್ಲ.

ಯಥಾಪ್ರಕಾರ ಶೇಡಬಾಳದಲ್ಲಿಯೂ ದಿಗಂಬರವೇಷದ ಮೆರವಣಿಗೆ ನಡೆಯಿತು. ವಿದ್ಯಾನಂದರು ಮೆರವಣಿಗೆಯಲ್ಲಿ ಹೋಗುವಾಗ ಒಂದು ಕಡೆ ಕಟ್ಟಡವೊಂದರ ಮೆಟ್ಟಿಲುಗಳ ಮೇಲೆ ವಯಸ್ಸಾದ ವೃದ್ಧರೊಬ್ಬರು ಕುಳಿತಿದ್ದರು. ಇತರರೆಲ್ಲಾ ನಿಂತು ಈ ಮೆರವಣಿಗೆಯನ್ನು ನೋಡುತ್ತಿರುವಾಗ ವೃದ್ಧರು ಮೆಟ್ಟಿಲುಗಳ ಮೇಲೆ ಕದಲದೆ ಕುಳಿತು ಮೆರವಣಿಗೆಯನ್ನು ವೀಕ್ಷಿಸುತ್ತಿದ್ದರು. ವೃದ್ಧರನ್ನು ಗಮನಿಸಿದ ವಿದ್ಯಾನಂದರು ಅವರ ಕಡೆಗೇ ಬಂದು ಪಿಂಛವನ್ನು ಅವರ ತಲೆಯಮೇಲಿಟ್ಟು ಆಶೀರ್ವಾದ ಮಾಡಿದರು. ವೃದ್ಧರು ಇದಕ್ಕೆ ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ. ವಿದ್ಯಾನಂದರಿಗೆ ನಮಸ್ಕಾರವನ್ನೂ ಮಾಡಲಿಲ್ಲ. ವಿದ್ಯಾನಂದರು ಪಿಂಛವನ್ನು ಹಿಂತೆಗೆದುಕೊಂಡು ಮುಂದುವರೆದರು.

ಶೇಡಬಾಳದ ಅನಾಥಾಶ್ರಮದ ಆವರಣದಲ್ಲಿಯೇ ಇವರ ಬಹಿರಂಗ ಸಭೆ ನಡೆಯಿತು. ಅಲ್ಲಿ ನಾನಾ ಕಾರಣಗಳಿಂದಾಗಿ ಜನಸೇರಿದ್ದರು. ದೊಡ್ಡ ಜನಸಮೂಹವನ್ನು ನೋಡಿ ವಿದ್ಯಾನಂದರಿಗೆ ಸಂತೋಷವುಂಟಾಯಿತು. ಅವರು ಭಾಷಣದಲ್ಲಿ ''ಇಷ್ಟೊಂದು ಜನ ಇಲ್ಲಿ ಸೇರುತ್ತೀರಿ ಎಂದು ಮೊದಲೇ ನಮಗೆ ಗೊತ್ತಾಗಿದ್ದರೆ ಇನ್ನೂ ನಾಲ್ಕೈದು ದಿನಗಳ ಕಾರ್ಯಕ್ರಮವನ್ನು ನಾವು ಇಟ್ಟುಕೊಳ್ಳಬಹುದಾಗಿತ್ತು'' ಎಂದು ಹೇಳಿದರು. ಈ ಮಾತು ತಮ್ಮ ಹಿಂದಿನ ಅನಾಚಾರಗಳಿಂದಾಗಿ ಎಲ್ಲಿ ಜನ ಸೇರುವುದಿಲ್ಲವೋ ಎಂಬ ಅವರ ಆತಂಕನ್ನು ಬಹಿರಂಗಪಡಿಸಿತು.

ಮೆರವಣಿಗೆ, ಸಭೆ, ಮಾತು–ಈ ಎಲ್ಲಾ ನಾಟಕಗಳಾದ ಮೇಲೆ ವಿದ್ಯಾನಂದರ ಕಂಪನಿ ಶೇಡಬಾಳವನ್ನು ಬಿಟ್ಟಿತು. ಮೆರವಣಿಗೆಯ ಸಂದರ್ಭದಲ್ಲಿ ವಿದ್ಯಾನಂದರು. ಸ್ವತಃ ಒಂದು ಆಶೀರ್ವಾದ ಮಾಡಿದರೂ ಕದಲದೆ ಮೆಟ್ಟಿಲ ಮೇಲೆ ಕುಳಿತಿದ್ದ ಶೇಡಬಾಳದ ವೃದ್ಧರು ತಮಗೆ ಬಹಳ ಪರಿಚಯವಿದ್ದ ಹುಡುಗನೊಬ್ಬನಿಗೆ ವಿದ್ಯಾನಂದರ ವಿಚಾರವಾಗಿ ಹೀಗೆ ಹೇಳಿದರು ;

"ನೀನು ಆ ವಿದ್ಯಾನಂದನನ್ನು ಖರೇ ಮನುಷ್ಯ ಅಂತ ನಂಬಬೇಡ. ಅವ ಇಲ್ಲಿಯ ಆಶ್ರಮದಲ್ಲಿಯೇ ಕ್ಷುಲ್ಲಕಸ್ವಾಮಿಯಾಗಿದ್ದುಕೊಂಡು ಆಡಳಿತ ನಡೆಸುತ್ತಿದ್ದಾಗ ಮಾಡಬಾರದ ಅನಾಚಾರಗಳನ್ನೆಲ್ಲಾ ಮಾಡಿದ. ಪಾತ್ರೆ ತಿಕ್ಕುವವಳ ಜೊತೆ ಸಂಬಂಧ ಇಟ್ಟುಕೊಂಡಿದ್ದ. ಅವಳು ಈಗಲೂ ಇದ್ದಾಳೆ. ಅವಳ ಹೆಸರನ್ನು ನಾನು ನಿನಗೆ ಹೇಳುವುದಿಲ್ಲ. ಆಗ ದೀಕ್ಷೆ ತೆಗೆದುಕೊಂಡು ತಿಳಿದೂ ತಿಳಿದೂ ವ್ಯಭಿಚಾರಮಾಡಿದ ವನು ಈಗ ಸರಿಯಾಗಿರುತ್ತಾನೆಂದು ನಾನು ನಂಬುವುದಿಲ್ಲ ಆದ್ದರಿಂದ ನಾನು ಅವನಿಗೆ ನಮಸ್ಕಾರ ಮಾಡಲಿಲ್ಲ. ಇವನನ್ನು ಹಿಂದೆ ಈ ಆಶ್ರಮದಿಂದ ಓಡಿಸಬೇಕಾದರೆ ಭೂಮಿ ಆಕಾಶವನ್ನು ಒಂದು ಮಾಡಬೇಕಾಯಿತು. ಇಂಥವನು ಮತ್ತೆ ಈಗ ಈ ಊರಿಗೆ ಬಂದಾಗ ಇವನೆಲ್ಲಿ ಆಶ್ರಮದಲ್ಲಿಯೇ ನೆಲೆಸಿಬಿಡುತ್ತಾನೋ ಎಂಬ ಹೆದರಿಕೆ ನನಗಾಗಿತ್ತು. ಸದ್ಯ ಬಂದವನು ಹಾಗೆಯೇ ಹೊರಟು ಹೋದ. ನೀವೆಲ್ಲಾ ಪುಣ್ಯ ಮಾಡಿದ್ದಿರಿ ಮತ್ತೆ ಅವನೇನಾದರೂ ಈ ಊರಿಗೆ ಬಂದರೆ ನೀನು ಅವನಿಗೆ ನಮಸ್ಕಾರ ಮಾಡಬೇಡ, ಅವನ ಮಾತನ್ನೂ ಕೇಳಬೇಡ. ಅವನನ್ನು ನೋಡಲಿಕ್ಕೂ ಹೋಗ ಬೇಡ. ಅವನೆಂಥಾ ಸ್ವಾಮಿಯಾದರೂ ಅವನ ಮನಸ್ಸು ಕೆಟ್ಟದ್ದು."

ಅಜ್ಜನ ಅನುಭವದ ಮಾತುಗಳನ್ನು ಕೇಳಿ ಅವರಲ್ಲಿ ಬಹಳ ಸಲುಗೆಯಿದ್ದ ಹುಡುಗನಿಗೆ ಆಶ್ಚರ್ಯವಾಯಿತು. ಹದಿನೈದು ವರ್ಷದ ಆ ಹುಡುಗ ತಾನಿನ್ನೂ ಹುಟ್ಟದೇ ಇರುವಾಗ ಶೇಡಬಾಳದ ಆಶ್ರಮದಲ್ಲಿ ನಡೆದ ದೊಡ್ಡವರ ಸಣ್ಣ ಕೆಲಸ ಗಳನ್ನು ಆ ವೃದ್ಧರು ಹೇಳಿದಂತೆ ತನ್ನ ಸಹಪಾಠಿಗಳಿಗೆ ವಿವರಿಸಿ ಹೇಳಿದ ಶೇಡಬಾಳದ ಮುಂದಿನ ಪೀಳಿಗೆಗೆ ವಿದ್ಯಾನಂದರ ಅಪ್ಪಟ ಬಣ್ಣ ಬಟ್ಟಬಯಲಾಯಿತು.

1981 ರ ಜೂನ್ ತಿಂಗಳಲ್ಲಿ ಕೆಲವರಿಗೆ 'ಮುನಿ ವಿದ್ಯಾನಂದರು ಸುಳ್ಳಾಡಿ ದ್ದೇಕೆ' ಪುಸ್ತಕ ತಲುಪಿದಾಗ ವಿದ್ಯಾನಂದರು ತಮ್ಮ ಹುಟ್ಟುಗುಣವನ್ನು ಇನ್ನೂ ಬಿಟ್ಟಿಲ್ಲ ಎಂದುಕೊಂಡರು. ಈ ಪುಸ್ತಕ ವೃದ್ಧರಿಂದ ಉಪದೇಶ ಪಡೆದ ಹುಡುಗನಿಗೂ ಸಿಕ್ಕಿತು. ಹುಡುಗ ಪುಸ್ತಕವನ್ನು ಪೂರ್ಣವಾಗಿ ಓದಿದ. ಹಿಂದೆ ತನ್ನ ಸಲುಗೆಯ ವೃದ್ಧರು ವಿದ್ಯಾನಂದರ ಬಗೆಗೆ ಹೇಳಿದ ಮಾತುಗಳು ನೂರಕ್ಕೆ ನೂರರಷ್ಟು ಸತ್ಯ ಎಂದು ಅವನಿಗೆ ಮನವರಿಕೆಯಾಯಿತು.

### ಹೊಂಬುಜ ಭೇಟಿ

ವಿದ್ಯಾನಂದರು 1981 ರ ಏಪ್ರಿಲ್ ತಿಂಗಳ ಮಧ್ಯಭಾಗದಲ್ಲಿ ನರಸಿಂಹರಾಜ ಪುರದಿಂದ ಶಿವಮೊಗ್ಗಕ್ಕೆ ಬಂದು ಒಂದು ವಾರ ವಾಸ್ತವ್ಯ ಹೂಡಿದ್ದಾಗ, ಹೊಂಬುಜದ ಕೆಲವರು ವಿದ್ಯಾನಂದರನ್ನು ಹೊಂಬುಜಕ್ಕೆ ಬರುವಂತೆ ಆಹ್ವಾನಿಸಿದರು. ವಿದ್ಯಾ ನಂದರಿಗೆ ರಾಜಕೀಯ ಪ್ರಭಾವವಿದೆ, ಆದರಿಂದ ಹೊಂಬುಜಕ್ಕೇನಾದರೂ ಸರ್ಕಾರದಿಂದ

ಆಗಬೇಕಾದ ಕೆಲಸವನ್ನು ಮಾಡಿಸಿಕೊಳ್ಳಬಹುದು ಎಂದು ಭ್ರಮೆಗೊಳಗಾಗಿದ್ದ ಕೆಲವರು ಈ ಆಹ್ವಾನ ನೀಡಿದ್ದರು. ಹೊಂಬುಜ ನಿವಾಸಿಗಳ ಪೈಕಿ ಯಾರಿಂದ ವಿದ್ಯಾನಂದರು ಆಹ್ವಾನವನ್ನು ನಿರೀಕ್ಷಿಸುತ್ತಿದ್ದರೋ ಅವರು ಬಂದು ಆಹ್ವಾನ ನೀಡದೇ ಇದ್ದುದರಿಂದ ಆ ಕೆಲವು ವ್ಯಕ್ತಿಗಳ ಆಹ್ವಾನವನ್ನು ವಿದ್ಯಾನಂದರು ಒಪ್ಪಿಕೊಳ್ಳಲಿಲ್ಲ. ಯಾವೊಂದು ತೊಡಕು ಮತ್ತು ಆಭಾಸಗಳಿಗೆ ಆಸ್ಪದವಾಗದಂತೆ ಹೊಂಬುಜಕ್ಕೆ ಹೋಗಬೇಕೆಂಬುದು ವಿದ್ಯಾನಂದರ ಮನಸ್ಸಿನ ಆಸೆಯಾಗಿತ್ತು. ಈ ಸಮಯದಲ್ಲಿ ವಿದ್ಯಾನಂದರಿಗೂ ಮತ್ತು ಹೊಂಬುಜದ ಪ್ರಮುಖರೊಬ್ಬರಿಗೂ ಸಂಪರ್ಕ ತಪ್ಪಿ ಮೂರು ವರ್ಷಗಳಾಗಿದ್ದುವು.[1] ಹೊಂಬುಜದ ಈ ಪ್ರಮುಖರೊಂದಿಗೆ ಪುನಃ ಸಂಪರ್ಕ ಸಾಧಿಸಿಕೊಳ್ಳಲು ವಿದ್ಯಾನಂದರು ತಮ್ಮ ದಳ್ಳಾಳಿಗಳ ಮೂಲಕ ನಿರಂತರವಾಗಿ ಶತಪ್ರಯತ್ನ ನಡೆಸುತ್ತಿದ್ದರು. ಇದಿನ್ನೂ ನೆರವೇರಿರಲಿಲ್ಲ. ಹೀಗಾಗಿ ಈ ಸಮಯದಲ್ಲಿ ವಿದ್ಯಾನಂದರು ಹೊಂಬುಜಕ್ಕೆ ಭೇಟಿ ನೀಡಲು ಸಾಧ್ಯವಾಗಲಿಲ್ಲ.

ವಿದ್ಯಾನಂದರು ಶಿವಮೊಗ್ಗದಿಂದ ಶ್ರವಣಬೆಳಗೊಳಕ್ಕೆ ಮತ್ತೆ ಹೋಗಿ ಸ್ಥಾಪನೆಯಾದ ಮೇಲೆ ತಾ. 8–6–1981 ರಂದು ಅಲ್ಲಿ ಗೋಮಟೇಶ್ವರನಿಗೆ ಮಹಾಮಸ್ತಕಾಭಿಷೇಕ ನಡೆಯಿತು. ಮಸ್ತಕಾಭಿಷೇಕಕ್ಕೆ ಹೊಂಬುಜದ ವ್ಯಾಪಾರಿಗಳೊಬ್ಬರೂ ಬಂದಿದ್ದರು. ಇವರಿಗೆ ಹೊಂಬುಜದ ಪ್ರಮುಖರೊಬ್ಬರ ಪರಿಚಯ ಚೆನ್ನಾಗಿತ್ತು. ವಿದ್ಯಾನಂದರು ಆ ವ್ಯಾಪಾರಿಗಳನ್ನು ಕರೆಸಿಕೊಂಡು ರಾತ್ರಿ ತಮ್ಮೊಂದಿಗೆ ಮಾತುಕತೆಗೆ ಬರುವಂತೆ ಆಹ್ವಾನ ನೀಡಿದರು. ಆ ವ್ಯಾಪಾರಿಗಳು ತಕ್ಷಣ ''ರಾತ್ರಿ ತಾವು ಮೌನ ಆಚರಿಸುವುದಿಲ್ಲವೇ ಸ್ವಾಮಿ'' ಎಂದು ಪ್ರಶ್ನಿಸಿದರು. ಇದಕ್ಕೆ ವಿದ್ಯಾನಂದರು ''ಅಯ್ಯೋ ನೀವು ಬನ್ನಿಯಪ್ಪ'' ಎಂದು ಮತ್ತೆ ಒತ್ತಾಯಪಡಿಸಿದರು. ಆ ವ್ಯಾಪಾರಿಗಳು ವಿದ್ಯಾನಂದರ ಆಸೆಯನ್ನು ನೆರವೇರಿಸದೆ ಹಾಗೆಯೇ ಹೊಂಬುಜಕ್ಕೆ ಹಿಂತಿರುಗಿದರು.

ತಮಗೆ ಸೂಕ್ತವೆನಿಸಿದ ಆಹ್ವಾನದೊಂದಿಗೆ ಹೊಂಬುಜಕ್ಕೆ ಹೋಗಬೇಕೆಂಬ ತಮ್ಮ ಆಸೆಯನ್ನು ವಿದ್ಯಾನಂದರು ಬಿಡಲಿಲ್ಲ. ಇದಕ್ಕೆ ಮುಖ್ಯವಾದ ಕಾರಣ ಎಲ್ಲಿಯೋ ಆಗಲಿ ತಮಗೆ ವಿರೋಧವಿಲ್ಲ ಎಂದು ತೋರ್ಪಡಿಸಿಕೊಳ್ಳುವುದಾಗಿತ್ತು. ಹೊಂಬುಜ ಕ್ಷೇತ್ರದರ್ಶನದ ವಿಚಾರವಾಗಿ ಅವರಲ್ಲಿ ನಿಷ್ಠೆಯೇನೂ ಇರಲಿಲ್ಲ. ಹೊಂಬುಜದ ಪದ್ಮಾವತಿದೇವಿಯ ಬಗ್ಗೆ ವಿದ್ಯಾನಂದರು ತುಚ್ಛಭಾವನೆಯನ್ನು ತಾಳಿದವರಾಗಿದ್ದರು. ಇದಕ್ಕೊಂದು ನಿದರ್ಶನವನ್ನು ಕೊಡಬಹುದು. 1981ರ ಡಿಸೆಂಬರ್ ತಿಂಗಳ ಕಡೆಯ

---

1. 1978 ರಲ್ಲಿ ಹೊಂಬುಜದ ಈ ಪ್ರಮುಖವ್ಯಕ್ತಿಗಳು ದೆಹಲಿಗೆ ಹೋಗಿದ್ದಾಗ ವಿದ್ಯಾನಂದರು ಇವರನ್ನು ಬಹಳ ಉಪೇಕ್ಷೆಯಿಂದ ಕಂಡಿದ್ದರು. ಹೆಂಗಸರೊಬ್ಬರೊಂದಿಗೆ ವಿದ್ಯಾನಂದರು ಹರಟೆಹೊಡೆಯುತ್ತಿದ್ದಾಗ ಈ ಹೊಂಬುಜದ ಪ್ರಮುಖರು ನಡುವೆ ಹೋದದ್ದೇ ಉಪೇಕ್ಷೆಗೆ ಕಾರಣ. ಈ ಉಪೇಕ್ಷೆಯಿಂದಾಗಿ ಹೊಂಬುಜದ ಪ್ರಮುಖರು ವಿದ್ಯಾನಂದರ ಸಂಪರ್ಕ ಕಡಿದುಕೊಂಡಿದ್ದರು.

ವಾರದಲ್ಲಿ ವಿದ್ಯಾನಂದರು ತಮ್ಮ ಹಾಸನದ ಮೆರವಣಿಗೆಯನ್ನು ಮುಗಿಸಿಕೊಂಡು ಧರ್ಮಸ್ಥಳದ ಕಡೆಗೆ ಹೊರಟಿದ್ದರು. ಹಾಸನ ಬಿಟ್ಟು ಸುಮಾರು ಹದಿನಾರು ಮೈಲಿಗಳು ಕಳೆದಿರುವಾಗ ಬಾಳ್ಳುಪೇಟೆಯ ಹತ್ತಿರ ಒಂದು ಮರದ ಕೆಳಗೆ ವಿಶ್ರಾಂತಿಗಾಗಿ ಕುಳಿತರು. ಇವರೊಂದಿಗೆ ಬಂದಿದ್ದ ಅನೇಕ ಸ್ತ್ರೀ ಪುರುಷರೂ ಅಲ್ಲಿ ಕುಳಿತರು. ಈ ಜನರ ಸಮ್ಮುಖದಲ್ಲಿ ವಿದ್ಯಾನಂದರು ಪದ್ಮಾವತಿಯಕ್ಷಿಯ ಬಗೆಗೆ ಮಾತನಾಡುತ್ತಾ ಸಮೀಪದಲ್ಲಿದ್ದ ಅನುಯಾಯಿಯೊಬ್ಬರನ್ನುದ್ದೇಶಿಸಿ ''ಪದ್ಮಾವತಿ ಎಲ್ಲಿದ್ದಾಳ್ರಿ .... ಅವಳಿರುವುದು ಸುಳ್ಳು ಅವಳು ಮಕ್ಕಳ ವರವನ್ನು ಕೊಡುತ್ತಾಳೆಂಬುದೂ ಸಹ ಸುಳ್ಳು ನಾಯಿಗೆ ಬೇಕಾದಷ್ಟು ಮರಿಗಳು ಹುಟ್ಟುತ್ತವೆ. ಈ ವರವನ್ನೂ ಪದ್ಮಾವತಿ ಕೊಟ್ಟಿದ್ದಾಳೆಯೇ ?'' ಎಂದು ಮುಂತಾಗಿ ಹಿಯಾಳಿಸಿ ಮಾತನಾಡಿದರು. ವಿದ್ಯಾನಂದರ ಈ ಮಾತುಗಳು ಅಲ್ಲಿದ್ದ ಬಹು ಜನರಿಗೆ ಹಿಡಿಸಲಿಲ್ಲ. ಜನರ ಗುಂಪಿನಲ್ಲಿದ್ದ ಒಬ್ಬರು ''ಏನೋ ಸ್ವಾಮಿ ಹಿಂದಿನಿಂದ ನಡೆದುಬಂದಿರುವುದರ ಪ್ರಕಾರ ನಾವೂ ನಡೆದುಕೊಳ್ಳುತ್ತಿದ್ದೇವೆ'' ಎಂದರು. ಹೊಂಬುಜದ ಪದ್ಮಾವತಿ ದೇವಿಗೀತಲೂ ಆ ಊರಿನ ಪ್ರಮುಖರೊಬ್ಬರ ಮೇಲೆ ವಿದ್ಯಾನಂದರಿಗಿದ್ದ ಅತೃಪ್ತಿ ಅವರಿಂದ ಇಂಥ ಮಾತುಗಳನ್ನು ಆಡಿಸಿತ್ತು. ಆ ಗುಂಪಿನಲ್ಲಿದ್ದ ಕೆಲವರು ವಿದ್ಯಾನಂದರ ಈ ಅಂತರಂಗದ ಜಾಡನ್ನು ಪತ್ತೆಮಾಡಿದರು.

ವಿದ್ಯಾನಂದರು ಧರ್ಮಸ್ಥಳ ಸೇರಿದ ಮೇಲೆ ದಕ್ಷಿಣಕನ್ನಡ ಜಿಲ್ಲೆಯ ನಿವೃತ್ತ ವೈದ್ಯರೊಬ್ಬರ ಮೂಲಕ ಹೊಂಬುಜಕ್ಕೆ ಭೇಟಿ ನೀಡಲು ಇದ್ದ ತೊಡಕುಗಳನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸಿದರು ಆದರೆ ಈ ಪ್ರಯತ್ನ ಆಗ ಸಫಲವಾಗಲಿಲ್ಲ. ಮುಂದೆ 1982ರ ಮಾರ್ಚಿ ತಿಂಗಳಲ್ಲಿ ಮೂಡುಬಿದರೆಯಲ್ಲಿದ್ದಾಗಲೂ ಈ ಪ್ರಯತ್ನ ಮುಂದುವರೆದೇ ಇತ್ತು. ಮಾರ್ಚಿ ತಿಂಗಳಲ್ಲಿ ಹೊಂಬುಜದ ಪ್ರಮುಖ ವ್ಯಕ್ತಿಗಳು ಮೂಡುಬಿದರೆಗೆ ಬಂದು ಸಮಾರಂಭವೊಂದರಲ್ಲಿ ಭಾಗವಹಿಸಿ ವಿದ್ಯಾನಂದರನ್ನು ಕಾಣದೆ ಉಪೇಕ್ಷೆ ಮಾಡಿ ಹೋದುದು ವಿದ್ಯಾನಂದರ ಆಸೆಗೆ ತಣ್ಣೀರೆರಚಿದಂತೆ ಆಯಿತು.

ವಿದ್ಯಾನಂದರು ಏಪ್ರಿಲ್ 82ರಲ್ಲಿ ಕಾರ್ಕಳದಲ್ಲಿದ್ದಾಗಲೂ ತಮ್ಮ ಹೊಂಬುಜ ಭೇಟಿಯ ಆಸೆಯನ್ನು ಬಿಟ್ಟುಕೊಡಲಿಲ್ಲ. ಅವರು ಹೊಂಬುಜಕ್ಕೆ ಹೋಗಲು ಯಾರದೇನು ಅಡ್ಡಿಯಿರಲಿಲ್ಲ. ಆದರೆ ಹೊಂಬುಜಕ್ಕೆ ಹೋದಾಗ ಪ್ರಮುಖ ವ್ಯಕ್ತಿಗಳೊಬ್ಬರ ಸಹಕಾರ ವಿದ್ಯಾನಂದರಿಗೆ ಬೇಕಾಗಿತ್ತು. ಇದನ್ನು ಅವರು ಕುದುರಿಸಿಕೊಳ್ಳುವುದು ಬಹಳ ಮುಖ್ಯವಾಗಿತ್ತು. ಇದಕ್ಕಾಗಿ ವಿದ್ಯಾನಂದರು ದೆಹಲಿ–ಬೊಂಬಾಯಿಗಳ ಕೆಲವು ಹಣವಂತರನ್ನು ಬಲವಾಗಿ ಹಿಡಿದರು. ಅವರ ಮೂಲಕ ಸಾಧ್ಯವಾದ ಎಲ್ಲಾ ಬಗೆಯ ಒತ್ತಡಗಳನ್ನೂ ಉಪಯೋಗಿಸಿ ಹೊಂಬುಜ ಕ್ಷೇತ್ರದಲ್ಲಿ ತಮಗೆ ಉಂಟಾಗಬಹುದಾಗಿದ್ದ ತೊಡಕುಗಳು ಮತ್ತು ಆಭಾಸದ ಸನ್ನಿವೇಶಗಳನ್ನು ನಿವಾರಿಸಿ

ಕೊಂಡರು, ಅಂತೂ ಹೊಂಬುಜದ ಪ್ರಮುಖ ವ್ಯಕ್ತಿಗಳಿಂದ ಆಹ್ವಾನವಿಲ್ಲದಿದ್ದರೂ ಬಂದರೆ ವಿರೋಧವೇನಿಲ್ಲವೆಂಬುದನ್ನು ಖಚಿತಪಡಿಸಿಕೊಂಡ ವಿದ್ಯಾನಂದರು ತಾ. 10-5-82ರಂದು ಹೊಂಬುಜಕ್ಕೆ ಭೇಟಿ ನೀಡಲು ನಿರ್ಧರಿಸಿದರು.

## ಗುಳಕೊಪ್ಪದ ಪದ್ಮರಾಜಯ್ಯನವರ ಸ್ಥಿರಮನಸ್ಸು

ವಿದ್ಯಾನಂದರು ತಾ. 10-5-82ರಂದು ಹೊಂಬುಜಕ್ಕೆ ದಯಮಾಡಿಸಿದರು. ಹತ್ತೊಂಬತ್ತು ವರ್ಷಗಳ ಹಿಂದೆ ವ್ಯಭಿಚಾರದ ಆಪಾದನೆಯಿಂದ ಹೊಂಬುಜದಿಂದ ಪಲಾಯನ ಮಾಡಿದ್ದ ಕ್ಷುಲ್ಲಕ ಪಾರ್ಶ್ವಕೀರ್ತಿಗಳು ದಿಗಂಬರ ವೇಷಧರಿಸಿ ತಾವು ಹೋದಲ್ಲೆಲ್ಲಾ ಕಪ್ಪು ಕಲೆಗಳನ್ನು ಉಳಿಸಿ ಈಗ ಮತ್ತೆ ಹೊಂಬುಜದಲ್ಲಿ ನಾಟಕವಾಡಲು ಬಂದಿಳಿದರು. ಯಥಾಪ್ರಕಾರ ಮೆರವಣಿಗೆ ಪ್ರಾರಂಭವಾಯಿತು. ಹಿಂದಿನ ಅವರ ನಡವಳಿಕೆಗಳನ್ನೆಲ್ಲಾ ಚೆನ್ನಾಗಿ ಅರಿತಿದ್ದ ಜನ ಕುತೂಹಲದಿಂದ ಅವರನ್ನು ಕಾಣಲು ಸೇರಿದರು.

ಇಪ್ಪತ್ತು ವರ್ಷಗಳ ಹಿಂದೆ ದೇವೇಂದ್ರಕೀರ್ತಿಗಳ ಹತ್ತಿರ, ಕ್ಷುಲ್ಲಕ ಪಾರ್ಶ್ವ ಕೀರ್ತಿಗಳ ಮೇಲೆ ವ್ಯಭಿಚಾರದ ಆಪಾದನೆಗಳನ್ನು ಮಾಡಿದ್ದ ಗುಳಕೊಪ್ಪದ ಪದ್ಮ ರಾಜಯ್ಯನವರು ಈ ಸಂದರ್ಭದಲ್ಲಿ ಊರಿನಲ್ಲಿಯೇ ಇದ್ದರು. ಇವರ ಸ್ನೇಹಿತರಲ್ಲಿ ಕೆಲವರು "ವಿದ್ಯಾನಂದರು ಹೊಂಬುಜಕ್ಕೆ ಬಂದಾಗ ನೀವು ಊರಲ್ಲಿರಬೇಡಿ. ಅವರಿಂದ ನಿಮಗೇನಾದರೂ ತೊಂದರೆಯಾಗಬಹುದು. ಅವರು ಇಲ್ಲಿರುವಷ್ಟು ದಿನಗಳ ಕಾಲ ನೀವು ಬೇರೆ ಊರಿನ ನಿಮ್ಮ ಬಂಧುಗಳ ಮನೆಗೆ ಹೋಗಿ ಬಿಡಿ" ಎಂದು ಈ ಮೊದಲು ಸಲಹೆ ನೀಡಿದ್ದರು. ಆದರೆ ಪ್ರಾಣಭಯವೆಂಬುದು ಪದ್ಮರಾಜಯ್ಯನವರ ಜನ್ಮಕ್ಕಂಟಿ ಬಂದಿರಲಿಲ್ಲ. ಯಾವುದಕ್ಕೂ ಅಂಜದೆ ಅವರು ಈ ಸಮಯದಲ್ಲೆಲ್ಲಾ ಹೊಂಬುಜ ದಲ್ಲಿಯೇ ಉಳಿದುಕೊಂಡರು. ಮೇ ಹತ್ತನೇ ತಾರೀಖಿನಂದು ವಿದ್ಯಾನಂದರನ್ನು ಸ್ವಾಗತಿಸಲು ನೀವೂ ಬನ್ನಿ ಎಂದು ಕೆಲವರು ಪದ್ಮರಾಜಯ್ಯನವರನ್ನು ಕೇಳಿಕೊಂಡರು. ಪದ್ಮರಾಜಯ್ಯನವರು ಇದಕ್ಕೆ ಒಪ್ಪಿಕೊಳ್ಳಲಿಲ್ಲ.

ಹತ್ತನೇ ತಾರೀಖು ಸೋಮವಾರ ವಿದ್ಯಾನಂದರು ದಿಗ್ವಿಜಯವನ್ನು ಸಾಧಿಸಿದ ವರಂತೆ ಮೆರವಣಿಗೆಯಲ್ಲಿ ನಡೆದು ಬಂದರು. ಮೆರವಣಿಗೆಯ ಸಮಯದಲ್ಲಿ ಊರಿನ ಅಂಗಡಿಯೊಂದರಲ್ಲಿ ಕುಳಿತಿದ್ದ ಪದ್ಮರಾಜಯ್ಯನವರನ್ನು ವಿದ್ಯಾನಂದರ ಪಕ್ಕದಲ್ಲಿ ನಡೆದು ಹೋಗುತ್ತಿದ್ದವರೊಬ್ಬರು ಕಂಡು ಮೆರವಣಿಗೆಯಲ್ಲಿ ಭಾಗವಹಿಸುವಂತೆ ಕೈ ಬೀಸಿ "ರೀ ಬನ್ರಿ" ಎಂದು ಕರೆದರು. ಪದ್ಮರಾಜಯ್ಯನವರು ಮುಂದೆ ಹೋಗುವಂತೆ ಕೈಬೀಸಿ "ಹೇ ಹೋಗಯ್ಯ" ಎಂದು ತಮ್ಮ ಪಾಡಿಗೆ ತಾವು ಕುಳಿತ ಜಾಗದಿಂದ ಕದಲದೆ ಹೇಳಿದರು.

ಮೆರವಣಿಗೆ ಮುಗಿದ ಮೇಲೆ ಅನಂತರ ನಡೆದ ಬಹಿರಂಗಸಭೆಯಲ್ಲಿ ವಿದ್ಯಾನಂದರು ಹೊಂಬುಜದ ಸ್ವಾಮಿಗಳಲ್ಲಿ ತಾವು ಹಿಂದೆ ಮಾಡಿರುವ ತಪ್ಪುಗಳಿಗಾಗಿ ನಾಟಕೀಯವಾಗಿ ಕ್ಷಮೆ ಕೇಳಿದರು. ಆ ಮಾತುಗಳು ಹೀಗಿವೆ : "ನನ್ನಿಂದ ಈ ಕ್ಷೇತ್ರದ ಸ್ವಾಮಿಗಳಿಗೆ ತುಂಬಾ ಬೇಸರವಾಗಿದೆ. ಅದಕ್ಕೆ ನಾನು ಸ್ವಾಮಿಗಳ ಕ್ಷಮೆ ಕೇಳುತ್ತೇನೆ"

ವಿದ್ಯಾನಂದರು ಹೊಂಬುಜದಲ್ಲಿದ್ದಷ್ಟು ದಿನಗಳೂ ಸಹ ಪದ್ಮರಾಜಯ್ಯನವರು ತಮ್ಮ ನಿತ್ಯಾಭ್ಯಾಸದಂತೆ ಊರ ಹೊರವಲಯದ ತಮ್ಮ ಮನೆಯಿಂದ ನಡೆದು ಬಂದು ಊರಲ್ಲಿಯ ತಮ್ಮ ಆಪ್ತರೊಂದಿಗೆ ಕಾಲ ಕಳೆದು ಹೋಗುತ್ತಿದ್ದರು. ಈ ಸಮಯದಲ್ಲಿ ವಿದ್ಯಾನಂದರ ಕಡೆಯ ಕೆಲವು ಪುಂಡರು ಪದ್ಮರಾಜಯ್ಯನವರಿದ್ದ ಕಡೆ ಬಹಳ ಹೊತ್ತಿನವರೆಗೂ ನಿಂತಿದ್ದು ಇವರನ್ನು ಆಗಾಗ್ಗೆ ದುರುಗುಟ್ಟುತ್ತಾ ನೋಡ ವುದೂ ನಡೆಯಿತು. ಇದಕ್ಕಿಂತಲೂ ಹೆಚ್ಚು ಮುಂದುವರೆಯುವ ಧೈರ್ಯವನ್ನು ಆ ಪುಂಡರು ತೋರಲಿಲ್ಲ. ಪದ್ಮರಾಜಯ್ಯನವರು ವಿದ್ಯಾನಂದರ ಭಾಷಣಕ್ಕಾಗಲೀ ಅಥವಾ ಅವರನ್ನು ನೋಡುವುದಕ್ಕಾಗಲೀ ಹೋಗಲಿಲ್ಲ 19 ವರ್ಷಗಳ ಹಿಂದೆ ಪದ್ಮರಾಜಯ್ಯನವರ ಕೈ ಹಿಡಿದು ಗೂಂಡಾಗಿರಿ ನಡೆಸಿದ್ದ ವಿದ್ಯಾನಂದರೂ ಸಹ ಪದ್ಮರಾಜಯ್ಯನವರಿಗೆ ಕರೆ ಕಳುಹಿಸುವ ಧೈರ್ಯವನ್ನು ತೋರಲಿಲ್ಲ. ಒಂದು ಪಕ್ಷ ವಿದ್ಯಾನಂದರೇನಾದರೂ ಪದ್ಮರಾಜಯ್ಯನವರನ್ನು ಕೆಣಕುವ ಎದೆಗಾರಿಕೆಯನ್ನು ತೋರಿದ್ದರೆ ಪದ್ಮರಾಜಯ್ಯನವರು ವಿದ್ಯಾನಂದರನ್ನೇ ತಮ್ಮ ಧರ್ಮಸಮ್ಮತ ಪ್ರತಿಕ್ರಿಯೆಯ ವಜ್ರಪಂಜರದಲ್ಲಿ ಸಿಲುಕಿಸುವಂತಹ ವ್ಯೂಹರಚನೆ ಮಾಡಿಕೊಂಡು ಸಿದ್ಧರಾಗಿಯೇ ಇದ್ದರು. ಆ ಹೊತ್ತಿಗಾಗಲೇ ಮೈಸೂರಿನ ಸಿ. ಬಿ. ಎಂ. ಚಂದ್ರಯ್ಯನವರನ್ನು ಕೆಣಕಿ ಅವಮಾನ ಪಟ್ಟು ಹಣ್ಣುಗಾಯಿ ನೀರುಗಾಯಿಯಾಗಿದ್ದ ವಿದ್ಯಾನಂದರು ಪದ್ಮರಾಜಯ್ಯನವರನ್ನು ಮತ್ತೊಮ್ಮೆ ಕೆಣಕಿ ಮತ್ತೊಂದು ಪ್ರಕರಣವನ್ನು ಸೃಷ್ಟಿಸಿಕೊಳ್ಳಲು ಏಕೋ ಇಷ್ಟಪಡಲಿಲ್ಲ.

ವಿದ್ಯಾನಂದರು ಹೊಂಬುಜದಲ್ಲಿ ವಾಸ್ತವ್ಯ ಹೂಡಿದ್ದ ಈ ಕಾಲದಲ್ಲಿ ತಮ್ಮ ವಾಸಕ್ಕೆ ಯಥಾಪ್ರಕಾರ ಸಕಲ ಸೌಕರ್ಯಗಳಿಂದ ಸಜ್ಜಿತವಾದ ಆರ್. ಸಿ. ಸಿ ಮನೆಯನ್ನೇ ಆಯ್ಕೆಮಾಡಿಕೊಂಡಿದ್ದರು. ಈ ಮನೆಗೆ ಬೆಲೆಬಾಳುವ ಬಣ್ಣಗಳನ್ನು ಬಳಿದು ಅಲಂಕಾರ ಮಾಡಲಾಗಿತ್ತು. ಸಮಯಕ್ಕೆ ಸಂದರ್ಭಕ್ಕೆ ತಕ್ಕಂತೆ ಬಹಳ ಸುಲಭವಾಗಿ ಊಸರವಳ್ಳಿಯಂತೆ ಬಣ್ಣ ಬದಲಾಯಿಸುವ ವಿದ್ಯಾನಂದರ ಮನದ ಅನೇಕ ಬಣ್ಣಗಳ ಪ್ರತಿರೂಪದಂತೆ ಆ ಮನೆಯನ್ನು ಅಲಂಕರಿಸಿದ್ದ ಬಣ್ಣಗಳು ರಂಜಿಸಿದುವು. ಈ ಗೃಹ ವಾಸದಲ್ಲಿದ್ದ ಐದು ದಿನಗಳ ಸಮಯದಲ್ಲಿ ವಿದ್ಯಾನಂದರು ತಮ್ಮ ಮಾಜಿ ಪ್ರೇಯಸಿಯರನ್ನು ಕಂಡರೋ ಇಲ್ಲವೋ ತಿಳಿಯದು. ಅಥವಾ ಪ್ರಧಾನ ಪ್ರೇಯಸಿಯಾಗಿದ್ದ ಮುದ್ದಮ್ಮನನ್ನಾದರೂ ಸಂಧಿಸಿ ಕಷ್ಟಸುಖ ವಿಚಾರಿಸಿದರೇ ? ಎಂಬುದೂ ತಿಳಿಯದು. ತಮ್ಮ ಅನೌರಸ ಸಂತಾನವಾದ ಮುದ್ದನನ್ನಾದರೂ ವಿಚಾರಿಸಿ

ದರೇ ಎಂಬುದೂ ತಿಳಿಯದು. ಅಂತೂ ವಿದ್ಯಾನಂದರು ಹೊಂಬುಜಕ್ಕೆ ನಾಳೆ ಬರಲಿದ್ದಾರೆ ಎನ್ನುವಾಗ ಮುದ್ದನ ಪರಿಚಯವುಳ್ಳ ಕೆಲವು ಸ್ನೇಹಿತರು "ಲೋ ಮುದ್ದ ನಾಳೆ ನಿಮ್ಮಪ್ಪ ಬರ್‍ತಾನೆ ಕಣೋ" ಎಂದು ಸು. 20 ವರ್ಷದ ಮುದ್ದನನ್ನು ಲೇವಡಿ ಮಾಡುತ್ತಿದ್ದುದು ಅನೇಕರ ಗಮನಕ್ಕೆ ಬಂದಿತು. ವಿದ್ಯಾನಂದರು ತಮ್ಮ ಒಬ್ಬ ದಕ್ಷಿಣ ಕನ್ನಡ ಜಿಲ್ಲೆಯ ದಳ್ಳಾಳಿಯ ಮೂಲಕ ಮುದ್ದಮ್ಮನಿಗೆ ಸಾಕಷ್ಟು ಹಣ ಕಳುಹಿಸಿ ಕೊಟ್ಟಿದ್ದಾರೆಂಬ ಗುಸುಗುಸು ಸುದ್ದಿಯೂ ಈ ಸಂದರ್ಭದಲ್ಲಿ ಹೊಂಬುಜದಲ್ಲಿ ಹರಡಿತ್ತು.

ತಾವು ಹೊಂಬುಜದಲ್ಲಿರುವ ಸಮಯದಲ್ಲಿ ತಮ್ಮನ್ನು ಬಂದು ಕಾಣಬೇಕೆಂದು ಮೈಸೂರಿನ ಚಂದ್ರಯ್ಯ ಮತ್ತು ಶಾಂತರಾಜ್‌ರವರಿಗೆ ವಿದ್ಯಾನಂದರು ತಮ್ಮ ಮಧ್ಯವರ್ತಿಗಳ ಮೂಲಕ ಹೇಳಿ ಕಳುಹಿಸಿದ್ದರು ವಿದ್ಯಾನಂದರ ದುಷ್ಟತನದ ಕುಟಿಲಜಾಲಗಳನ್ನು ಚೆನ್ನಾಗಿ ಬಲ್ಲ ಇವರಿಬ್ಬರೂ ಈ ಸಂಶಯಾಸ್ಪದ ಆಹ್ವಾನವನ್ನು ಕಡೆಗಣಿಸಿದರು.

ಅಧ್ಯಾಯ : ಇಪ್ಪತ್ತೇಳು

## ಲೈಂಗಿಕ ಸಾಹಸಗಳು

"ಸಾವಿರಾರು ರೋಗಗಳಲ್ಲಿ ಕಾಮಾಸಕ್ತಿಯೇ ಅತ್ಯಂತ ದುಃಖಕರವಾದದ್ದು, ಏಕೆಂದರೆ ಅದು ಬುದ್ಧಿಭ್ರಮಣೆಯನ್ನುಂಟು ಮಾಡುತ್ತದೆ" ಎಂದು ಮಹಾವೀರ ತೀರ್ಥಂಕರ ಹೇಳಿದ್ದಾನೆ. "ಶಾಸ್ತ್ರಪಾರಂಗತರಾಗಿದ್ದೂ ಶೀಲರಹಿತರಾದವರು ಮುಕ್ತಿಯನ್ನು ಪಡೆಯಲಾರರು" ಎಂದು ಆಚಾರ್ಯ ಕುಂದಕುಂದರು ಹೇಳಿದ್ದಾರೆ. ಮತ್ತೊಂದು ಕಡೆ ಇವರು "ಪಾಪ ಬುದ್ಧಿಯುಳ್ಳವರು ದಿಗಂಬರ ವೇಷವನ್ನು ಧರಿಸಿದಾಗ ದಿಗಂಬರತ್ವದ ಯಥಾರ್ಥಭಾವವನ್ನು ಹಾಸ್ಯಮಾಡಿದಂತಾಗುವುದಲ್ಲದೆ ನಿಜವಾದ ಮುನಿಗಳ ಗೌರವವನ್ನೂ ತಗ್ಗಿಸಿದಂತಾಗುವುದು ಎಂದು ಹೇಳಿದ್ದಾರೆ. ಈ ಇಬ್ಬರು ಮಹಾಪುರುಷರ ತತ್ವಗಳನ್ನಲ್ಲದೆ ಇತರರ ತತ್ತ್ವೋಪದೇಶಗಳನ್ನೂ ಜನರಿಗೆ ವಿವರಿಸಿ ಹೇಳುವ ವಿದ್ಯಾನಂದರು ತಾವು ಸ್ವತಃ ಲೈಂಗಿಕ ವಿಚಾರಗಳಲ್ಲಿ ಎಷ್ಟು ಅಪ್ರಾಮಾಣಿಕರು ಎಂಬುದನ್ನು ತಿಳಿದುಕೊಳ್ಳಬೇಕು. ವಿದ್ಯಾನಂದರು ತಮ್ಮ ಕ್ಷುಲ್ಲಕಾವಸ್ಥೆ ಮತ್ತು ಅದಕ್ಕಿಂತ ಮೊದಲು ನಡೆಸಿದ ಲೈಂಗಿಕ ಸಾಹಸಗಳ ಪರಿಚಯ ಈಗಾಗಲೇ ಆಗಿದೆ.

ವಿದ್ಯಾನಂದರು ದೇಶಭೂಷಣರಿಂದ ದೀಕ್ಷೆ ಪಡೆದ ಕೂಡಲೇ ಅವರ ಅನುಮತಿ ಯಿಲ್ಲದೆ ಅವರ ಸಂಘವನ್ನು ಬಿಟ್ಟಿದ್ದು, ಅನಂತರ ಶ್ರೀಮಂತ ವ್ಯಕ್ತಿಗಳ ಪರಿಚಯ ಮಾಡಿಕೊಂಡು ಅವರ ಮನೆಗಳಲ್ಲಿ ವಾಸ್ತವ್ಯ ಮಾಡುತ್ತಿದ್ದುದೂ, ಇತರ ಕಡೆಗಳಲ್ಲೆಲ್ಲಾ ಸ್ನಾನ-ಶೌಚ-ದ್ವಾರಪಾಲಕ ವ್ಯವಸ್ಥೆಯುಳ್ಳ ಮನೆಗಳಲ್ಲಿಯೇ ಬಿಡಾರ ಹೂಡುತ್ತಿದ್ದುದೂ, ಮತ್ತು ಈಗಲೂ ಸಹ ಈ ಗೃಹವಾಸದ ಬಯಕೆಯನ್ನು ಬಿಡದಂತೆ ಈಡೇರಿಸಿ ಕೊಳ್ಳುತ್ತಾ ಇರುವುದು, ಮತ್ತು ಕೆಲವು ಹೆಂಗಸರು ನಾನಾ ನೆಪಗಳನ್ನು ಹೇಳಿಕೊಂಡು ಇವರ ಹಿಂದೆ ಮುಂದೆಯೇ ಸದಾಕಾಲ ಸುತ್ತಾಡುತ್ತಿರುವುದು—ಇಂತಹ ಅನೇಕ ಸಂಗತಿ ಗಳನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸಿದಾಗ ವಿದ್ಯಾನಂದರ ಲೈಂಗಿಕ ರಹಸ್ಯಗಳ ಸುಳಿವು ಗೋಚರವಾಗುತ್ತದೆ. ವಿದ್ಯಾನಂದರ ಪ್ರಮುಖ ದಳ್ಳಾಳಿಗಳಾದ ಅಂಗವಿಕಲ ಮನುಷ್ಯ ಮತ್ತು ನರಿಗೌಡ ಇವರಿಬ್ಬರಿಗೆ ವಿದ್ಯಾನಂದರ ಲೈಂಗಿಕ ಸಾಹಸಗಳ ಪ್ರತಿಯೊಂದು ವಿವರಗಳೂ ಗೊತ್ತಿವೆ. ಇನ್ನಿತರ ದಳ್ಳಾಳಿಗಳೂ ಇದನ್ನು ಚೆನ್ನಾಗಿ ತಿಳಿದುಕೊಂಡಿದ್ದಾರೆ. ವಿದ್ಯಾನಂದರಿಗೆ ಹೆಣ್ಣುಗಳನ್ನು ಸರಬರಾಜು ಮಾಡುವ ಮತ್ತು ಸಂಬಂಧ ವನ್ನು ಕುದುರಿಸಿಕೊಡುವ—ಈ ಕಾರ್ಯಗಳಿಗೇ ಮೀಸಲಾದ ಒಂದಿಬ್ಬರು ಲಫಂಗರೂ ಸಹ ವಿದ್ಯಾನಂದರೊಂದಿಗೆ ಸಂಪರ್ಕವಿರಿಸಿಕೊಂಡಿದ್ದಾರೆ. ಧರ್ಮದ ಹೆಸರಿನಲ್ಲಿ ಈ ಎಲ್ಲಾ ಅನೈತಿಕ ವ್ಯವಹಾರಗಳು ಬಹಳ ಗೋಪ್ಯವಾಗಿ ನಡೆಯುತ್ತವೆ.

ವಿದ್ಯಾನಂದರು ದೆಹಲಿಯನ್ನು ಬಿಟ್ಟು ಶ್ರವಣಬೆಳಗೊಳವನ್ನು ತಲುಪುವ ಸಮಯದಲ್ಲಿ ಇವರ ದಳ್ಳಾಳಿಗಳಲ್ಲಿ ಪ್ರಮುಖನಾದ ನರಿಗೌಡ ವಿದ್ಯಾನಂದರ ಅಂಕೆ ಯಲ್ಲಿದ್ದ ದೊಡ್ಡಮೊತ್ತದ ಹಣವನ್ನು ಸಮಯಸಾಧಿಸಿ ಇಲ್ಲದಂತೆ ಮಾಡಿದ. ಈ ವಿಶ್ವಾಸದ್ರೋಹದಿಂದ ಕೆರಳಿದ ವಿದ್ಯಾನಂದರು ಬಹಳ ವರ್ಷಗಳಿಂದ ಕೆಲಸ ಮಾಡು ತ್ತಿದ್ದ ಈ ದಳ್ಳಾಳಿಯನ್ನು ದೂರವಿಟ್ಟರು. ನರಿಗೌಡ ಸುಮ್ಮನಿರಲಿಲ್ಲ. ತಾನು ಹೋದ ಹೋದ ಕಡೆಯೆಲ್ಲಾ ವಿದ್ಯಾನಂದರ ಕಪಟಾಚಾರಗಳನ್ನು ಬಯಲಿಗೆಳೆದ. ಅವರ ಕೆಲವು ಲೈಂಗಿಕ ರಹಸ್ಯಗಳನ್ನು ಬಹಿರಂಗಪಡಿಸಿದ. ಇದರಿಂದ ಜಿಗುಪ್ಸೆ ಪಟ್ಟು ತಾನು ಅವರನ್ನು ಬಿಟ್ಟು ಬಂದಿರುವುದಾಗಿ ತನ್ನನ್ನು ಸಮರ್ಥಿಸಿಕೊಳ್ಳಲಾರಂಭಿಸಿದ. ನರಿಗೌಡನ ಉಪಟಳ ಹೆಚ್ಚಾದಾಗ ವಿದ್ಯಾನಂದರಿಗೆ ತಾವು ಮಾಡಿದ ಅವಿವೇಕ ಅರ್ಥ ವಾಯಿತು ತಕ್ಷಣ ಅಪ್ಪರೊಬ್ಬರನ್ನು ಬೆಳಗಾವಿ ಜಿಲ್ಲೆಗೆ ಕಳುಹಿಸಿ ನರಿಗೌಡನನ್ನು ಕರೆಸಿಕೊಂಡು ರಾಜೀ ಮಾಡಿಕೊಂಡರು.

ನರಿಗೌಡನೊಬ್ಬನೇ ವಿದ್ಯಾನಂದರ ಲೈಂಗಿಕ ಸಾಹಸಗಳ ರಹಸ್ಯವನ್ನು ಮೊಟ್ಟ ಮೊದಲು ಬಯಲುಮಾಡಿದವನೇನಲ್ಲ. ವಿದ್ಯಾನಂದರು ಯಾವಾಗ ಇಂಥ ಸಾಹಸ ಗಳನ್ನು ಮಾಡುತ್ತಿದ್ದರೋ ಆಗಲೇ ಈ ರಹಸ್ಯಗಳೂ ಬಯಲಾಗುತ್ತಾ ಬಂದುವು. ಹೊಸ ಹೊಸ ಸಾಹಸಗಳುಂಟಾದಂತೆ ಅವುಗಳ ಜಾಡನ್ನು ಹಿಡಿದು ಪತ್ತೆ ಮಾಡಿದ

ಆಸಕ್ತ ಜನರು ಇದನ್ನು ಬಯಲು ಮಾಡುತ್ತಿದ್ದರು. ಆದರೆ ಯಾರೇ ಆಗಲಿ ಇದನ್ನು ಸಂಘಟನೆಯೊಂದಿಗೆ ಎದುರಿಸಲು ಪ್ರಯತ್ನಿಸಲಿಲ್ಲ. ಈ ವಿಚಾರದಲ್ಲಿ ವಿದ್ಯಾನಂದರಿಂದ ಮೋಸಹೋದವರಂತೂ ಅವರನ್ನು ದೂರಮಾಡಿ ತಮ್ಮ ಮರ್ಯಾದೆಯನ್ನುಳಿಸಿ ಕೊಳ್ಳುವ ದೃಷ್ಟಿಯಿಂದ ಪ್ರಕರಣವನ್ನು ಮುಚ್ಚಿಹಾಕುತ್ತಿದ್ದರು. ವಿದ್ಯಾನಂದರ ಲೈಂಗಿಕ ಸಾಹಸಗಳಿಗೆ ಇತಿಮಿತಿಯೆಂಬುದೇ ಇಲ್ಲ. ಒಂದೊಂದು ಪ್ರಕರಣದ ವಿವ ರಣೆಯೂ ಇಲ್ಲಿ ಅನಗತ್ಯ. ಅನ್ನ ಬೆಂದಿದೆಯೋ ಎಂದು ತಿಳಿಯಲು ಒಂದೆರಡು ಅಗಳುಗಳನ್ನು ನೋಡಿದರೆ ಸಾಕು. ಹಾಗೆಯೇ ಇಲ್ಲಿ ಕೆಲವು ಪ್ರಕರಣಗಳನ್ನು ಗಮನಿಸ ಬಹುದು. ಈ ಪ್ರಕರಣಗಳನ್ನು ವಿವರಿಸುವಾಗ ವಿದ್ಯಾನಂದರನ್ನುಳಿದಂತೆ ಇತರರ ಹೆಸರುಗಳನ್ನು ಬದಲಾಯಿಸಿಕೊಟ್ಟಿದೆ.

## ಫಿರೋಜಾಬಾದಿನ ಬಾಲಾಜಿ ಮನೆಯ ಪ್ರಕರಣ

1965ರಲ್ಲಿ ವಿದ್ಯಾನಂದರು ಫಿರೋಜಾಬಾದ್‌ನಲ್ಲಿ ಚಾತುರ್ಮಾಸದ ನಾಟಕ ವಾಡುತ್ತಿದ್ದಾಗ ಬಾಲಾಜಿ ಎಂಬ ಹಣವಂತರೊಬ್ಬರ ಮನೆಯಲ್ಲಿ ಕೆಲವು ಕಾಲ ತಂಗಿ ದ್ದರು. ಬಾಲಾಜಿಗೆ ಮುನಿಗಳೆಂದರೆ ತುಂಬಾ ಭಕ್ತಿ. ವಿದ್ಯಾನಂದರ ಕಪಟತನ ಅವರಿಗೆ ಮೊದಲು ತಿಳಿಯಲಿಲ್ಲ. ಆ ಹಣವಂತರಿಗೆ ಚಿಕ್ಕವಯಸ್ಸಿನ ವಿಧವೆಯಾದ ತಂಗಿ ಯೊಬ್ಬಳಿದ್ದಳು. ಈಕೆ ವಿದ್ಯಾನಂದರೊಂದಿಗೆ ಏಕಾಂತದಲ್ಲಿ ಉಪದೇಶ ಕೇಳುವುದು ಹೆಚ್ಚಾಯಿತು. ವಿದ್ಯಾನಂದರಿಗೆ ಏನೇನು ಸೌಕರ್ಯಗಳು ಬೇಕೋ ಅದನ್ನೆಲ್ಲಾ ಈಕೆ ಒದಗಿಸುತ್ತಿದ್ದಳು. ಅವರಿಗೆ ಫ್ಯಾನಿನ ಅಗತ್ಯವಿದೆಯೆಂದು ತಿಳಿದ ಕೂಡಲೇ ಈಕೆ ಕಾರಿನಲ್ಲಿ ಧಾವಿಸಿ ಹೋಗಿ ಫ್ಯಾನನ್ನು ತಂದು ಅವರಿಗೆ ಒದಗಿಸುತ್ತಿದ್ದಳು. ರಾತ್ರಿ 10–11 ಗಂಟೆಯಾದರೂ ಈಕೆ ವಿದ್ಯಾನಂದರಿದ್ದ ಸ್ಥಳವನ್ನು ಬಿಟ್ಟು ಕದಲುತ್ತಿರಲಿಲ್ಲ. ಕ್ರಮೇಣ ಈಕೆ ರಾತ್ರಿ ಸಮಯದಲ್ಲಿ ವಿದ್ಯಾನಂದರನ್ನು ಕಾಣಲು ಬರುವುದೇ ಹೆಚ್ಚಾ ಯಿತು. ಮುನಿಗಳಾದವರು ರಾತ್ರಿ ಮಾತನಾಡಲೂ ಬಾರದು, ಫ್ಯಾನನ್ನೂ ಉಪ ಯೋಗಿಸಬಾರದು, ಅವರಿದ್ದ ಕಡೆ ದೀಪವನ್ನೂ ಸಹ ಹಚ್ಚಬಾರದು ಎಂಬುದನ್ನು ಆಗ ಪ್ರಶ್ನಿಸುವವರೇ ಅಲ್ಲಿ ಕಾಣಲಿಲ್ಲ.

ಬಾಲಾಜಿಯ ವಿಧವೆ ತಂಗಿಯೊಂದಿಗೆ ವಿದ್ಯಾನಂದರ ಒಡನಾಟ ಹೆಚ್ಚಾದಂತೆ ಜನಗಳ ಗುಸು ಗುಸು ಪ್ರಾರಂಭವಾಯಿತು. ವಿದ್ಯಾನಂದರಿಗೂ ಬಾಲಾಜಿಯ ತಂಗಿಗೂ ಅನೈತಿಕ ಸಂಪರ್ಕವೇರ್ಪಟ್ಟಿದೆ ಎಂಬುದನ್ನು ಸಭ್ಯಜನರು ಹೇಳುವುದಕ್ಕೆ ಹಿಂಜರಿದರೂ ಬಾಲಾಜಿ ಮನೆಯ ಆಳು ಕಾಳುಗಳಿಗೆ ಈ ಅನೈತಿಕ ಸಂಬಂಧದ ವಿಚಾರ ವನ್ನು ಪ್ರಚಾರ ಮಾಡಲು ಸಂಕೋಚವೇನೂ ಆಗಲಿಲ್ಲ. ಅವರು ತಮ್ಮ ಕಡೆಯವ ರೊಬ್ಬರಿಗೆ ಮತ್ತು ತಮ್ಮಲ್ಲಿ ಚೆನ್ನಾಗಿ ಪರಿಚಯವಿರುವವರೊಂದಿಗೆ "ಆ ಕಳ್ಳಸನ್ಯಾಸಿ ಯೊಂದಿಗೆ ಬಾಲಾಜಿಯವರ ತಂಗಿ ಸಂಬಂಧವಿಟ್ಟುಕೊಂಡಿದ್ದಾರೆ" ಎಂದು ಹೇಳ ಲಾರಂಭಿಸಿದರು.

ಬಾಲಾಜಿಯವರಿಗೆ ತಮ್ಮ ತಂಗಿಯ ಅನೈತಿಕ ವ್ಯವಹಾರ ಕ್ರಮೇಣ ಗಮನಕ್ಕೆ ಬಂತು. ಬಾಲಾಜಿ ಬಹಳ ಮೃದು ಸ್ವಭಾವದವರು. ಚಿಕ್ಕಂದಿನಲ್ಲಿಯೇ ಗಂಡನನ್ನು ಕಳೆದುಕೊಂಡ ತಂಗಿಯ ವಿರುದ್ಧ ರಂಪಮಾಡಿ ಇದನ್ನೊಂದು ಬಹಿರಂಗ ಪ್ರಕರಣ ಮಾಡಲು ಇಷ್ಟಪಡಲಿಲ್ಲ. ಹೇಗಿದ್ದರೂ ವಿದ್ಯಾನಂದ ಫಿರೋಜಾಬಾದನ್ನು ಬಿಡಲೇ ಬೇಕಲ್ಲ. ಆಗ ಈ ಅನೈತಿಕ ವ್ಯವಹಾರ ಮುಕ್ತಾಯಗೊಳ್ಳುತ್ತದೆ. ಎಂದುಕೊಂಡ ಬಾಲಾಜಿಯವರು ತಮ್ಮ ತಂಗಿಯ ಅನಾಚಾರಗಳನ್ನು ಕಂಡೂ ಕಾಣದವರಂತೆ ಇದ್ದು ಬಿಟ್ಟರು. ಬಾಲಾಜಿಯವರ ಮನೋಧರ್ಮ ವಿದ್ಯಾನಂದರಿಗೆ ವರವಾಗಿ ಪರಿಣಮಿಸಿತು. ವಿದ್ಯಾನಂದರು ಫಿರೋಜಾಬಾದನ್ನು ಬಿಟ್ಟಮೇಲೆ 1966ರಲ್ಲಿ ದೆಹಲಿ, 1967ರಲ್ಲಿ ಮೀರತ್, 1968ರಲ್ಲಿ ಬಡೌತ್, 1969ರಲ್ಲಿ ಸಹರಾನಪುರ—ಹೀಗೆ ಫಿರೋಜಾಬಾದಿನ ಸಮೀಪದ ಸುತ್ತಮುತ್ತಲ ಊರುಗಳಲ್ಲಿಯೇ ಬಿಡಾರ ಹೂಡುತ್ತಿದ್ದರು. ಹೇಗೂ ದ್ವಾರಪಾಲಕನಿರುವ ಬಂಗಲೆಯಲ್ಲಿಯೇ ಇವರ ವಾಸದ ವ್ಯವಸ್ಥೆಯಾಗುತ್ತಿತ್ತು. ಬಾಲಾಜಿಯ ತಂಗಿ ಈ ಸ್ಥಳಗಳಿಗೆಲ್ಲಾ ಬಂದು ಹೋಗುವುದಕ್ಕೆ ಯಾರ ಅಡ್ಡಿಯೂ ಇರಲಿಲ್ಲ. ತಮ್ಮ ತಂಗಿಯ ಈ ಅಸಂಯಮಿತ ಜೀವನ ನಿಲ್ಲಲಿಲ್ಲವಲ್ಲಾ ಎಂಬ ಕೊರಗಿನಲ್ಲಿಯೇ ಬಾಲಾಜಿ ಕೊರಗಿ ಹಣ್ಣಾಗಿ ಕೊನೆಯುಸಿರೆಳೆದರು.

## ಸಿಹಿತಿಂಡಿವಾಲಾ ಮನೆಯ ಪ್ರಕರಣ

1966ರಲ್ಲಿ ವಿದ್ಯಾನಂದರು ದೆಹಲಿಯಲ್ಲಿ ತಮ್ಮ ಚಾತುರ್ಮಾಸದ ನಾಟಕ ಆಡುತ್ತಿದ್ದಾಗ ಈ ಪ್ರಕರಣ ನಡೆಯಿತು. ದೆಹಲಿಯ ಸಿಹಿತಿಂಡಿವಾಲಾ ಸಿಹಿತಿಂಡಿಗಳನ್ನು ಬೃಹತ್ಪ್ರಮಾಣದಲ್ಲಿ ತಯಾರಿಸುವ ಸಂಸ್ಥೆಯೊಂದರ ಒಡೆಯ ಇವನ ಸಂಸ್ಥೆಯ ಸಿಹಿತಿಂಡಿಗಳು ವಿದೇಶಗಳಿಗೂ ರಫ್ತಾಗುತ್ತಿದ್ದವು ಇದರಲ್ಲಿ ಜಿಲೇಬಿಯ ರಫ್ತು ಪ್ರಧಾನವಾಗಿತ್ತು. ವಿದ್ಯಾನಂದರು ಈ ದೊಡ್ಡ ವ್ಯಾಪಾರಿಯನ್ನು ಚನ್ನಾಗಿ ಹೊಗಳಿ ಪರಿಚಯಮಾಡಿಕೊಂಡು ಸಖ್ಯ ಬೆಳೆಸಿದರು. ಸಿಹಿತಿಂಡಿವಾಲಾನ ಮನೆಯಲ್ಲಿ ಆಗಾಗ್ಗೆ ಬಿಡಾರ ಹೂಡುವ ಸಲಿಗೆಯನ್ನೂ ಬೆಳೆಸಿಕೊಂಡರು. ಆತನ ಮನೆಯಲ್ಲಿ ವಯಸ್ಸಿಗೆ ಬಂದ ಅನೇಕ ಹೆಣ್ಣುಮಕ್ಕಳಿದ್ದರು. ಇವರಲ್ಲಿ ಕೆಲವರು ವಿದ್ಯಾನಂದರ ಕಾಮಪಿಪಾಸೆಗೆ ಬಲಿಯಾದರು.

ವಿದ್ಯಾನಂದರ ಈ ರಹಸ್ಯ ವ್ಯವಹಾರಗಳು ಹೇಗೋ ಬಯಲಾಗಿ ಸಿಹಿತಿಂಡಿವಾಲನಿಗೂ ಸುದ್ದಿ ಮುಟ್ಟಿತು. ಸಿಹಿತಿಂಡಿ ವಾಲಾ ಮುಗ್ಧನೂ ಸಿಟ್ಟಿನ ಮನುಷ್ಯನೂ ಆಗಿದ್ದನು. ವಿದ್ಯಾನಂದರು ಒಂದುದಿನ ಸಿಹಿತಿಂಡಿ ವಾಲನ ಮನೆಯಲ್ಲಿ ಸೇರಿಕೊಂಡಿದ್ದಾಗ ಸಿಹಿತಿಂಡಿವಾಲನಿಗೆ ಇದರ ಸುಳಿವು ತಿಳಿದುತಕ್ಷಣ ಮನೆಗೆ ಧಾವಿಸಿ ವಿದ್ಯಾನಂದರ ಅವ್ಯವಹಾರವನ್ನು ನೇರವಾಗಿ ಪತ್ತೆ ಮಾಡಲು ಪ್ರಯತ್ನಿಸಿದನು. ಈ ಬಗ್ಗೆ ಮೊದಲೇ ಮುನ್ನೆಚ್ಚರಿಕೆ ವಹಿಸಿದ್ದ ವಿದ್ಯಾನಂದರು ಆ ಮನೆಯ ಹಿಂಬಾಗಿಲಿನ ಮೂಲಕ ತಪ್ಪಿಸಿ

ಕೊಂಡು ಪರಾರಿಯಾದರು. ಈ ಘಟನೆಯಾದ ಮೇಲೆ ಸಿಹಿತಿಂಡಿವಾಲಾ ನೊಂದಿಗೆ ಇದ್ದ ಅವರ ಸ್ನೇಹ ಪೂರ್ಣವಾಗಿ ಕಡಿದುಹೋಯಿತು. ಈ ಪ್ರಕರಣ ದೆಹಲಿಯ ಆ ಪ್ರದೇಶದ ಜನಗಳಲ್ಲಿ ದೊಡ್ಡ ಘಟನೆಯಾಗಿ ಸುದ್ದಿ ಮಾಡಿತು.

## ಬಡೌತ್ ಗುಡಿಸಲ ಪ್ರಕರಣ

1968 ಮತ್ತು 1977 ಈ ಎರಡುವರ್ಷಗಳಲ್ಲಿ ವಿದ್ಯಾನಂದರು ಬಡೌತ್‌ನಲ್ಲಿ ಚಾತುರ್ಮಾಸದ ನಾಟಕವಾಡಿದರು. ಇವರು ವಾಸಿಸುವ ಆರ್. ಸಿ. ಸಿ. ಕಟ್ಟಡ ದೊಳಗೆ ಒಂದು ಗುಡಿಸಲನ್ನು ಹಾಕಿರುತ್ತಿದ್ದರು. ಆ ಗುಡಿಸಿಲಿನೊಳಗೆ ಈ ನಾಟಕದ ಸನ್ಯಾಸಿಗಳು ಸೇರಿಕೊಳ್ಳುತ್ತಿದ್ದರು. ಬಡೌತ್‌ನ ಸ್ವೇಚ್ಛಾಪ್ರವೃತ್ತಿಯ ಹೆಣ್ಣೊಬ್ಬಳು ಈ ಸಮಯಗಳಲ್ಲಿ ವಿದ್ಯಾನಂದರೊಂದಿಗೆ ಗಾಢಸ್ನೇಹವಿಟ್ಟುಕೊಂಡಿದ್ದ ಸಂಗತಿಯನ್ನು ಈಗಲೂ ಸಹ ಬಡೌತ್‌ನ ಕೆಲವರು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾರೆ.

## ಬ್ರಹ್ಮಚಾರಿಣಿ ಪ್ರಕರಣ

ಬೆಳಗಾವಿ ಜಿಲ್ಲೆಯ ಸ್ತ್ರೀಯೊಬ್ಬಳು ಏನೋ ವಿರಸದಿಂದ ಚಿಕ್ಕಂದಿನಲ್ಲೇ ಗಂಡ ನನ್ನು ತೊರೆದಿದ್ದಳು. ಈಕೆ ದೆಹಲಿಯ ಒಂದು ವನಿತಾಶ್ರಮವನ್ನು ಸೇರಿ ಧಾರ್ಮಿಕ ಶಿಕ್ಷಣವನ್ನು ಪಡೆದ ಮೇಲೆ ದೆಹಲಿಯಲ್ಲಿಯೇ ವಾಸವಾಗಿದ್ದಳು. ಈಕೆಯ ವೃತ್ತಿಯ ಬಗ್ಗೆ ಯಾರಾದರೂ ಪ್ರಶ್ನಿಸಿದರೆ ತಾನು ಸ್ವಯಂ ಬ್ರಹ್ಮಚಾರಿಣಿಯ ದೀಕ್ಷೆ ತೆಗೆದು ಕೊಂಡಿರುವುದಾಗಿ ಹೇಳುತ್ತಿದ್ದಳು. 1978ರಲ್ಲಿ ವಿದ್ಯಾನಂದರು ದೆಹಲಿಯಲ್ಲಿದ್ದಾಗ ಅವರ ಜೊತೆಯಲ್ಲಿ ಈಕೆ ಇರುತ್ತಿದ್ದಳು. 19/9ರಲ್ಲಿ ವಿದ್ಯಾನಂದರು ಇಂದೂರಿನಲ್ಲಿ ವಾಸ್ತವ್ಯ ಹೂಡಿದಮೇಲೆ ಈಕೆಯೂ ಸಹ ವಿದ್ಯಾನಂದರನ್ನು ಅನುಸರಿಸಿ ಬಂದು ಇಂದೂರಿನಲ್ಲಿ ವಿದ್ಯಾನಂದರೊಟ್ಟಿಗೆ ಬಿಡಾರ ಮಾಡಿದಳು. ವಿದ್ಯಾನಂದರು ಈಕೆ ಯನ್ನು ಲೈಂಗಿಕವಾಗಿ ಆಹುತಿ ತೆಗೆದುಕೊಂಡರೆಂದು ಇಲ್ಲಿ ಪ್ರತ್ಯೇಕವಾಗಿ ಹೇಳಬೇಕಾ ಗಿಲ್ಲ. ವಿದ್ಯಾನಂದರು ಇಂದೂರಿನಿಂದ ಶ್ರವಣಬೆಳಗೊಳದ ಕಡೆ ಹೊರಟಾಗ ಈಕೆ ಅವರನ್ನು ನೆರಳಿನಂತೆ ಹಿಂಬಾಲಿಸಿಕೊಂಡು ಬಂದಳು. ಬೆಳಗಾವಿ ಜಿಲ್ಲೆಯ ಗಡಿಯ ಭಾಗಕ್ಕೆ ಬಂದಾಗ ಈಕೆಯನ್ನು ಜೊತೆಯಲ್ಲಿಯೇ ಕರೆದುಕೊಂಡು ಬಂದರೆ ತಮ್ಮ ಹಿಂದಿನ ಚಾಳಿಗೊತ್ತಿರುವ ಜನರು ಅನುಮಾನ ಪಡುತ್ತಾರೆಂದು ಆಲೋಚಿಸಿದ ವಿದ್ಯಾ ನಂದರು ತಾವು ಬೆಳಗಾವಿ ಜಿಲ್ಲೆಯನ್ನು ಪ್ರವೇಶಿಸುವುದಕ್ಕೆ ಮುಂಚೆಯೇ ಈ ಬ್ರಹ್ಮ ಚಾರಿಣಿಯನ್ನು ನಿವಾರಿಸಿಕೊಂಡರು. ವಿದ್ಯಾನಂದರು ತನ್ನನ್ನು ದೂರ ಮಾಡಿದುದನ್ನು ಸಹಿಸಿಕೊಳ್ಳಲು ಆಕೆಗೆ ಸಾಧ್ಯವಾಗಲಿಲ್ಲ. ಇದಕ್ಕೆ ಪ್ರತೀಕಾರವಾಗಿ ಆಕೆ ವಿದ್ಯಾನಂದರ ನಡವಳಿಕೆಗಳು ಸರಿಯಿಲ್ಲ ಆದುದರಿಂದ ನಾನು ಅವರೊಂದಿಗೆ ಇನ್ನು ಮುಂದೆಯೂ ಹೋಗಲು ಇಷ್ಟಪಡಲಿಲ್ಲ ಎಂದು ಕೆಲವರ ಮುಂದೆ ಹೇಳಿಕೊಂಡು ತನ್ನ ಮನಸ್ಸಿಗೆ

ಸಮಾಧಾನ ಮಾಡಿಕೊಂಡಳು. ಈಕೆ ಈಗಲೂ ಸಹ ಮಹಾರಾಷ್ಟ್ರದ ಗ್ರಾಮವೊಂದರಲ್ಲಿ ಮಕ್ಕಳಿಗೆ ಧಾರ್ಮಿಕ ಶಿಕ್ಷಣ ನೀಡುವ ಕೆಲಸ ಮಾಡಿಕೊಂಡು ವಾಸಿಸುತ್ತಿದ್ದಾಳೆ.

## ತ್ಯಾಗಿನಿವಾಸದ ಪ್ರಕರಣ

ವಿದ್ಯಾನಂದರು ಶ್ರವಣಬೆಳಗೊಳದ ತ್ಯಾಗಿನಿವಾಸವೆಂಬ ಸುಸಜ್ಜಿತವಾದ ಮನೆಯೊಂದರಲ್ಲಿ ಬಿಡಾರ ಮಾಡಿದ್ದಾಗ 1981ರ ಫೆಬ್ರವರಿ ತಿಂಗಳ ಸಮಯದಲ್ಲಿ ಒಂದು ಘಟನೆ ನಡೆಯಿತು. ವಿದ್ಯಾನಂದರನ್ನು ಕಾಣಲು ದಕ್ಷಿಣಕನ್ನಡ ಜಿಲ್ಲೆಯ ಪ್ರತಿಷ್ಠಿತ ಮನುಷ್ಯರೊಬ್ಬರು ಬಂದರು. ದ್ವಾರಪಾಲಕ ತಕ್ಷಣ ಇವರನ್ನು ಒಳಕ್ಕೆ ಬಿಡಲಿಲ್ಲ. ಮುನಿಗಳು ಧ್ಯಾನ ಮಾಡುತ್ತಿದ್ದಾರೆ ಈಗ ಒಳಗೆ ಹೋಗುವ ಹಾಗಿಲ್ಲ ಎಂಬ ಉತ್ತರ ಇವರಿಗೆ ಸಿಕ್ಕಿತು. ಪ್ರತಿಷ್ಠಿತ ಮನುಷ್ಯರಿಗೆ ಇದರಿಂದ ಬಹಳ ಬೇಸರವಾಯಿತು. ಬಾಗಿಲು ಹಾಕಿಕೊಂಡು ಹೊರಗೆ ದ್ವಾರಪಾಲಕನನ್ನು ನಿಲ್ಲಿಸಿ ಧ್ಯಾನಮಾಡುವ ರೀತಿಯನ್ನು ಅವರು ತಿಳಿದಿರಲಿಲ್ಲ. ಬಹಳ ಹೊತ್ತು ಕಾದರೂ ಧ್ಯಾನಾವಸ್ಥೆ ಮುಗಿದು ಬಾಗಿಲು ತೆಗೆಯುವಂತೆ ಕಾಣಲಿಲ್ಲ. ಕಡೆಗೆ ಕಾದು ಕಾದು ಸುಣ್ಣವಾದ ಪ್ರತಿಷ್ಠಿತರು ಹಿಂದಿರುಗಿ ಹೊರಟುಹೋದರು. ಅವರು ಹೋದುದನ್ನು ಖಚಿತಪಡಿಸಿಕೊಂಡು ತ್ಯಾಗಿನಿವಾಸದ ಬಾಗಿಲು ತೆರೆದುಕೊಂಡಿತು. ಶ್ರೀಮಂತ ಹೆಣ್ಣೊಬ್ಬಳು ಆ ಬಾಗಿಲಿನಿಂದ ಹೊರಹೋದಳು. ಪ್ರತಿಷ್ಠಿತರು ಬಂದಾಗಿನಿಂದಲೂ ಈ ಪ್ರಸಂಗವನ್ನು ತಪ್ಪದೆ ಗಮನಿಸುತ್ತಿದ್ದವರು ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತಾಯಿತು. ಈ ಹಿಂದೆ ವಿದ್ಯಾನಂದರ ಶೋಷಣೆಗೆ ಒಳಗಾಗಿದ್ದ ಬೆಳಗಾವಿ ಜಿಲ್ಲೆಯ ಬ್ರಹ್ಮಚಾರಿಣಿಯೂ ಸಹ ಈ ನಾಟಕವನ್ನು ಗಮನಿಸಿದಳು. ತಾನು ಕಂಡ ಪ್ರಸಂಗವನ್ನು ತನ್ನ ಆಪ್ತರೊಂದಿಗೆ ಹೇಳಿ ವಿದ್ಯಾನಂದರ ಕತ್ತಲಕೋಣೆಯ ಧ್ಯಾನವನ್ನು ಗೇಲಿ ಮಾಡಿದಳು.

ವಿದ್ಯಾನಂದರನ್ನು ಈಗಲೂ ಸಹ ಎಡೆಬಿಡದೆ ಅನುಸರಿಸುತ್ತಿರುವ ಕೆಲವು ಸ್ತ್ರೀಯರ ಪೂರ್ವಚರಿತ್ರೆಗಳನ್ನು ಪತ್ತೆಮಾಡಿ ನೋಡಿದರೆ ಈ ವಿಷಯಗಳೆಲ್ಲಾ ಚೆನ್ನಾಗಿ ಮನವರಿಕೆಯಾಗುತ್ತವೆ. ಹೆಂಗಸರ ವಿಚಾರದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕಾದ ಮುನಿ ಹೆಂಗಸರೊಂದಿಗೆ ಏಕಾಂತದಲ್ಲಿ ಕೀಕೀ ಹಾಕಿ ನಗುತ್ತಾ ಹರಟೆ ಕೊಚ್ಚುವುದನ್ನು ಕಂಡೂ ಅನುಮಾನ ಪಡದೇ ಇರುವುದು ಮೌಢ್ಯದ ಪರಮಾವಧಿಯಾಗುತ್ತದೆ.

ಅಧ್ಯಾಯ : ಇಪ್ಪತ್ತೆಂಟು

# ಆಷಾಢಭೂತಿತನಕ್ಕೆ ಮತ್ತೊಂದು ಜ್ವಲಂತ ನಿದರ್ಶನ

ಶ್ರೀ ಜಿ. ಬೃಹ್ಮಪ್ಪನವರು ಬರೆದಿರುವ 'ಮುನಿ ವಿದ್ಯಾನಂದ' ಎಂಬ ಪುಸ್ತಕದಲ್ಲಿ ವಿದ್ಯಾನಂದರನ್ನು ಮಹಾನ್ ಸ್ವಾತಂತ್ರ್ಯ ಹೋರಾಟಗಾರರನ್ನಾಗಿ ಮಾಡಿದ್ದಾರೆ. ಬೃಹ್ಮಪ್ಪನವರು ತಮ್ಮ ಪುಸ್ತಕದ ಎಂಟನೇ ಪುಟದಲ್ಲಿ, ಸುರೇಂದ್ರ ಪೋಲೀಸರಿಂದ ತಲೆತಪ್ಪಿಸಿಕೊಳ್ಳಲು ಚನ್ನಮ್ಮ ಕಿತ್ತೂರಿಗೆ ಬಂದು ಅಲ್ಲಿಯ ಸಕ್ಕರೆ ಕಾರ್ಖಾನೆಯಲ್ಲಿ ಹೆಸರು ಬದಲಿಸಿಕೊಂಡು ರಾತ್ರಿ ವೇಳೆಯ ಕೂಲಿಗಾರನಾಗಿ ಕೆಲಸಕ್ಕೆ ಸೇರಿದನು ಎಂದು ಹೇಳುತ್ತಾರೆ. ಕಾರ್ಖಾನೆಯಲ್ಲಿ ನೂರಾರು ಜನ ಕೆಲಸಗಾರರಿರುವರು ಎಂದೂ ಸಹ ಹೇಳಿದ್ದಾರೆ. ಹೀಗೆ ಬರೆದ ಬೃಹ್ಮಪ್ಪನವರು ತಮ್ಮ ಪುಸ್ತಕದ ಆರಂಭದಲ್ಲಿ 'ಮೊದಲ ಮಾತು' ಭಾಗದಲ್ಲಿ ವಿದ್ಯಾನಂದರು 'ಮುನಿವಿದ್ಯಾನಂದ' ಪುಸ್ತಕದ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿ ಬೇಡವಾದ ಭಾಗವನ್ನು ನಿರ್ದಾಕ್ಷಿಣ್ಯವಾಗಿ ಹೊಡೆದುಹಾಕಿದರು ಎಂದು ಓದುಗರಿಗೆ ಸೂಚನೆಯನ್ನು ಸಹ ಕೊಟ್ಟಿದ್ದಾರೆ. ಅಲ್ಲಿಗೆ ಪುಸ್ತಕದಲ್ಲಿ ಪ್ರಕಟವಾಗಿರುವ ವಿಚಾರಗಳಿಗೆಲ್ಲಾ ವಿದ್ಯಾನಂದರ ಒಪ್ಪಿಗೆಯಿದೆಯೆಂದಾಯಿತು. ಕಿತ್ತೂರಿನಲ್ಲಿ ಸಕ್ಕರೆ ಕಾರ್ಖಾನೆಯಿದೆ ಎಂಬುದನ್ನು ವಿದ್ಯಾನಂದರೂ ಸಹ ಒಪ್ಪಿದಂತಾಯಿತು.

ಈ ವಿಚಾರದಲ್ಲಿ ನಿಜವಾದ ಸತ್ಯವೆಂದರೆ ಚೆನ್ನಮ್ಮ ಕಿತ್ತೂರಿನಲ್ಲಿ ಹಿಂದೆಯಾಗಲೀ ಅಥವಾ ಈಗಾಗಲೀ ಯಾವ ಬಗೆಯ ಸಕ್ಕರೆ ಕಾರ್ಖಾನೆಯೂ ಇಲ್ಲವೆಂಬುದು. ಅಲ್ಲಿ ಸಕ್ಕರೆ ಕಾರ್ಖಾನೆಯೇ ಇಲ್ಲವೆಂದಮೇಲೆ ಇನ್ನು ಸುರೇಂದ್ರ ಕೆಲಸಕ್ಕೆ ಸೇರಿದ್ದು, ರಾತ್ರಿಪಾಳಿಯಲ್ಲಿ ಕೆಲಸ ಮಾಡಿದ್ದು ಇವೆಲ್ಲಾ ನೂರಕ್ಕೆ ನೂರರಷ್ಟು ಹಸೀ ಸುಳ್ಳಿನಕಂತೆಯಾಗಿವೆ. ತಮ್ಮ ಜೀವನದ ಬಗೆಗೆ ಜಿ. ಬೃಹ್ಮಪ್ಪನವರು ಬರೆದಿರುವ ಈ ಹಸೀ ಸುಳ್ಳಿನ ಕಂತೆಯನ್ನು ವಿದ್ಯಾನಂದರು ಸತ್ಯವೆಂದು ಒಪ್ಪಿಕೊಂಡಿರುವುದು ವಿದ್ಯಾನಂದರ ಆಷಾಢಭೂತಿತನಕ್ಕೆ ಮತ್ತೊಂದು ಜ್ವಲಂತ ನಿದರ್ಶನವಾಗಿದೆ. ಜಿ. ಬೃಹ್ಮಪ್ಪನವರಾಗಲೀ ಅಥವಾ ವಿದ್ಯಾನಂದರಾಗಲೀ ಅಥವಾ ವಿದ್ಯಾನಂದರನ್ನು ನಿಜದ ತಲೆಯಮೇಲೆ ಹೊಡೆದಂತೆ ಊರೂರಲ್ಲಿ ಮೆರೆಸುತ್ತಿರುವವರು ಯಾರೇ ಆಗಲೀ ಚನ್ನಮ್ಮ ಕಿತ್ತೂರಿನಲ್ಲಿ ಸಕ್ಕರೆ ಕಾರ್ಖಾನೆ ಹಿಂದಾಗಲೀ ಅಥವಾ ಈಗಾಗಲೀ ಇರುವುದನ್ನು ರುಜುವಾತು ಪಡಿಸಬಲ್ಲರೆ ?

ಇಂತಹ ಅಪ್ಪಟ ಸುಳ್ಳಿನ ಕಂತೆಗಳು ಜಿ. ಬ್ರಹ್ಮಪ್ಪನವರ 'ಮುನಿ ವಿದ್ಯಾನಂದ' ಗ್ರಂಥದಲ್ಲಿ ಹೇರಳವಾಗಿ ಸೇರಿಕೊಂಡಿವೆ. ಇವುಗಳನ್ನೆಲ್ಲಾ ವಿಚಾರ ಮಾಡದೆ ವಿದ್ಯಾನಂದರ ಸ್ವಾಗತ ಸಮಿತಿಯವರು ಜಿ. ಬ್ರಹ್ಮಪ್ಪನವರ ಪುಸ್ತಕದ ಸಾವಿರಾರು ಪ್ರತಿಗಳನ್ನು ಮುದ್ರಿಸಿ ತಾತ್ಸಾರ ತೋರಿರುವುದು ಖಂಡನಾರ್ಹ. ಜನವಂಚನೆಯನ್ನೇ ಜೀವನದ ಪರಮಗುರಿ ಮಾಡಿಕೊಂಡಿರುವವರಿಗೆ ಪ್ರಚಾರ ನೀಡುವುದರಿಂದ ಸಮಾಜೋದ್ಧಾರ ಎಂದಿಗೂ ಸಾಧ್ಯವಿಲ್ಲ. ಜಿ. ಬ್ರಹ್ಮಪ್ಪನವರು ಹೇಳಿರುವ ಕಿತ್ತೂರಿನ ಸಕ್ಕರೆ ಕಾರ್ಖಾನೆಯ ಕಟ್ಟುಕಥೆಯನ್ನು ಮತ್ತು ಇನ್ನಿತರ ಕಾಲ್ಪನಿಕ ವಿಚಾರಗಳನ್ನೂ ಕರ್ನಾಟಕದ ಕೆಲವು ಲೇಖಕರೂ ಸಹ ಮಕ್ಕೀಕಾಮಕ್ಕಿ ಮಾಡಿ ಲೇಖನಗಳನ್ನೂ ಕಿರು ಪುಸ್ತಕಗಳನ್ನೂ ಬರೆದು ವಿದ್ಯಾನಂದರ ನಾಟಕ ಕಂಪನಿಗೆ ಪ್ರಚಾರ ನೀಡಿ ತಿಳಿಗೇಡಿಗಳಾಗಿರುವುದು ಅತ್ಯಂತ ಶೋಚನೀಯವಾದ ಸಂಗತಿಯಾಗಿದೆ.[1]

ನಿಜ ಹೇಳಬೇಕೆಂದರೆ ಜಿ. ಬ್ರಹ್ಮಪ್ಪನವರು ನಂಬಿಕೆಗೆ ಅರ್ಹರಾದ ಲೇಖಕರೇ ಅಲ್ಲ. ವಿದ್ಯಾನಂದರ ಹಾಗೆ ಜಿ. ಬ್ರಹ್ಮಪ್ಪನವರೂ ಸಹ ಆತ್ಮವಂಚನೆ ಮತ್ತು ಪರವಂಚನೆಯ ವಿದ್ಯೆಯಲ್ಲಿ ಚನ್ನಾಗಿ ಪಳಗಿದವರು. ಇಬ್ಬರೂ ಒಂದೇ ದೋಣಿಯಲ್ಲಿ ಪಯಣ ಮಾಡುವವರು. ಈ ಹಿಂದೆ ಜಿ ಬ್ರಹ್ಮಪ್ಪನವರು ಮಾಡಿದ ನಂಬಿಕೆ ದ್ರೋಹದ ಒಂದು ಪ್ರಕರಣವನ್ನು ಕೆಳಗೆ ಕಾಣಬಹುದು.

### ಜಿ. ಬ್ರಹ್ಮಪ್ಪನವರಿಂದ ನಂಬಿಕೆದ್ರೋಹ

1969 ರಲ್ಲಿ ಜಿ. ಬ್ರಹ್ಮಪ್ಪನವರನ್ನು ಶ್ರವಣಬೆಳಗೊಳದ 'ಶ್ರೀ ಗೋಮಟೇಶ್ವರ ಮಹಾವಿದ್ಯಾಲಯ' ಕಾಲೇಜಿಗೆ ಪ್ರಿನ್ಸಿಪಾಲರನ್ನಾಗಿ ಕರೆಸುವ ತೀರ್ಮಾನವಾಯಿತು. ವಿದ್ಯಾಸಂಸ್ಥೆಯ ಆಗಿನ ಕಾರ್ಯದರ್ಶಿಗಳಾಗಿದ್ದ ಶ್ರೀ ಸಿ.ಬಿ. ಎಂ. ಚಂದ್ರಯ್ಯನವರು ಜಿ. ಬ್ರಹ್ಮಪ್ಪನವರ ಮೇಲೆ ನಂಬಿಕೆಯಿಟ್ಟು ಅವರನ್ನು ಕಾಲೇಜಿನ ಪ್ರಿನ್ಸಿಪಾಲರನ್ನಾಗಿ ಕರೆಸಿಕೊಳ್ಳಲು ವ್ಯವಸ್ಥೆ ಮಾಡತೊಡಗಿದರು. ಈ ಸಂದರ್ಭದಲ್ಲಿ ಜಿ. ಬ್ರಹ್ಮಪ್ಪನವರು ಚಂದ್ರಯ್ಯನವರಿಗೆ ತಿಳಿಯದಂತೆ ಚಂದ್ರಯ್ಯನವರ ಅಧಿಕಾರಸ್ಥಾನಕ್ಕೆ ಅರ್ಧಚಂದ್ರ ಪ್ರಯೋಗ ಮಾಡಲು ಪಿತೂರಿಯೊಂದನ್ನು ನಡೆಸಿದರು. ಅವರು ಮಾಡಿದ ಪಿತೂರಿ ಹೀಗಿದೆ :

---

1. ವಿದ್ಯಾನಂದರ ವಂಚನೆಯ ಜೀವನವನ್ನು ಕೆಲವು ಲೇಖಕರ ಮುಂದೆ ನಾನು ಸಾಕ್ಷ್ಯಾಧಾರಗಳ ಮೂಲಕ ಸ್ಪಷ್ಟಪಡಿಸಿದ ಮೇಲೂ ಅವರು ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳುವ ಆಸಕ್ತಿ ತೋರಲಿಲ್ಲ. ಬದಲಾಗಿ ವಿದ್ಯಾನಂದರ ಪ್ರಚಾರಕ್ಕೆ ಮತ್ತೆ ಕಂಕಣ ಕಟ್ಟಿ ನಿಂತರು. ಇದು ಜನವಂಚನೆಯ ಕಾರ್ಯದಲ್ಲಿ ಕೆಲ ಲೇಖಕರೂ ಪಾಮಿಲಾಗಿರುವುದನ್ನು ತೋರಿಸುತ್ತದೆ.

ಜಿ. ಬ್ರಹ್ಮಪ್ಪನವರು ಚಂದ್ರಯ್ಯನವರ ಹೆಸರಿನಲ್ಲಿ ತಾವೇ ಒಂದು ಫೋರ್ಜರಿ ಪತ್ರ ಬರೆದು, ಆ ಕಾಲದಲ್ಲಿ ಮಂಗಳೂರಿನ ಡಿ. ಪುಟ್ಟಸ್ವಾಮಿಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ವಿವೇಕಾಭ್ಯುದಯ' ಮಾಸಪತ್ರಿಕೆಗೆ ಕಳುಹಿಸಿಕೊಟ್ಟರು. ತಾ. 20-6-1969 ನೇ ಸಂಚಿಕೆಯಲ್ಲಿ 338 ನೇ ಪುಟದಲ್ಲಿ ಜಿ. ಬ್ರಹ್ಮಪ್ಪನವರು ಬರೆದ ಫೋರ್ಜರಿ ಪತ್ರ ಪ್ರಕಟವಾಯಿತು. ಆ ಫೋರ್ಜರಿ ಪತ್ರದ ಪೂರ್ಣಪಾಠ ಕೆಳಗಿದೆ.

"ತಾ. 25-5-69 ಭಾನುವಾರ ಶ್ರವಣಬೆಳಗೊಳದ ಗೋಮಟೇಶ್ವರ ಎಜುಕೇಷನ್ ಸೊಸೈಟಿಯ ಸರ್ವಸದಸ್ಯರ ಮಹಾಸಭೆಯಲ್ಲಿ ಆದ ತೀರ್ಮಾನ—

ಗೋಮಟೇಶ್ವರ ಕಾಲೇಜಿನ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಬೊಂಬಾಯಿನ ಶ್ರೀ ಎಂ.ಸಿ. ಅನಂತರಾಜಯ್ಯನವರು ತಮಗೆ ಉಚಿತವಾಗಿ ತೋರಿದ ರೀತಿ ಸಮಾಜದಲ್ಲಿ ಧನಸಂಗ್ರಹ ಮಾಡಬಹುದೆಂತಲೂ, ತಾವು ಸಂಗ್ರಹಿಸಿದ ಧನವನ್ನು ಗೋಮಟೇಶ್ವರ ಕಾಲೇಜಿಗೆ ಬಳಸುವಾಗಲು ಅವರ ತೀರ್ಮಾನಕ್ಕೇನೆ ನಾವೆಲ್ಲ ಬದ್ಧರಾಗಿರಬೇಕೆಂದು ಮೇಲ್ಕಂಡ ಸರ್ವಸದಸ್ಯರ ಸಭೆ ಸರ್ವಾನುಮತದಿಂದ ತೀರ್ಮಾನಿಸಿದೆ. ಆದರಿಂದ ನಮ್ಮ ಸಮಾಜದ ಭವ್ಯಾತ್ಮರು ಮಹಾದಾನಿಗಳಾದ ಶ್ರೀ ಅನಂತರಾಜಯ್ಯನವರ ದಿವ್ಯ ಮಡಿಲಲ್ಲಿ ಗೋಮಟೇಶ್ವರ ಕಾಲೇಜಿನ ಪುರೋಭಿವೃದ್ಧಿಗಾಗಿ ಧನವನ್ನು ಸಮರ್ಪಿಸಬೇಕೆಂದು ಪ್ರಾರ್ಥಿಸುವೆವು.

— ಸಿ.ಬಿ.ಎಂ. ಚಂದ್ರಯ್ಯ, ಕಾರ್ಯದರ್ಶಿ."

ಮೇಲೆ ಕಂಡತೆ ವಿವೇಕಾಭ್ಯುದಯದಲ್ಲಿ ತಮ್ಮ ಹೆಸರಿನಲ್ಲಿ ಬಂದ ಹೇಳಿಕೆಯನ್ನು ಸಿ.ಬಿ.ಎಂ. ಚಂದ್ರಯ್ಯನವರು ಗಮನಿಸಿದರು. ತಾವು ಈ ರೀತಿ ಬರೆದವರಲ್ಲ. ಅಲ್ಲದೆ ಅಂದಿನ ಸಭೆಯಲ್ಲಿ ಅಂತಹ ಯಾವ ತೀರ್ಮಾನವೂ ಆಗಿಲ್ಲ. ನಿಜಸಂಗತಿ ಹೀಗಿರುವಾಗ ಪತ್ರಿಕೆಯಲ್ಲಿ ಅಪ್ಪಟ ಸುಳ್ಳು ಹೇಳಿಕೆಯನ್ನು ತಮ್ಮ ಹೆಸರಿನಲ್ಲಿ ಕೊಟ್ಟಿರುವ ಆಸಾಮಿ ಯಾರಿರಬಹುದು ಎಂದು ಚಂದ್ರಯ್ಯನವರು ಆಲೋಚಿಸಿದರು. ಜಿ. ಬ್ರಹ್ಮಪ್ಪನವರ ಮೇಲೆ ಅವರಿಗೆ ಸಂಶಯವುಂಟಾಯಿತು. ಆದರೂ ಈ ಬಗ್ಗೆ ಪತ್ರಿಕೆಯ ಸಂಪಾದಕರನ್ನು ಮೊದಲು ವಿಚಾರಿಸುವುದು ಉಚಿತವೆಂದು ಈ ಬಗ್ಗೆ ಚಂದ್ರಯ್ಯನವರು ಪತ್ರಿಕೆಯ ಸಂಪಾದಕರಾದ ಡಿ. ಪುಟ್ಟಸ್ವಾಮಿಯವರನ್ನು ಸಂಪರ್ಕಿಸಿದರು. ಆ ಪತ್ರ ಜಿ. ಬ್ರಹ್ಮಪ್ಪನವರ ಮೂಲಕ ಬಂತೆಂಬುದನ್ನು ಸಂಪಾದಕರು ದೃಢಪಡಿಸಿದರು. ಈ ವಿಚಾರಣೆಯಾದ ಮೇಲೆ ಚಂದ್ರಯ್ಯನವರು ಜಿ. ಬ್ರಹ್ಮಪ್ಪನವರನ್ನು ಈ ಬಗ್ಗೆ ಪ್ರಶ್ನಿಸಿದರು. ತಪ್ಪಿಸಿಕೊಳ್ಳಲು ಅವಕಾಶವಿಲ್ಲದ ಬ್ರಹ್ಮಪ್ಪನವರು ಆ ಫೋರ್ಜರಿ ಕೆಲಸ ತಮ್ಮದೆಂದು ಅನಿವಾರ್ಯವಾಗಿ ಒಪ್ಪಿಕೊಳ್ಳಲೇಬೇಕಾಯಿತು. ಈ ತಪ್ಪೊಪ್ಪಿಗೆಯ ಬಗ್ಗೆ ಬ್ರಹ್ಮಪ್ಪನವರು ತಾ. 25-6-1969 ರಂದು ಮಡಿಕೇರಿಯಿಂದ ಒಂದು

ಪತ್ರವನ್ನು ಬರೆದು ಚಂದ್ರಯ್ಯನವರಲ್ಲಿ ಕ್ಷಮಾಯಾಚನೆ ಮಾಡಿದರು. ಈ ಕ್ಷಮಾ ಯಾಚನೆ ಪತ್ರದ ಪೂರ್ಣವಿವರ ಹೀಗಿದೆ :

"25-6-1969.

ಪೂಜ್ಯರಿಗೆ ನಮಸ್ಕಾರಗಳು. ಈ ತಿಂಗಳ ವಿವೇಕಾಭ್ಯುದಯದಲ್ಲಿ ತಮ್ಮ ಹೆಸರಿನಲ್ಲಿ ಬಂದ ಹೇಳಿಕೆ ಬಗ್ಗೆ ತಮಗೆ ಅತೀವ ವ್ಯಥೆಯಾಗಿದೆ. ಅದಕ್ಕಾಗಿ ನಾನು ಪಶ್ಚಾತ್ತಾಪ ಪಡುವೆನು. ಜೊತೆಗೆ ಕ್ಷಮೆ ಬೇಡುವೆನು ಅತಿ ಉತ್ಸಾಹದಲ್ಲಿ ನಾನು ಎಡವಿದಂತಾಗಿದೆ. ಮುಂದಿನ ಬರವಣಿಗೆಯಲ್ಲಿ ಎಚ್ಚರವಾಗಿರುವೆನು. ಕ್ಷಮಿಸಬೇಕು. 28-6-69 ರ ಸಂಜೆ ಮೈಸೂರಿಗೆ ಬರುತ್ತೇನೆ.

ಜಿ. ಬ್ರಹ್ಮಪ್ಪ"

ಜಿ. ಬ್ರಹ್ಮಪ್ಪನವರು ಶ್ರವಣಬೆಳಗೊಳದ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಬರು ವುದಕ್ಕೆ ಮುಂಚೆಯೇ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಚಂದ್ರಯ್ಯನವರಿಗೆ ಹೀಗೆ ಮೇಲಿನಂತೆ ಕ್ಷಮಾಯಾಚನೆ ಪತ್ರಬರೆದುಕೊಟ್ಟರು. ತಿಳಿದೂ ತಿಳಿದು ಫೋರ್ಜರಿ ಪತ್ರರಚನೆ ಮಾಡಿ ಸಾರ್ವಜನಿಕರನ್ನು ತಪ್ಪುದಾರಿಗೆಳೆಯುವ ಇಂತಹ ವ್ಯಕ್ತಿಯನ್ನು ಬೆಳೆಯಬೇಕಾಗಿದ್ದ ಒಂದು ವಿದ್ಯಾಸಂಸ್ಥೆಯು ಪ್ರಿನ್ಸಿಪಾಲರನ್ನಾಗಿ ತೆಗೆದುಕೊಳ್ಳಬಾರ ದಿತ್ತು. ಆದರೆ ಚಂದ್ರಯ್ಯನವರು ಈ ಪ್ರಸಂಗವನ್ನು ಬಹಿರಂಗ ಪಡಿಸದೆ, ಕ್ಷಮಾ ಯಾಚನೆ ಪತ್ರವನ್ನು ಬರೆದುಕೊಟ್ಟುದರಿಂದ ಮುಂದೆ ಬ್ರಹ್ಮಪ್ಪನವರು ಸರಿಯಾದ ದಾರಿಯಲ್ಲಿ ನಡೆಯಬಹುದೆಂದು ಭಾವಿಸಿ ಅವರ ಬಗ್ಗೆ ಕಠಿಣಕ್ರಮವನ್ನು ಕೈಗೊಳ್ಳಲು ಹೋಗಲಿಲ್ಲ. ಬದಲಾಗಿ ಅವರನ್ನು ಔದಾರ್ಯದಿಂದ ಕಂಡು ಕಾಲೇಜಿನ ಪ್ರಿನ್ಸಿಪಾಲ ರನ್ನಾಗಿ ನೇಮಕ ಮಾಡಿದರು.

ಮುಂದೆ ಬೆಂಗಳೂರಿನಿಂದ ಹೆಚ್. ಎಸ್. ನೇಮಿನಾಥಯ್ಯನವರ ಸಂಪಾದ ಕತ್ವದಲ್ಲಿ ಪ್ರಕಟವಾಗುತ್ತಿದ್ದ 'ವೀರಭಾರತಿ' ಮಾಸ ಪತ್ರಿಕೆಯ ಜುಲೈ 1969 ರ ಸಂಚಿಕೆಯಲ್ಲಿ ಚಂದ್ರಯ್ಯನವರ ಹೆಸರಿನಲ್ಲಿ ಇನ್ನೊಂದು ಫೋರ್ಜರಿಪತ್ರ ಪ್ರಕಟ ವಾಯಿತು. ಈ ಫೋರ್ಜರಿ ಪತ್ರ ಚಂದ್ರಯ್ಯನವರ ಆರೋಗ್ಯದ ಮೇಲೆ ಧಾಳಿ ಮಾಡಿದೆ. ಅದರ ವಿವರ ಕೆಳಗಿದೆ.

"ಶ್ರವಣಬೆಳಗೊಳದ ಗೋಮಟೇಶ್ವರ ಕಾಲೇಜಿನ ಕಾರ್ಯದರ್ಶಿಗಳಾದ ಸಿ. ಬಿ. ...ಯ್ಯನವರು ಕಾರ್ಯದರ್ಶಿ ಸ್ಥಾನದಿಂದ ವಿಶ್ರಾಂತಿ ಪಡೆದಿರುವರು,

ಪತ್ರ—ಮಾ॥ ರಾ॥ ಎಂ. ಸಿ. ಅನಂತರಾಜಯ್ಯನವರಲ್ಲಿ ವಿಜ್ಞಾಪನೆಗಳು,

ಎರಡು ವರ್ಷಗಳಿಂದ ನಾವು ಗೋಮಟೇಶ್ವರ ಕಾಲೇಜನ್ನು ನಡೆಸಿಕೊಂಡು ಬಂದಿರುವೆವು. ಈಗ ನನಗೆ ಆರೋಗ್ಯ ಸರಿಯಾಗಿಲ್ಲ. ವೈದ್ಯರ ಸಲಹೆಯಂತೆ ವಿಶ್ರಾಂತಿ ಪಡೆಯಬೇಕಾಗಿದೆ. ತಾವು ಸಂಪೂರ್ಣವಾಗಿ ಕಾಲೇಜಿನ ವಹಿವಾಟನ್ನು ವಹಿಸಿಕೊಂಡು ನನಗೆ ಉಪಕಾರ ಮಾಡಬೇಕೆಂದು ಕೋರುವೆನು. ತಮಗೆ ಸೂಕ್ತ ಕಂಡಂತೆ ಕಾಲೇಜಿನ ಕಾರ್ಯಕಾರಿ ಸಮಿತಿಯನ್ನೂ ತಾವು ಮಾರ್ಪಡಿಸಿಕೊಳ್ಳಬಹುದು.

ನಾವು ಎರಡು ವರ್ಷಗಳಿಂದ ಬೆಳೆಸಿದ ವಿದ್ಯಾಸಂಸ್ಥೆಯನ್ನು ಈಗ ಸಂತೋಷ ದಿಂದ ತಮ್ಮ ಮಡಿಲಲ್ಲಿ ಹಾಕಿರುವೆನು. ತಾವೂ ಧರ್ಮಸ್ಥಳದ ವೀರೇಂದ್ರ ಹೆಗ್ಗಡೆ ಯವರೂ ಗೋಮಟೇಶ್ವರ ವಿದ್ಯಾಪೀಠಕ್ಕೆ ನಂದಾದೀವಿಗೆಗಳಾಗಿ ಮಾರ್ಗದರ್ಶನ ಮಾಡಬೇಕೆಂದು ಪ್ರಾರ್ಥಿಸುವೆನು.

7-6-1969

ಇತಿ ತಮ್ಮವ,
ಸಿ.ಬಿ.ಎಂ. ಚಂದ್ರಯ್ಯ
ಮೈಸೂರು"

ಚಂದ್ರಯ್ಯನವರು ಎಂ ಸಿ. ಅನಂತರಾಜಯ್ಯನವರನ್ನುದ್ದೇಶಿಸಿ ಇಂತಹ ಯಾವ ಪತ್ರವನ್ನೂ ಬರೆದಿರಲಿಲ್ಲ. ನಿಜಸಂಗತಿ ಹೀಗಿದ್ದಾಗ ಅವರ ಹೆಸರಿನಲ್ಲಿ ಮೇಲಿನಂತೆ ಫೋರ್ಜರಿ ಪತ್ರ ವೀರಭಾರತಿ ಪತ್ರಿಕೆಯಲ್ಲಿ ಪ್ರಕಟವಾಗಿ ಜನರನ್ನು ತಪ್ಪುದಾರಿಗೆಳೆ ಯಲು ಪ್ರಯತ್ನಿಸಿತು. ಚಂದ್ರಯ್ಯನವರು 1969ರಲ್ಲಿ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಸ್ಥಾನವನ್ನು ಕಾರಣಾಂತರಗಳಿಂದ ಬಿಟ್ಟಿದ್ದು ನಿಜ. ಇವರ ನಂತರ ಮೈಸೂರಿನ ಶ್ರೀ ಸಿ.ಬಿ ಮಹಾವೀರಪ್ರಸಾದ್ ಸಂಸ್ಥೆಯ ಕಾರ್ಯದರ್ಶಿಯಾಗಿ ಅಧಿಕಾರವಹಿಸಿ ಕೊಂಡರು. ಈ ಬದಲಾವಣೆಯಾದ ಮೇಲೆ ಚಂದ್ರಯ್ಯನವರು ವಿದ್ಯಾಸಂಸ್ಥೆಯ ಸದಸ್ಯರಾಗಿಯೂ, ಆಡಳಿತಮಂಡಳಿಯ ಸದಸ್ಯರಾಗಿಯೂ ಮುಂದುವರೆದರು. ವಿದ್ಯಾ ಸಂಸ್ಥೆಯ ಸಂಪರ್ಕವನ್ನೇನೂ ಅವರು ಕಡಿದುಕೊಳ್ಳಲಿಲ್ಲ. ವಿದ್ಯಾಸಂಸ್ಥೆಯ ಆಡಳಿತ ವ್ಯವಹಾರಗಳಲ್ಲಿ ಇವರ ಅಗತ್ಯ ಎಷ್ಟೊಂದು ಅನಿವಾರ್ಯವಾಗಿತ್ತೆಂದರೆ ಮಹಾವೀರ ಪ್ರಸಾದರು ಕಾರ್ಯದರ್ಶಿಯಾಗಿದ್ದರೂ ಅವರ ಪರವಾಗಿ ಎಲ್ಲಾ ಆಡಳಿತದ ಕೆಲಸ ಗಳನ್ನೂ ಚಂದ್ರಯ್ಯನವರೇ ನಿರ್ವಹಿಸುತ್ತಿದ್ದರು. ಮಹಾವೀರಪ್ರಸಾದರು ಎಲ್ಲಾ ಹೊಣೆಯನ್ನೂ ಚಂದ್ರಯ್ಯನವರ ಮೇಲೆ ಒತ್ತಾಯದಿಂದ ಹೊರಿಸಿ ತಾವು ಕೇವಲ ರುಜು ಮಾಡುವ ಅಧಿಕಾರವನ್ನು ಮಾತ್ರ ಉಳಿಸಿಕೊಂಡಿದ್ದರು.

ಇದೂ ಅಲ್ಲದೆ 'ಶ್ರೀಗೋಮಟೇಶ್ವರ ಶಿಕ್ಷಣ ಸಂಸ್ಥೆ ಚಂದ್ರಯ್ಯನವರು ಹಗಲಿ ರಾತ್ರಿ ಶ್ರಮಪಟ್ಟು ವಿಶ್ವಪ್ರಯತ್ನ ಮಾಡಿ ಹುಟ್ಟುಹಾಕಿದ ಸಂಸ್ಥೆ. ಈ ಸಂಸ್ಥೆಯ ಸ್ಥಾಪನೆಗಾಗಿ ಚಂದ್ರಯ್ಯನವರು ತಮ್ಮ ಕುಟುಂಬದ ವ್ಯವಹಾರಗಳನ್ನೆಲ್ಲಾ ಬದಿಗೊತ್ತಿ

ಹೋರಾಡಿದ ರೀತಿ ವರ್ಣನಾತೀತ. ಇವರ ಪ್ರಯತ್ನವಿಲ್ಲದೇ ಹೋಗಿದ್ದರೇ ಸಂಸ್ಥೆಯೇ ಸ್ಥಾಪನೆಯಾಗುತ್ತಿರಲಿಲ್ಲ. ಒಟ್ಟಿನಲ್ಲಿ ಅವರ ಜೀವನಸಾಧನೆಯ ಪ್ರತೀಕ ಆ ವಿದ್ಯಾಸಂಸ್ಥೆ. ಹೀಗೆ ತಾವು ಶ್ರಮಪಟ್ಟು ಸ್ಥಾಪಿಸಿದ ಸಂಸ್ಥೆ ಬೆಳೆದು ಬಾಳಲು ಅವರು ಯಾವ ತ್ಯಾಗಕ್ಕೂ ಸಿದ್ಧರಾಗಿದ್ದರು. ಸಂಸ್ಥೆ ಸ್ಥಾಪನೆಯಾಗಿ ಎರಡು ವರ್ಷಗಳು ಕಳೆಯುತ್ತಿದ್ದಂತೆಯೇ ತಮ್ಮ ಕಾರ್ಯದರ್ಶಿತ್ವದ ಬಗ್ಗೆ ಯಾರಿಂದಲೋ ಬಂದ ಒಂದು ಒಡಕು ಮಾತು ಇವರು ತಮ್ಮ ಕಾರ್ಯದರ್ಶಿಸ್ಥಾನವನ್ನು ಮಹಾವೀರ ಪ್ರಸಾದರಿಗೆ ಬಿಟ್ಟುಕೊಡಲು ಕಾರಣವಾಯಿತು ಇಷ್ಟಾದರೂ ಎಲ್ಲರೂ ಮತ್ತೆ ಇವರನ್ನೇ ಅವಲಂಬಿಸಬೇಕಾಯಿತು. ತಮ್ಮ ಆರೋಗ್ಯವನ್ನೂ ಒಳಗೊಂಡಂತೆ ಎಂತಹ ಪ್ರತಿಕೂಲ ಪರಿಸ್ಥಿತಿಯೇ ಬರಲಿ ವಿದ್ಯಾಸಂಸ್ಥೆಯ ಕೆಲಸ ತನ್ನಿಂದ ಆಗುವುದಿಲ್ಲ ಎಂದು ಚಂದ್ರಯ್ಯನವರು ಎಂದೂ ಹೇಳಿದವರೇ ಅಲ್ಲ. ಅಥವಾ ಒಂದು ಕಾರ್ಯ ತಮ್ಮಿಂದ ಆಗದೇ ಹೋದಾಗ ಅದನ್ನು ನೀವು ಮಾಡಿ ಎಂದು ಇನ್ನೊಬ್ಬರನ್ನು ಅಂಗಲಾಚುವ ದೈನ್ಯಸ್ಥಿತಿಗೆ ಇಳಿಯುವ ಜಾಯಮಾನವೂ ಚಂದ್ರಯ್ಯನವರದಲ್ಲ. ಚಂದ್ರಯ್ಯನವರ ವ್ಯಕ್ತಿತ್ವ ಹೀಗಿರುವಾಗ ಅವರ ಹೆಸರಿನಲ್ಲಿ ಪುನಃ ಯಾರೋ ಬರೆದ ಪೋರ್ಜರಿ ಪತ್ರ 'ವೀರಭಾರತಿ' ಪತ್ರಿಯೆಯಲ್ಲಿ ಪ್ರಕಟವಾದುದು ಚಂದ್ರಯ್ಯನವರ ಗಮನಕ್ಕೆ ಬಂದಿತು.

ಚಂದ್ರಯ್ಯನವರು, ತಮ್ಮ ಆರೋಗ್ಯದ ಮೇಲೆ ಧಾಳಿ ಮಾಡಿ ತಮ್ಮ ಮನೋಧರ್ಮವನ್ನು ವಿರೂಪಗೊಳಿಸಿ ಜನರನ್ನು ತಪ್ಪುದಾರಿಗೆಳೆಯಲು ಪ್ರಯತ್ನಿಸಿರುವ ಆ ಪತ್ರವನ್ನು ತಮ್ಮ ಹೆಸರಿನಲ್ಲಿ ಯಾರು ಬರೆದು ಪತ್ರಿಕೆಗೆ ಕಳುಹಿಸಿರಬಹುದು ಎಂದು ಒಂದು ಕ್ಷಣ ಯೋಚಿಸಿದರು. ಕೇವಲ ಒಂದು ತಿಂಗಳ ಹಿಂದೆ ಇಂಥ ನೀಚ ಕೆಲಸ ಮಾಡಿ ಕ್ಷಮಾಯಾಚನೆ ಪತ್ರ ಬರೆದುಕೊಟ್ಟ ಜಿ. ಬ್ರಹ್ಮಪ್ಪನವರು ನೆನಪಿಗೆ ಬಂದರು. ಪತ್ರದ ಶೈಲಿಯೂ ಬ್ರಹ್ಮಪ್ಪನವರ ಬರವಣಿಗೆಯ ಶೈಲಿಯನ್ನು ಚನ್ನಾಗಿ ಹೋಲುತ್ತಿತ್ತು. ಈ ಹೊತ್ತಿಗೆ ಜಿ. ಬ್ರಹ್ಮಪ್ಪನವರು ಕಾಲೇಜಿಗೆ ಪ್ರಿನ್ಸಿಪಾಲರಾಗಿ ನೇಮಕಗೊಂಡಿದ್ದರು. ಚಂದ್ರಯ್ಯನವರು ಆ ಪೋರ್ಜರಿ ಪತ್ರ ಬರೆದವರ ಹೀನ ಮನಸ್ಥಿತಿಯ ಬಗ್ಗೆ ಜುಗುಪ್ಸೆಪಟ್ಟರು. ಈ ವಿಚಾರವಾಗಿ ಮತ್ತೆ ಜಿ. ಬ್ರಹ್ಮಪ್ಪನವರನ್ನು ಪ್ರಶ್ನಿಸಲು ಚಂದ್ರಯ್ಯನವರ ಅಂತರಂಗ ಒಪ್ಪಲಿಲ್ಲ. ಪೋರ್ಜರಿ ಪತ್ರ ಪ್ರಕರಣವನ್ನೇ ಸಂಪೂರ್ಣವಾಗಿ ಉಪೇಕ್ಷೆ ಮಾಡಿ ಕಾಲೇಜಿನ ಅಭಿವೃದ್ಧಿಯ ಕಡೆ ತಮ್ಮ ಗಮನವನ್ನು ಹರಿಸಿದರು.

ಜಿ. ಬ್ರಹ್ಮಪ್ಪನವರು 1969 ರಿಂದ 1973 ರವರೆಗೆ ಶ್ರವಣಬೆಳಗೊಳದ ಗೋಮಟೇಶ್ವರ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ಕೆಲಸ ಮಾಡಿದರು. ಇವರ ಅಧಿಕಾರಾವಧಿಯಲ್ಲಿ ಅನೇಕ ಅವ್ಯವಹಾರಗಳು ಕಾಲೇಜಿನಲ್ಲಿ ನಡೆದುವು. ಹಣದ ಅವ್ಯವ

ಹಾರವೂ ಇದರಲ್ಲಿ ಸೇರಿತ್ತು. ಇದಕ್ಕಾಗಿ ಇವರು ಮತ್ತೆ ಕಾರ್ಯದರ್ಶಿಯವರಿಗೆ ತಪ್ಪೊಪ್ಪಿಗೆಯ ಪತ್ರವನ್ನು ಬರೆದುಕೊಟ್ಟರು.

ಮೇಲಿನ ವಿವರಗಳಂತೆ ನಂಬಿಕೆದ್ರೋಹವೆಸಗಿದ ಹಿನ್ನಲೆಯುಳ್ಳ ಜಿ. ಬ್ರಹ್ಮಪ್ಪನವರು, 1980 ರಲ್ಲಿ 'ಮುನಿವಿದ್ಯಾನಂದ' ಪುಸ್ತಕ ಬರೆದು ಅದರಲ್ಲಿ ಚನ್ನಮ್ಮ ಕಿತ್ತೂರಿನಲ್ಲಿ ಸಕ್ಕರೆ ಕಾರ್ಖಾನೆಯಿದೆ, ಇದರಲ್ಲಿ ಸುರೇಂದ್ರ (ಈಗಿನ ವಿದ್ಯಾನಂದ) ಹೆಸರು ಬದಲಿಸಿಕೊಂಡು ರಾತ್ರಿ ಪಾಳಿಯ ಕೆಲಸಗಾರನಾಗಿದ್ದ ಎಂದು ಮುಂತಾದ ಸುಳ್ಳಿನ ಕಂತೆಗಳನ್ನು ಹೆಣೆದಿದ್ದಾರೆ. ಇದನ್ನು ವಿದ್ಯಾನಂದರೂ ಸಹ ಒಪ್ಪಿಕೊಂಡಿದ್ದಾರೆ. ಚೆನ್ನಮ್ಮ ಕಿತ್ತೂರಿನಲ್ಲಿ ಸಕ್ಕರೆಯ ಕಾರ್ಖಾನೆಯೇ ಇಲ್ಲದ ಮೇಲೆ ಇದಕ್ಕೆ ಸಂಬಂಧಿಸಿದ ಕಥೆಯೆಲ್ಲಾ ಸುಳ್ಳಾಗುತ್ತದೆ. ಇದರಿಂದ ತಾವು ಮಾಡುತ್ತಿರುವ ಮೋಸಗಾರಿಕೆ ವಂಚನೆಯೆಲ್ಲಾ ಜನರಿಗೆ ಸುಲಭವಾಗಿ ಅರ್ಥವಾಗಿ ಬಿಡುತ್ತದೆ. ಇದರಿಂದ ಜನ ತಮ್ಮ ಕಪಟತನವನ್ನು ಗುರುತಿಸುತ್ತಾರೆ ಎಂಬ ಸಾಮಾನ್ಯವಾದ ತಿಳುವಳಿಕೆಯೂ ವಿದ್ಯಾನಂದರಿಗಿಲ್ಲದಿರುವುದು ಶೋಚನೀಯ ಸಂಗತಿ.

ಜನವಂಚನೆಯನ್ನೇ ಮೂಲಕಸುಬಾಗಿ ಇಟ್ಟುಕೊಂಡಿರುವ ವಿದ್ಯಾನಂದರು ನಂಬಿದವರಿಗೆ ದ್ರೋಹ ಮಾಡುವ ಜಿ. ಬ್ರಹ್ಮಪ್ಪನವರಂತಹ ಲೇಖಕರ ಮೂಲಕ ತಮ್ಮ ಜೀವಿತದ ಘಟನೆಗಳ ವಿಚಾರವಾಗಿ ಅಪ್ಪಟಸುಳ್ಳನ್ನು ಹೇಳುತ್ತಾ ಸಮಸ್ತರನ್ನೂ ವಂಚಿಸಲು ಪ್ರಯತ್ನಪಡುತ್ತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆಷಾಢಭೂತಿತನದ ಉಳಿವು ಸುಳ್ಳಿನಿಂದ ತಾನೆ ?

ಅಧ್ಯಾಯ : ಇಪ್ಪತ್ತೊಂಬತ್ತು

# ಸಂಕೀರ್ಣ ವಿಷಯಗಳು

## ಚಾತುರ್ಮಾಸದ ತಂತ್ರ

ವಿದ್ಯಾನಂದರು 1963ರಿಂದ ಹಿಡಿದು 1978 ಅವಧಿಯಲ್ಲಿ ದೆಹಲಿಯಲ್ಲಿ ಐದು ಬಾರಿ ಚಾತುರ್ಮಾಸ ಮಾಡಿದ್ದಾರೆ. ಹೆಚ್ಚು ಕಡಿಮೆ ತಮ್ಮ ಮುನಿವೇಷದ ಮೂರನೇ ಒಂದುಭಾಗ ಕಾಲವನ್ನು ದೆಹಲಿಯಲ್ಲಿಯೇ ಕಳೆದಂತಾಯಿತು. ಹೀಗೆ ಒಂದೇ ಸ್ಥಳವನ್ನು ಪದೇ ಪದೇ ವಾಸಕ್ಕೆ ಬಯಸುವುದು ಮುನಿಗಳು ಪಾಲಿಸಬೇಕಾದ ಅಪರಿಗ್ರಹ ತತ್ವಕ್ಕೆ ವಿರುದ್ಧವಾಗುತ್ತದೆ, ಮುನಿಗಳು ಪೂರ್ಣವಾಗಿ ಬಿಡಬೇಕಾದ ಹತ್ತು ಬಾಹ್ಯ ಪರಿಗ್ರಹ

ಗಳಲ್ಲಿ ಕ್ಷೇತ್ರಪರಿಗ್ರಹವೂ ಒಂದಾಗಿದೆ. ಮುನಿಗಳಾದವರು ಒಂದೇ ಕ್ಷೇತ್ರವನ್ನು ಚಾತು ರ್ಮಾಸದ ನೆಪದಲ್ಲಿ ಆಗಾಗ್ಗೆ ಬಯಸುವುದು ಕ್ಷೇತ್ರಪರಿಗ್ರಹದ ಬುದ್ಧಿಯಲ್ಲದೆ ಬೇರೇನು ? ದೆಹಲಿಯಾದ ಮೇಲೆ ದೆಹಲಿಯ ಸುತ್ತಮುತ್ತಲ ಪ್ರದೇಶದಲ್ಲಿಯೇ 7-8 ಚಾತುರ್ಮಾಸಗಳನ್ನು ನಡೆಸಿದ್ದಾರೆ.

ವಿದ್ಯಾನಂದರ ಚಾತುರ್ಮಾಸಗಳ ರಹಸ್ಯವೆಂದರೆ ತಾವು ಎಲ್ಲಿ ಚಾತುರ್ಮಾಸದ ನಾಟಕವಾಡಬೇಕೆಂಬುದನ್ನು ವಿದ್ಯಾನಂದರೇ ಮೊದಲು ನಿರ್ಧರಿಸುತ್ತಾರೆ. ಅನಂತರ ಆ ಸ್ಥಳಗಳಿಂದ ವಿಧ್ಯುಕ್ತವಾಗಿ ಆಹ್ವಾನಗಳು ಬರುವಂತೆ ಕುಟಿಲ ತಂತ್ರಗಳನ್ನು ಮಾಡು ತ್ತಾರೆ. ಇವರ ಕುಯುಕ್ತಿಗಳನ್ನು ತಿಳಿಯದವರು ಇವರಿಗೆ ಆಹ್ವಾನ ನೀಡುತ್ತಾರೆ. ವಿದ್ಯಾನಂದರು ದೆಹಲಿ ಮತ್ತು ಅದರ ಸುತ್ತಮುತ್ತಲಿನ ಊರುಗಳಲ್ಲಿ ಇರುತ್ತಿದ್ದ ಸಮಯದಲ್ಲಿ ಅನೇಕ ಕಳ್ಳಸಾಗಣೆದಾರರು ಮತ್ತು ಕಳ್ಳ ವ್ಯಾಪಾರಿಗಳ ನಿಕಟ ಸಂಪರ್ಕ ಇವರಿಗಿತ್ತು. ಇವರೆಲ್ಲಾ ವಿದ್ಯಾನಂದರಿರುತ್ತಿದ್ದ ಸರ್ಪಕಾವಲಿನ ಭವನವನ್ನು ತಮ್ಮ ಚಿನ್ನ ವಜ್ರ ಮುಂತಾದ ಕಳ್ಳಸಾಗಣೆಯ ವಸ್ತುಗಳನ್ನು ತಾತ್ಕಾಲಿಕವಾಗಿ ಸಂಗ್ರಹಿಸಿಟ್ಟು ಕೊಳ್ಳಲು ಉಪಯೋಗಿಸಿಕೊಳ್ಳುತ್ತಿದ್ದರು. 1976ರ ಸಮಯದಲ್ಲಿ ದೇಶಾದ್ಯಂತ ಅನೇಕ ಕುಖ್ಯಾತ ಕಳ್ಳಸಾಗಣೆದಾರರ ಬಂಧನವಾದಾಗ ವಿದ್ಯಾನಂದರು ತಮ್ಮ ಅನೇಕ ಕಳ್ಳವ್ಯಾಪಾರಿಗಳು ಮತ್ತು ಕಳ್ಳಸಾಗಣೆಯ ಶಿಷ್ಯರನ್ನು ತಲೆ ಮರೆಸಿಕೊಳ್ಳಲು ಶ್ರವಣ ಬೆಳಗೊಳಕ್ಕೆ ಕಳುಹಿಸಿಕೊಟ್ಟಿದ್ದರು ಭಕ್ತರಾದ ಯಾತ್ರಾರ್ಥಿಗಳ ವೇಷದಲ್ಲಿರುತ್ತಿದ್ದ ಇವರಿಗೆ ಶ್ರವಣಬೆಳಗೊಳದಲ್ಲಿ ಆದರೋಪಚಾರಗಳು ಆಗ ಬಹಳ ಚೆನ್ನಾಗಿ ನಡೆದುವು. ಈ ಕಳ್ಳ ವಹಿವಾಟುದಾರರು ಇಳಿದುಕೊಂಡಿದ್ದ ಕೊಠಡಿಯೊಳಕ್ಕೇ ಊಟ ತಿಂಡಿ ತೀರ್ಥ ಗಳ ಸರಬರಾಜು ಆಸಕ್ತರಿಂದ ಆಗುತ್ತಿತ್ತು.

ದೆಹಲಿ ಮತ್ತು ಅದರ ಸುತ್ತಮುತ್ತಲ ಊರುಗಳಲ್ಲಿಯೇ ವಿದ್ಯಾನಂದರು ಬೀಡು ಬಿಡಲು ಮತ್ತೊಂದು ಪ್ರಬಲವಾದ ಕಾರಣವೆಂದರೆ ತಾವು ಗೋಪ್ಯವಾಗಿ ಸಂಪರ್ಕ ವಿಟ್ಟುಕೊಂಡ ಅನೇಕ ಊರುಗಳ ಶ್ರೀಮಂತ ಸ್ತ್ರೀಯರನ್ನು ಪದೇ ಪದೇ ಭೇಟಿ ಮಾಡು ವುದಾಗಿತ್ತು. ಹತ್ತಿರದ ಊರುಗಳಲ್ಲಿರುವ ಇವರ ಕಾಮಿನಿಯರು ಒಂದು ದಿನದೊಳಗೆ ಇವರಿರುವ ಊರಿಗೆ ಬಂದು ಇವರನ್ನು ಭೇಟಿಯಾಗಿ ಅದೇ ದಿನ ಹಿಂತಿರುಗಲು ಇವರ ಚಾತುರ್ಮಾಸ ತಂತ್ರದಿಂದ ಅವಕಾಶವಾಗುತ್ತಿತ್ತು. ಹೆಚ್ಚು ಸ್ವಾತಂತ್ರ್ಯವಿರುವ ಸ್ವೈರಿಣಿಯರಾದ ಕೆಲವು ಶ್ರೀಮಂತ ಹೆಂಗಸರು 1980-81ರ ಅವಧಿಯಲ್ಲಿ ಶ್ರವಣ ಬೆಳಗೊಳಕ್ಕೂ ಸಹ ಬಂದು ವಿದ್ಯಾನಂದರೊಂದಿಗೆ ಏಕಾಂತದಲ್ಲಿ ಕಾಲಕಳೆದು ಹೋಗು ತ್ತಿದ್ದುದು ಈಗ ಗುಪ್ತವಾಗಿಯೇನೂ ಉಳಿದಿಲ್ಲ. ಇದು ಈಗಲೂ ಸಹ ಮುಂದು ವರೆದುಕೊಂಡು ಹೋಗುತ್ತಿದೆ.

ಶ್ರವಣಬೆಳಗೊಳದಲ್ಲಿ ಸತತವಾಗಿ ಎರಡು ವರ್ಷಗಳ ಕಾಲ ಚಾತುರ್ಮಾಸಮಾಡಲು ಹಣದ ಲೋಭ ಮತ್ತು ಕೀರ್ತಿಕಾಂಕ್ಷೆಗಳೂ ಪ್ರಧಾನ ಕಾರಣ. ಮಹಾಮಸ್ತಕಾಭಿಷೇಕದ ಸಮಯದಲ್ಲಿ ಕ್ಷೇತ್ರಕ್ಕೆ ಹರಿದುಬಂದ ಹಣದಲ್ಲಿ ಸುಮಾರು ಐವತ್ತು ಲಕ್ಷ ರೂಪಾಯಿಗಳಷ್ಟು ಹಣವನ್ನು ವಿದ್ಯಾನಂದರು ವಿವಿಧ ಟ್ರಸ್ಟುಗಳು ಮತ್ತು ಸಮಾಜಾಭಿವೃದ್ಧಿಯ ಹೆಸರಿನಲ್ಲಿ ತಮ್ಮ ಹತೋಟಿಗೆ ಒಳಪಡಿಸಿಕೊಂಡಿದ್ದಾರೆ. ಇದಕ್ಕೆ ಇವರ ಕೆಲವು ದಳ್ಳಾಳಿಗಳು ನೆರವಾಗಿದ್ದಾರೆ. ಕ್ಷೇತ್ರದ ಪರವಾಗಿ ಹಣಸಂಗ್ರಹ ಮಾಡುವ ತನ್ನ ಪರಮಾಧಿಕಾರವನ್ನು ಕ್ಷೇತ್ರದ ಎಸ್.ಡಿ.ಜೆ.ಎಂ.ಐ. ಮೇನೇಜಿಂಗ್ ಕಮಿಟಿ ಬೇರೆ ಟ್ರಸ್ಟುಗಳು ಮತ್ತು ಖಾಸಗಿ ವ್ಯಕ್ತಿಗಳಿಗೆ ವಹಿಸಿಕೊಟ್ಟು ಅದು ಅವರಲ್ಲಿಯೇ ಉಳಿಯಲು ಬಿಟ್ಟು ಕೈಕಟ್ಟಿ ಕುಳಿತಿದೆ. ಕ್ಷೇತ್ರದ ಕಮಿಟಿ ಈ ರೀತಿ ಮೋಸದ ವ್ಯವಹಾರಗಳಿಗೆ ಪ್ರತಿಭಟನೆ ತೋರದೆ ಸಹಕಾರ ನೀಡುತ್ತಾ ಏನೂ ಗೊತ್ತಿಲ್ಲದಂತೆ ಸುಮ್ಮನಿರುವುದನ್ನು ನೋಡಿದರೆ ವಿದ್ಯಾನಂದರು ಮತ್ತು ಚಾರುಕೀರ್ತಿಗಳು ಒಂದಾಗಿ ಕಮಿಟಿಯಲ್ಲಿರುವ ಕಾರ್ಯದರ್ಶಿ ಮತ್ತು ಬಹುಪಾಲು ಸದಸ್ಯರಿಗೆ ಹಾಕಿರುವ ಮಂಕುಬೂದಿ ಎಷ್ಟು ದಟ್ಟವಾದುದು ಎಂಬುದು ಮನವರಿಕೆಯಾಗುತ್ತದೆ.

ಮಾರಕತೆಯಲ್ಲಿ ತಾರಕಕ್ಕೇರಿದ ಈ ಕಲಿಗಾಲದ ತಪಸ್ವಿಯ ಇತ್ತೀಚಿನ 1982ರ ಕೋಥಳಿಯ ಚಾತುರ್ಮಾಸದ ನಾಟಕ ಈಗ ನಡೆಯುತ್ತಿದೆ. ಇದಾದ ನಂತರ ಇವರು ಮತ್ತೆಲ್ಲೆಲ್ಲಿ ವಾಸ್ತವ್ಯ ಹೂಡುತ್ತಾ ಮತ್ತಾವ ಬಗೆಬಗೆಯ ಹೊಸ ನಾಟಕಗಳನ್ನು ಆಡುತ್ತಾರೆಂಬುದನ್ನು ಕಾದು ನೋಡಬೇಕು.

## ರಾತ್ರಿ ಮಾತು

ದಿಗಂಬರ ಮುನಿಗಳು ಅಹಿಂಸೆಯನ್ನು ಮಹಾವ್ರತವಾಗಿ ಆಚರಿಸುವುದರಿಂದ ಅವರು ಸೂರ್ಯಾಸ್ತವಾಗುತ್ತಿದ್ದಂತೆಯೇ ಮೌನಾಚರಣೆಗೆ ತೊಡಗುತ್ತಾರೆ. ಅವರು ವಾಸಿಸುವ ಕಡೆ ದೀಪವನ್ನೂ ಸಹ ಉರಿಸುವುದಿಲ್ಲ. ಮತ್ತೆ ಸೂರ್ಯೋದಯವಾದ ಮೇಲೆಯೇ ಅವರು ಮೌನವನ್ನು ತ್ಯಜಿಸುತ್ತಾರೆ. ಸೂಕ್ಷ್ಮಜೀವಿಗಳ ಮೇಲಾಗುವ ಹಿಂಸೆಯನ್ನು ತಡೆಗಟ್ಟುವುದೇ ಈ ಆಚರಣೆಗಳ ಉದ್ದೇಶ.

ವಿದ್ಯಾನಂದರು ಸೋಗಿನ ಮುನಿಗಳಾಗಿರುವುದರಿಂದ ಅವರು ರಾತ್ರಿ ಮೌನವನ್ನು ಆಚರಿಸುವುದಿಲ್ಲ. ಮೌನಾಚರಣೆಯ ಸೋಗನ್ನು ಕೆಲವು ಕಡೆ ಹಾಕುವುದೂ ಉಂಟು. ರಾತ್ರಿ ಅಗತ್ಯವಿರುವಷ್ಟು ಕಾಲ ದೀಪವನ್ನು ಉರಿಸುತ್ತಾ ಸ್ತ್ರೀಪುರುಷರೆಂಬ ಭೇದವಿಲ್ಲದೆ ತಮಗಿಷ್ಟ ಬಂದವರೊಡನೆ ಏಕಾಂತದಲ್ಲಿ ತಮ್ಮ ವ್ಯವಹಾರಗಳ ವಿಚಾರವಾಗಿ ಮಾತನಾಡುವುದು, ಮಂತ್ರಾಲೋಚನೆ ಮಾಡುವುದು ವಿದ್ಯಾನಂದರ ನಿತ್ಯವಿಧಿಗಳಾಗಿವೆ.

ವಿದ್ಯಾನಂದರು ವಾಸಿಸುವ ಬಂಗಲೆಗಳಲ್ಲಿ ಫ್ಯಾನುಗಳು ಮತ್ತು ಹವಾನಿಯಂತ್ರಣ ವ್ಯವಸ್ಥೆಗಳನ್ನೇರ್ಪಡಿಸುವುದೂ ಈಗ ಸಾಮಾನ್ಯವಾಗಿಬಿಟ್ಟಿದೆ.

**ಈರ್ಯಾ ಸಮಿತಿ**

ಜೀವಗಳು ಇಲ್ಲದಿರುವ ದಾರಿಯಲ್ಲಿ ನಾಲ್ಕು ಮೊಳದಷ್ಟು ದೂರ ಮುಂದೆ ನೋಡಿ ಸೂಕ್ಷ್ಮಜೀವಿಗಳಿಗೂ ಹಿಂಸೆಯಾಗದಂತೆ ನಡೆಯುವುದು ಈರ್ಯಾಸಮಿತಿಯಾಗಿದೆ. ವಿದ್ಯಾನಂದರು ನಡೆಯುವ ರಭಸ, ವೇಗ, ನಡೆಯುವಾಗಿನ ಅವರ ದೃಷ್ಟಿ ಇವುಗಳನ್ನೆಲ್ಲಾ ಗಮನಿಸಿದವರು ವಿದ್ಯಾನಂದರು ಈರ್ಯಾಸಮಿತಿಯನ್ನು ಪಾಲಿಸುತ್ತಿಲ್ಲ ಎಂದು ಸುಲಭವಾಗಿ ಹೇಳುತ್ತಾರೆ.

**ಭಾಷಾಸಮಿತಿ**

ಸುಳ್ಳು, ದೋಷ ಹೊರಿಸುವ ಪಿಶುನತನ, ಕಠೋರವಚನ, ಪರನಿಂದೆ, ತನ್ನ ಪ್ರಶಂಸೆ, ಸ್ತ್ರೀಕಥೆ, ಭೋಜನಕಥೆ, ರಾಜಕಥೆ, ಚೋರಕಥೆ ಮುಂತಾದ ಮಾತುಗಳನ್ನು ತ್ಯಜಿಸಿ ತನ್ನ ಮತ್ತು ಅನ್ಯರ ಆತ್ಮಹಿತಕ್ಕಾಗಿ ಮಾತ್ರ ಮಾತುಗಳನ್ನಾಡುವುದು ದಿಗಂಬರ ಮುನಿಗಳು ಆಚರಿಸಲೇಬೇಕಾದ ಮೂಲಗುಣವಾದ ಭಾಷಾಸಮಿತಿಯಾಗಿದೆ ವಿದ್ಯಾನಂದರು ತಾ। 14-7-1980 ರಂದು ಬೆಳ್ಳೂರಿನ ಬಹಿರಂಗ ಸಭೆಯಲ್ಲಿ ಮಾಡಿದ ಭಾಷಣದಲ್ಲಿ ಅವರು ಉಪಯೋಗಿಸಿರುವ ಭಾಷೆ ಅವರು ಭಾಷಾಸಮಿತಿಗೆ ಎಂತಹ ದೊಡ್ಡ ಶತ್ರು ಎಂಬುದನ್ನು ಸ್ಪಷ್ಟಪಡಿಸುತ್ತದೆ. ವಿದ್ಯಾನಂದರ ಭಾಷಣದ ಭಾಗ ಕೆಳಗಿನಂತಿದೆ.

"ಶ್ರವಣಬೆಳಗೊಳದಲ್ಲಿ ಮೂವರು ವ್ಯಕ್ತಿಗಳು ತೊಂದರೆ ಕೊಡುತ್ತಿದ್ದಾರೆ. ಡಾ॥ ಸುರೇಂದ್ರ, ಮೈಸೂರು ಶಾಂತರಾಜರು ಇವರೊಡನೆ ಚಂದ್ರಯ್ಯ ಈ ಮೂವರು. ನಮ್ಮ ಸಮಾಜದವರೆಲ್ಲರೂ ಸೇರಿಕೊಂಡು ಅವರನ್ನು ಸರಿಮಾಡಬೇಕು. ಕಾಲೇಜ್ ಬಂದ್ ಮಾಡಿದ್ದಾರೆ. ಅವರು ಅದರ ಲೆಕ್ಕ ಕೊಡುವುದಿಲ್ಲ. ಉತ್ತರ ದೇಶದವರು ಅವರು ದುಡ್ಡು ಕೊಟ್ಟಿದ್ದಾರೆ. ಯಾತಕ್ಕೆ ಬಂದು ಮಾಡಿದರು ಅಂತ, ಅವರನ್ನು ವಿಚಾರ ಮಾಡಬೇಕು. ಬೆಳ್ಳೂರಲ್ಲಿ ಇಡೀ ಕರ್ನಾಟಕದ ತರುಣರು ಎಲ್ಲಾ ಬಂದು ಸೇರಿಕೊಂಡು 22ನೇ ತಾರೀಖು ವಿಚಾರ ಮಾಡಬೇಕು. ಯಾಕೆಂದರೆ ಶ್ರವಣಬೆಳಗೊಳದಲ್ಲಿ ಕಿತಾಪತಿ ನಡೀತಿದೆ. ವಿಚಾರ ಮಾಡಬೇಕು ತಿಳಿತೇನ್ ಎಲ್ರೂ ಬಂದ್ ವಿಚಾರ ಮಾಡಬೇಕು. ಶ್ರವಣಬೆಳಗೊಳವನ್ನು ಹಾಳು ಮಾಡುತ್ತಿದ್ದಾರೆ. ಭಾರಿ ಕಿತಾಪತಿ ಮಾಡಿದ್ದಾರೆ ಮೈಸೂರಿನವರು. ನಾನು ಕರ್ನಾಟಕಕ್ಕೆ ಬರುವುದಿಲ್ಲವೆಂದು ಕುಳಿತೆ, ಈಗ ಸ್ವಾಮಿಗಳಿಗೆ ತೊಂದರೆ ಕೊಡುತ್ತಿದ್ದಾರೆ ಮೈಸೂರು ನಗರದವರು. ಶ್ರವಣಬೆಳಗೊಳವನ್ನು ನಾಶಮಾಡುತ್ತಿದ್ದಾರೆ ಮೈಸೂರು ನಗರದವರು. ನಾಳೆ ವಿಚಾರ ಮಾಡಬೇಕು ನಾನು ಬಿಡೋಹಾಗಿಲ್ಲ ಬಿಡೋದಿಲ್ಲ. 21ನೇ ತಾರೀಖು ಚೀಫ್ ಮಿನಿಸ್ಟರ್ ಬರುತ್ತಾರೆ ಅವರ ಎದುರಿನಲ್ಲಿ ಎಲ್ಲಾ ಸ್ಪಷ್ಟವಾಗಿ ಹೇಳಿ ಬಿಡ್ತೀನಿ. ನಾನು ಬಿಡೋದಿಲ್ಲ. ಯಾಕೆಂದರೆ, ಸಮಾಜದ್ರೋಹ ಮಾಡತಕ್ಕ ಜನರಲ್ಲಿ ಒಂದು ಹುಳು

ಬಿದ್ದರೆ ಎಲ್ಲಕ್ಕೂ ಹುಳ ಆಗುತ್ತದೆ. ಈ ವಿಷಯದಲ್ಲಿ ಒಟ್ಟುಗೂಡಿ ನಾವು ನಡಸ್ತೀವಿ. ಎಲ್ಲರನ್ನೂ ಭಟ್ಟಾಚಾರ್ ಮಾಡುತ್ತಾರೆ. ಬಿಟ್ಟುಕೊಡಿ ನಾವು ಮಾಡ್ತೀವಿ ವ್ಯವಸ್ಥೆಯ. 22ನೇ ತಾರೀಖು ಮಧ್ಯಾಹ್ನದ ಹೊತ್ತಿಗೆ ನಾಲ್ಕುಜನ ಭಟ್ಟಾಚಾರ್‌ರೊಡನೆ ವಿಚಾರಿಸಿ ಕರೆದು ವಿಚಾರಣೆ ಮಾಡಿ ವಿವರಿಸ್ತೀನಿ. ನಾನು ಬಿಡೋಹಾಗಿಲ್ಲ. ಕ್ಷಮೆ ಮಾಡೋದಾದರೂ ಕ್ಷಮೆ ಮಾಡೋದಿಲ್ಲ. ದುರ್ವ್ಯವಹಾರ ಇದರಲ್ಲಿ ಕಳಂಕ ಇಡೀ ಮನಸ್ಸು ಇಲ್ಲಿ ಮನಸ್ಸು ಕ್ಲೇಶ ತಳೆದಿದೆ. ಮನಸ್ಸು ಸ್ವಚ್ಛ. ನಾನು ನಿಮಗಾಗಿ ಹೇಳಬೇಕಾಗಿತ್ತು. ನಾನು ಸ್ಪಷ್ಟ ಅಂದರೆ ಸ್ಪಷ್ಟ. ರಾಜನಾಗಲೀ, ಚಕ್ರವರ್ತಿಯಾಗಲೀ, ಶ್ರವಣಬೆಳಗೊಳ ಉದ್ಧಾರವಾಗಬೇಕಾದರೆ, ಕರ್ನಾಟಕ, ಉತ್ತರಭಾರತ. ಉತ್ತರಭಾರತ ಪ್ರದೇಶದಿಂದ ಮೂವತ್ತೆರಡು ಲಕ್ಷ ರೂಪಾಯಿ ಕೊಟ್ಟಿದ್ದಾರೆ. ಕುಮ್ಮಕ್ಕು ಮಾಡಿದ್ದಾರೆ. ಇದರ ಬಗ್ಗೆ ಸಮಾಜ ವಿಚಾರಿಸಬೇಕು.

ಶಾಂತರಾಜರು ಏನೋ ದುಡ್ಡಿದೇಂದು ಹೇಳಿ ಮೋಸಾನೇ ಮಾಡುತ್ತಿದ್ದಾರೆ. ಅವರು ಬಹಳ ಕಿತಾಪತಿ ಮಾಡುತ್ತಿದ್ದಾರೆ. ಒಂದು ವರ್ಷದಿಂದ ಹಿಂಸೆ ಮಾಡುತ್ತಿದ್ದಾರೆ ಸ್ವಾಮಿಗಳಿಗೆ. ನಿಮಗೆ ಯಾರಿಗೂ ಗೊತ್ತಿಲ್ಲ ಅವರು ಏನು ಮಾಡುತ್ತಿದ್ದಾರೆಂದರೆ ಅವರ ಹತ್ತಿರ ಇರತಕ್ಕಂಥ ಹಣವನ್ನೆಲ್ಲಾ ನಮ್ಮ ಕೈಯಲ್ಲಿ ಕೊಡಿ, ನಾನು ಬೇಕಾದ ಹಾಗೆ ಖರ್ಚು ಮಾಡಬೇಕೂಂತ ದುರ್ಬುದ್ಧಿ. ಇಲ್ಲಿ ನೆರೆದಿರತಕ್ಕ ಪ್ರಮುಖರಿಗೆ ನಿಮ್ಮದಾಗಿ ಹೇಳುತ್ತೀನಿ, ನೀವು ಉತ್ತರ ಪ್ರದೇಶಕ್ಕೆ ಹೋಗಿ......."

ವಿದ್ಯಾನಂದರ ಭಾಷಣದ ಈ ಭಾಗವನ್ನೊಳಗೊಂಡ ಪೂರ್ಣಭಾಷಣ ಧ್ವನಿಮುದ್ರಣವಾಗಿದೆ. ವಿದ್ಯಾನಂದರ ಮೇಲಿನ ಮಾತುಗಳನ್ನು ಓದಿದರೆ ವಿದ್ಯಾನಂದರು ಭಾಷಾ ಸಮಿತಿಯ ಶತ್ರು ಮಾತ್ರವಲ್ಲ ಅವರು ಮುನಿಧರ್ಮದ ಎಂತಹ ದೊಡ್ಡ ಶತ್ರು, ಮತ್ತು ಮಾನವ ಕುಲಕ್ಕೇ ಎಂತಹ ದೊಡ್ಡ ಶತ್ರು ಎಂಬುದು ಅರ್ಥವಾಗುತ್ತದೆ. ಇನ್ನೊಬ್ಬರ ಮೇಲೆ ಸುಳ್ಳು ಆಪಾದನೆ ಹೊರಿಸಿ "ನಾನು ಅವರನ್ನು ಬಿಡುವುದಿಲ್ಲ, ನಾನು ಸ್ಪಷ್ಟ ಎಂದರೆ ಸ್ಪಷ್ಟ" ಎಂದು ಬಹಿರಂಗವಾಗಿಯೇ ಹೇಳುವ ವಿದ್ಯಾನಂದರು ತಾವು ಹೊರಿಸಿದ ಆಪಾದನೆಗಳನ್ನು ರುಜುವಾತುಪಡಿಸಲು ಅಸಮರ್ಥರಾಗಿರುವುದು ಮತ್ತು ತಮ್ಮ ಮೇಲೆಯೇ ಆಪಾದನೆಗಳು ಪುಸ್ತಕರೂಪದಲ್ಲಿ[1] ಆಧಾರಯುತವಾಗಿ ಬಂದಾಗ ಅವುಗಳಿಂದ ತಲೆತಪ್ಪಿಸಿಕೊಂಡು ಓಡಾಡುತ್ತಿರುವುದು ಎಂತಹ ವಿಪರ್ಯಾಸದ ಸಂಗತಿ !

---

1. 'ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ ?'—ಬಿ.ಎಸ್. ನಂದಕುಮಾರ್—ಈ ಪುಸ್ತಕ ನೋಡಿ.

## ವೈರಾಗ್ಯ

ಚಲಿಸುವ ಒಂದು ಮೋಡವನ್ನು ಕಂಡಾಗ, ತಲೆಯಲ್ಲಿನ ಒಂದು ಬಿಳಿ ಕೂದಲನ್ನು ನೋಡಿದಾಗ, ಮಳಿಬಿಲ್ಲಿನ ನಶ್ವರತೆಯು ಅರಿವಾದಾಗ ಪ್ರಾಪಂಚಿಕ ವಿಷಯಗಳನ್ನೂ ಭೋಗಭಾಗ್ಯಗಳನ್ನೂ ತೊರೆದು ವಿರಕ್ತರಾದ ರಾಜ ಮಹಾರಾಜ ಮತ್ತಿತರರ ಕಥೆ ಗಳನ್ನು ಕವಿಗಳು ವರ್ಣಿಸಿದ್ದಾರೆ. ಹೀಗೆ ಸಮಸ್ತ ಭೋಗಭಾಗ್ಯಗಳು ಇದ್ದು ವಿರ ಕ್ತಿಯ ಭಾವನೆಯಿಂದ ಅವುಗಳನ್ನೆಲ್ಲಾ ತ್ಯಜಿಸಿ ಆತ್ಮ ಮಾರ್ಗವನ್ನು ಹಿಡಿದವರು ಈ ಕಾಲದಲ್ಲಿ ಇದ್ದಾರೆಯೇ ಎಂಬುದು ಸಂಶಯಾಸ್ಪದ.

ವಿದ್ಯಾನಂದರಾದರೋ ಮಿತಿಮೀರಿದ ಭೋಗಭಾಗ್ಯಸುಖಗಳನ್ನು ಬಯಸಿ ಅವು ಗಳನ್ನು ಈಡೇರಿಸಿಕೊಳ್ಳಲು ಗೃಹತ್ಯಾಗ ಮಾಡಿ ಸೋಗಿನ ಸನ್ಯಾಸಿಗಳಾಗಿ ಗೃಹವಾಸಿ ಗಳಾದವರು. ಇವರಲ್ಲಿ ವೈರಾಗ್ಯವಿದೆಯೇ ಎಂದು ಟಾರ್ಚ್‌ಲೈಟ್ ಹಾಕಿ ಹುಡುಕಿ ದರೂ ಅದೇನೂ ಕಾಣದು. ಅಲ್ಲಿ ಕಾಣುವುದೆಲ್ಲ ಮೋಸ ವಂಚನೆ ಪಿತೂರಿ ಕುತಂತ್ರ ರಾಗ ದ್ವೇಷ ಮುಂತಾದವುಗಳೇ.

ಗೃಹತ್ಯಾಗ ಮಾಡಿದ ಮೇಲೆ ದ್ವಾರಪಾಲಕನ ವ್ಯವಸ್ಥೆಯೊಂದಿಗೆ ಸುಸಜ್ಜಿತ ಬಂಗಲೆಗಳಲ್ಲಿ ವಾಸಮಾಡುವುದು ವೈರಾಗ್ಯದ ಲಕ್ಷಣವಲ್ಲ. ಸರ್ವಸಂಗ ಪರಿತ್ಯಾಗಿ ಯೆನಿಸಿಕೊಂಡ ಮೇಲೆ ಬಾಲ್ಯಕಾಲದ ಸ್ನೇಹಿತರನ್ನು ಸದಾ ತಮ್ಮ ಜೊತೆಯಲ್ಲಿಟ್ಟು ಕೊಂಡಿರುವುದು. ಅವರ ಮೂಲಕ ತಮ್ಮ ಎಲ್ಲಾ ಬಗೆಯ ಅಗತ್ಯಗಳನ್ನೂ ನೆರವೇರಿಸಿ ಕೊಳ್ಳುತ್ತಿರುವುದು ತ್ಯಾಗದ ಲಕ್ಷಣವಲ್ಲ. ತಾವು ನಡೆದು ಮುಂದೆ ಮುಂದೆ ಹೋಗು ತ್ತಿರುವಾಗ ಆಹಾರ ಸಾಮಗ್ರಿ ಮತ್ತಿತರ ಪದಾರ್ಥಗಳನ್ನು ಒಂದು ವಾಹನದಲ್ಲಿ ತುಂಬಿ ಕೊಂಡು, ಒಂದು ಪರಿವಾರ ಇವರನ್ನು ಹಿಂಬಾಲಿಸುತ್ತಿರುವುದು ಇದಕ್ಕೆ ವಿದ್ಯಾನಂದರು ಯಾವ ಆಕ್ಷೇಪಣೆಯನ್ನೂ ಮಾಡದೆ ಆ ಪರಿವಾರ ಹಿಂಬಾಲಿಸಿ ಬರಲು ಅವಕಾಶಮಾಡಿ ಕೊಟ್ಟಿರುವುದು—ಇವೆಲ್ಲಾ ಕ್ಷುಧಾಪರೀಷಹ, ಚರ್ಯಾಪರೀಷಹಗಳನ್ನು ಸಹಿಸಬೇಕಾದ ವಿರಕ್ತರ ಲಕ್ಷಣವಲ್ಲ.

ಈ ದೇಶದ ಕೋಟ್ಯಾಂತರ ಜನರು ಬಡತನದ ಬೇಗೆಯಲ್ಲಿ ಬೇಯುತ್ತಾ ದಿನ ದಿನದ ಅನ್ನಕ್ಕಾಗಿ ಹಾಹಾಕಾರ ಪಡುತ್ತಿರುವಾಗ, ಮಿತಿಮೀರಿ ಆಸ್ತಿಪಾಸ್ತಿಗಳನ್ನು ಹೊಂದಿರುವ ಲಕ್ಷ್ಮೀಪುತ್ರರುಗಳಲ್ಲಿ ಕೆಲವರು ಲಕ್ಷಾಂತರ ರೂಪಾಯಿಗಳನ್ನು ಸಮಾಜದ ಜನರಿಂದ ಸಂಗ್ರಹಿಸಿ ಅದರಿಂದ ಊರುಗಳಲ್ಲಿ ತಮ್ಮ ಡಂಬಾಚಾರದ ಪ್ರದರ್ಶನಾತ್ಮಕ ಮೆರವಣಿಗೆಗಳನ್ನು ಏರ್ಪಡಿಸಿದಾಗ ವಿದ್ಯಾನಂದರಿಗೆ ಆ ಮೆರವಣಿಗೆಗಳಲ್ಲಿ ಭಾಗವಹಿಸಿ ತಮ್ಮ ದಿಗಂಬರತ್ವವನ್ನು ಮತ್ತಷ್ಟು ಊರುಗಳಲ್ಲಿ ಪ್ರದರ್ಶಿಸುವ ಚಪಲ ಹೆಚ್ಚಾಯಿತೇ ಹೊರತು ವೈರಾಗ್ಯಭಾವನೆ ಎಳ್ಳಷ್ಟೂ ಸುಳಿಯಲಿಲ್ಲ. ಇದರ ಬದಲಾಗಿ ತಮ್ಮ

ಮೆರವಣಿಗೆಗೆ ಹಣದ ಆಕ್ಷೇಪವೆತ್ತಿದವರನ್ನು ಕಾನೂನಿನ ಕೈಗೆ ಸಿಗದ ಹಾಗೆ ಮಣಿಗಿಸಿ ಬಿಡುವ ಹೇಯವಾದ ಕೊಲೆಗಡುಕತನದ ಕುತಂತ್ರಗಳನ್ನು ಮಾಡುವ ನರಭಕ್ಷಕತನವನ್ನು ವಿದ್ಯಾನಂದರು ತೋರಿ ತಮ್ಮಲ್ಲಿ ವೈರಾಗ್ಯಭಾವನೆಯು ಸೂಜಿ ಮೊನೆಯಷ್ಟೂ ಇಲ್ಲ ಎಂಬುದನ್ನು ಸಂಶಯಾತೀತವಾಗಿ ದೃಢಪಡಿಸಿದರು. ಮತ್ತೂ ಹೇಳುವುದಾದರೆ ವಿದ್ಯಾನಂದರ ಕಪಟಜೀವನವನ್ನು ಅವರ ಸ್ಪಷ್ಟಗಮನಕ್ಕೆ ತಂದಿದ್ದರೂ ಅದಕ್ಕೆ ಯಾವ ಸ್ಪಷ್ಟೀಕರಣವನ್ನೂ ನೀಡದೆ ಮುಂದಿನ ಊರುಗಳಲ್ಲಿ ಮತ್ತೆ ಡಂಬಾಚಾರದ ಮೆರವಣಿಗೆ ಮತ್ತು ಪರೋಪದೇಶದಲ್ಲಿ ಅವರು ತೊಡಗಿರುವುದು ಅವರಲ್ಲಿ ಯಾವ ಕಾಲಕ್ಕೂ ವೈರಾಗ್ಯ ಹುಟ್ಟುವುದೇ ಇಲ್ಲ ಎಂಬುದನ್ನು ಸ್ಪಷ್ಟಪಡಿಸಿದೆ.

## ಜೈನಬ್ರಾಹ್ಮಣ

ತಾ. 22–2–1981ನೇ ತಾರೀಖಿನ 'ಸುಧಾ' ವಾರಪತ್ರಿಕೆಯಲ್ಲಿ ವಿದ್ಯಾನಂದರು 'ಕೃಷ್ಣಾ' ಎಂಬುವವರಿಗೆ ನೀಡಿದ ಸಂದರ್ಶನ ಪ್ರಕಟವಾಗಿದೆ. ಇದರಲ್ಲಿ ವಿದ್ಯಾನಂದರು "ನಮ್ಮದು ಜೈನಬ್ರಾಹ್ಮಣವಂಶ" ಎಂದು ತಮ್ಮ ಜಾತಿಯನ್ನು ಗುರುತಿಸಿಕೊಂಡಿದ್ದಾರೆ. ಆದರೆ ಇದೇ ವಿದ್ಯಾನಂದರು ಅನೇಕ ಸಂದರ್ಭಗಳಲ್ಲಿ ಉಪದೇಶ ಮಾಡುವಾಗ "ಪ್ರತಿಯೊಬ್ಬ ಮನುಷ್ಯನಲ್ಲೂ ನಾಲ್ಕು ವರ್ಣಾಶ್ರಮಗಳೂ ಸಮಾವೇಶವಾಗಿವೆ. ಈ ದೇಶದಲ್ಲಿ ಕೀಳು ಮೇಲು ಎಂದು ವಿಂಗಡಣೆ ಮಾಡಿ ನಾವು ಹಾಳಾಗುತ್ತಿರುವೆವು" ಎಂದು ಹೇಳುತ್ತಿರುತ್ತಾರೆ. ಮೇಲಿನ ಮಾತುಗಳು ವಿದ್ಯಾನಂದರ ವ್ಯಕ್ತಿತ್ವದ ವಿರೋಧಾಭಾಸಗಳಿಗೆ ಮತ್ತು ಇಬ್ಬಂದಿತನಕ್ಕೆ ನಿದರ್ಶನವಾಗಿವೆ. ಉಪದೇಶ ಬೇರೆಯವರಿಗೆ ಮಾತ್ರ ತಮ್ಮ ವಿಚಾರಕ್ಕೆ ಬಂದರೆ ಜೈನಬ್ರಾಹ್ಮಣ ಎಂಬ ಮೇಲುತನದ ವಿಗಂಡಣೆ ಆಗತ್ಯ ಎಂಬುದು ವಿದ್ಯಾನಂದರ ಮನೋಧರ್ಮವಾಗಿದೆ. ಮನುಷ್ಯನ ಜಾತಿಯನ್ನು ವಂಶವನ್ನು ಆತನ ಹುಟ್ಟಿನಿಂದ ನಿರ್ಧಾರ ಮಾಡದೆ ಆತನ ಗುಣಗಳಿಂದ ನಿರ್ಧರಿಸಬೇಕೆಂದು ದಾರ್ಶನಿಕರು ಹೇಳುತ್ತಾರೆ. ಈ ದೃಷ್ಟಿಯಿಂದ ವಿದ್ಯಾನಂದರ ನಿಜಜೀವನವನ್ನು ಗಮನಿಸಿದಾಗ ಅವರು ಜೈನರೂ ಅಲ್ಲ ; ಬ್ರಾಹ್ಮಣರೂ ಅಲ್ಲ ; ಜೈನಬ್ರಾಹ್ಮಣರಂತೂ ಅಲ್ಲವೇ ಅಲ್ಲ ಎಂಬುದು ವೇದ್ಯವಾಗುತ್ತದೆ.

## ವಿಶ್ವಧರ್ಮ

ಈ ವಿಶ್ವಧರ್ಮ ಪದದ ಜೊತೆಗೆ ಪ್ರೇರಕ ಎಂಬುದನ್ನು ಸೇರಿಸಿ ವಿಶ್ವಧರ್ಮಪ್ರೇರಕ ವಿದ್ಯಾನಂದ ಎಂದು ಹೇಳುವುದು ಇವರ ಪ್ರಚಾರ ಪತ್ರಗಳ ಸಾಮಾನ್ಯಸಂಗತಿಯಾಗಿದೆ.

'ಜೈನಧರ್ಮ' ಎಂಬುದರ ಸ್ಥಾನದಲ್ಲಿ ಈ 'ವಿಶ್ವಧರ್ಮ' ಎಂಬ ಪದವನ್ನು ವಿದ್ಯಾನಂದರು ಬಳಕೆಗೆ ತರಲು ಪ್ರಯತ್ನಿಸುತ್ತಿದ್ದಾರೆ. ಜಿನರು ಬೋಧಿಸಿದ ಜೈನ

ಧರ್ಮದಲ್ಲಿ ಅಹಿಂಸೆಗೆ ಪ್ರಧಾನಸ್ಥಾನವಿದೆ. ಅಹಿಂಸಾಧರ್ಮದಲ್ಲಿ ಸಕಲ ಜೀವ ಕೋಟಿಗೂ ರಕ್ಷಣೆಯನ್ನು ಪ್ರತಿಪಾದಿಸಲಾಗಿದೆ. ಜೈನಧರ್ಮವನ್ನು ಅಹಿಂಸಾಧರ್ಮ ವೆಂದು ಕರೆದಾಗ ಪರಿಮಿತ ವಿಶ್ವವಲ್ಲದೆ ಅಸ್ತಿತ್ವದಲ್ಲಿರುವ ಸಕಲ ಜಗತ್ತುಗಳ ಜೀವ ರಾಶಿಗೂ ಇದು ಅನ್ವಯವಾಗುತ್ತದೆ. ಈ ದೃಷ್ಟಿಯಿಂದ ಹಿಂದಿನವರು "ಅಹಿಂಸಾ ಪರಮೋಧರ್ಮಃ" ಎಂದು ಕರೆದರು. ಅಹಿಂಸಾಧರ್ಮ ಮತ್ತು ವಿಶ್ವಧರ್ಮ—ಈ ಎರಡು ಪದಗಳ ಅರ್ಥವ್ಯಾಪ್ತಿಯನ್ನು ಗಮನಿಸಿದಾಗ ಅಹಿಂಸಾಧರ್ಮ ಎಂಬ ಪದ ವಿಶ್ವಧರ್ಮ ಎಂಬ ಪದಕ್ಕಿಂತ ಹೆಚ್ಚು ವ್ಯಾಪಕವಾದ ಅರ್ಥಾನುರಣನ ಶಕ್ತಿಯನ್ನು ಪಡೆದಿದೆ. ವಿಶ್ವಧರ್ಮ ಎಂಬುದು ನಮ್ಮ ಅಸ್ತಿತ್ವದ ವಿಶ್ವಕ್ಕೆ ಪರಿಮಿತ ಎಂಬ ಭಾವನೆ ಯನ್ನು ಉಂಟುಮಾಡಿದರೆ ಅಹಿಂಸಾಧರ್ಮ ಪದದ ವ್ಯಾಪ್ತಿ ವಿಶ್ವದ ಪರಿಮಿತ ಎಲ್ಲೆ ಯನ್ನು ದಾಟಿ ಎಲ್ಲೆಲ್ಲಿ ಜೀವರಾಶಿಗಳುಂಟೋ ಅಲ್ಲಿಗೆಲ್ಲಾ ಹರಡುತ್ತದೆ. ಈ ದೃಷ್ಟಿ ಯಿಂದ ಅಹಿಂಸಾಧರ್ಮ ಎಂಬ ಪದ ವಿಶ್ವಧರ್ಮ ಎಂಬ ಪದಕ್ಕಿಂತ ಹೆಚ್ಚು ವ್ಯಾಪಕ ವಾದ ಅರ್ಥವನ್ನು ನೀಡುತ್ತದೆ. ಇಂತಹ ಸಂದರ್ಭದಲ್ಲಿ ಜೈನಧರ್ಮ ಎಂಬ ಪದದ ಬಳಕೆಯನ್ನು ಹೊಸ ಪದದ ವ್ಯಾಮೋಹಕ್ಕೆ ಒಳಗಾಗಿ ಬಿಡಬೇಕಾದುದಿಲ್ಲ. ಏಕೆಂದರೆ ಜೈನ ಧರ್ಮದ ವಿಶೇಷತೆಯನ್ನು ಹೇಳುವ ಸಲುವಾಗಿ ಮಾತ್ರ ಅಹಿಂಸಾಧರ್ಮ ಪದದ ಪ್ರಯೋಗವಾಗಿದೆ.

ವಿದ್ಯಾನಂದರು ಜೈನಧರ್ಮ ಪದದ ಬಳಕೆಯನ್ನು ಪೂರ್ಣವಾಗಿ ತೊರೆದು ಅದರ ಸ್ಥಾನದಲ್ಲಿ "ವಿಶ್ವಧರ್ಮ.. ವಿಶ್ವಧರ್ಮ" ಎಂದು ಹೇಳುವುದರ ಉದ್ದೇಶ ಧರ್ಮ ದೃಷ್ಟಿಗಿಂತಲೂ ಹೆಚ್ಚು ಸ್ವಾರ್ಥದೃಷ್ಟಿಯಿಂದ ಕೂಡಿದೆ. ಬಳಕೆಯಲ್ಲಿರುವ ಪದಕ್ಕೆ ಬದಲಾಗಿ ಯಾವುದಾದರೂ ಒಂದು ಹೊಸ ಶಬ್ದವನ್ನು ಆ ಸ್ಥಾನದಲ್ಲಿ ಉಪಯೋಗಿಸು ವುದರ ಮೂಲಕ ಜನರನ್ನು ದಂಗುಮಾಡಿ ಅವರನ್ನು ತಮ್ಮ ಕಡೆ ಸೆಳೆದುಕೊಂಡು ಆ ಮೂಲಕ ಸಮಸ್ತರನ್ನೂ ಶೋಷಿಸುವುದೇ ವಿದ್ಯಾನಂದರ ಈ ಕಸರತ್ತಿನ ಪ್ರಧಾನ ಉದ್ದೇಶವಾಗಿದೆ. ಇಂತಹ ಬೇಕಾದಷ್ಟು ತಂತ್ರಗಳನ್ನು ಅವರು ಜನರನ್ನು ವಂಚಿಸು ವುದಕ್ಕಾಗಿ ಅಳವಡಿಸಿಕೊಂಡಿದ್ದಾರೆ. ಪಂಚನಮಸ್ಕಾರ ಮಂತ್ರದ ಉಚ್ಚಾರಣೆಯ ವಿಧಾನವನ್ನು ವಿದ್ಯಾನಂದರು ಹಾಳುಗೆಡವಿರುವುದು ಬಹುಜನರ ಗಮನಕ್ಕೆ ಬಂದಂತಿಲ್ಲ. ಪೂರ್ವಾಚಾರ್ಯರು ಹಾಕಿಕೊಟ್ಟ ಸ್ಥಿರವಾದ ಗಂಭೀರವಾದ ಉಚ್ಚಾರಣೆಯ ಪಾವಿತ್ರ್ಯ ತೆಗೆ ಧಕ್ಕೆ ತಗುಲುವಂತೆ ಭಜನೆ ಮತ್ತು ಸಿನಿಮಾಯ ಶೈಲಿಯಲ್ಲಿ ಪಂಚನಮಸ್ಕಾರ ಮಂತ್ರವನ್ನು ವಿದ್ಯಾನಂದರು ಹಾಡುವುದು ಮತ್ತು ಜನರಿಂದ ಹಾಡಿಸುತ್ತಿರುವುದು ಅತ್ಯಂತ ಆಭಾಸಕರವಾಗಿದೆ. ಜನಸಾಮಾನ್ಯರು ಸಿನಿಮಾ ಸಂಗೀತವನ್ನು ಮೆಚ್ಚುವಂತೆ ಈ ಬದಲಾವಣೆಯನ್ನೂ ಮೆಚ್ಚಿಕೊಂಡಿರುವುದರಲ್ಲಿ ಆಶ್ಚರ್ಯವೇನಿಲ್ಲ. ಈ ಸ್ವೇಚ್ಛಾ ಪ್ರವೃತ್ತಿಯನ್ನು ದೃಢವಾಗಿ ವಿರೋಧಿಸದೇ ಹೋದರೆ ಪಂಚನಮಸ್ಕಾರ ಮಂತ್ರದ ಪಾವಿತ್ರ್ಯತೆಯನ್ನು ಪೂರ್ಣವಾಗಿ ಹಾಳುಗೆಡವಿ ಸಿನಿಮಾಯವಾದ ಕುಣಿತದೊಂದಿಗೆ ಅದನ್ನು ಹಾಡುವ ಕಾಲವೂ ದೂರವಿಲ್ಲದಂತಾಗುತ್ತದೆ.

ಸರ್ವಧರ್ಮ ಸಮನ್ವಯಾಚಾರ್ಯ ಎಂದು ಪ್ರಚಾರ ಮಾಡಿಸಿಕೊಳ್ಳುವುದು, ಬಸದಿಗಳ ಗೋಡೆಗಳ ಮೇಲೆ ತಮ್ಮ ಭಾವಚಿತ್ರವನ್ನು ಬರೆಸುವುದು, ತಮ್ಮ ಭಾವ ಚಿತ್ರವಿರುವ ನಾಣ್ಯಗಳನ್ನು ಮುದ್ರಿಸಲು ವ್ಯವಸ್ಥೆ ಮಾಡುವುದು, ಗೋಡೆಗಳ ಮೇಲೆ ತಮ್ಮ ಭಾವಚಿತ್ರದೊಂದಿಗೆ ತಮ್ಮ ಬಗ್ಗೆ ಪ್ರಚಾರ ಮಾಡುವ ಭಿತ್ತಿಪತ್ರಗಳನ್ನು ಹಚ್ಚಿ ಸುವುದು, ಫೋಟೋಗ್ರಾಫರನೊಬ್ಬನನ್ನು ಸಾಕಿಕೊಂಡು ಅವನ ಮೂಲಕ ನಾನಾಭಂಗಿ ಗಳಲ್ಲಿ ಫೋಟೋ ತೆಗೆಸಿಕೊಂಡು ಅವುಗಳನ್ನು ಮಾರಾಟಕ್ಕಿಡಿಸುವುದು ಮುಂತಾದ ಸ್ವಪ್ರತಿಷ್ಠೆಯನ್ನು ಬೆಳೆಸುವ ಕಾರ್ಯಗಳ ಮೂಲಕ ಜನರನ್ನು ದಂಗುಬಡಿಸಿ ಆ ಮೂಲಕ ಅವರನ್ನು ಧರ್ಮದ ಹೆಸರಿನಲ್ಲಿ ನಾನಾ ರೀತಿಯಿಂದ ಶೋಷಿಸುವುದೇ ವಿದ್ಯಾ ನಂದರ ಪರಮ ಜೀವನಧರ್ಮವಾಗಿದೆ.

## ಮಾತನಾಡುವ ಗೊಮ್ಮಟ

ವಿದ್ಯಾನಂದರು ಶ್ರವಣಬೆಳಗೊಳಕ್ಕೆ ಬರುವ ಸಮಯದಲ್ಲಿ ಬಹುಶಃ ವಿದ್ಯಾನಂದ ರಿಂದಲೇ ನಿರ್ದೇಶಿತವಾಗಿ ಹೊರಬಂದ ಹೊಗಳಿಕೆಯ ಶಬ್ದ ಇದು ಕುಂದಕುಂದಾ ಚಾರ್ಯರಿಗೆ ಸಮನೆಂಬ ಅಹಂಭಾವದಲ್ಲಿ ಏಲಾಚಾರ್ಯರೆಂದು ಕರಸಿಕೊಂಡು ತೃಪ್ತಿ ಕಾಣದೆ, ನೇಮಿಚಂದ್ರ ಸಿದ್ಧಾಂತಚಕ್ರವರ್ತಿಗೆ ಸಮನೆಂಬ ಅಹಂಭಾವದಲ್ಲಿ ಸಿದ್ಧಾಂತ ಚಕ್ರವರ್ತಿಯೆಂದು ಕರೆಸಿಕೊಂಡು ತೃಪ್ತಿಕಾಣದೆ ಕಡೆಗೆ ಗೋಮಟೇಶ್ವರನಿಗೆ ಸಮನೆಂಬ ಅಹಂಕಾರದ ಅಮಲಿನ ಉತ್ಕಟಾವಸ್ಥೆಯಲ್ಲಿ ಜನ್ಮತಳೆದು ಬಂದ ಶಬ್ದವಾಗಿದೆ ಈ 'ಮಾತನಾಡುವ ಗೊಮ್ಮಟ'ನೆಂಬ ಶಬ್ದ.

ಮಸ್ತಕಾಭಿಷೇಕಕ್ಕೆ ಮುನ್ನ ಗೋಮಟೇಶ್ವರನ ವಿಗ್ರಹಕ್ಕೆ ಅಭಿಮುಖವಾಗಿ ವಿದ್ಯಾನಂದರು ಕುಳಿತಿರುವ ಹಾಗೆ ವಿನ್ಯಾಸವುಳ್ಳ ವರ್ಣಮಯವಾದ ಪ್ರಚಾರದ ಕಾರ್ಡುಗಳನ್ನು ವಿದ್ಯಾನಂದರು ಹಂಚಿಸಿದರು. ಧಾರವಾಡದ ಬಿ. ಬಿ. ಮಹೀಶವಾಡಿ ಯವರು 1980ರಲ್ಲಿ ಬರೆದ 'ಮಹಾವೀರರು ಹಾಗೂ ಅವರ ತತ್ವಸಂದೇಶ' ಎಂಬ ಕಿರುಪುಸ್ತಕದಲ್ಲಿ ಹಿಮಾಲಯದಿಂದ ಹೆಜ್ಜೆಯಿಟ್ಟು ಬಂದು ಗೋಮಟೇಶ್ವರ ವಿಗ್ರಹದ ಮುಂದೆ ಡೊಳ್ಳುಹೊಟ್ಟೆಯನ್ನು ಮುಂದು ಮಾಡಿಕೊಂಡು ವಿದ್ಯಾನಂದರು ಕುಳಿತಂತೆ ಕಲಾವಿದರೊಬ್ಬರಿಂದ ಬರೆಸಿದ ಭಾವಚಿತ್ರವಿದೆ. ಈ ಬಗೆಯ ಭಾವಚಿತ್ರಗಳೊಂದಿಗೆ ವಿದ್ಯಾನಂದರನ್ನು 'ಮಾತನಾಡುವ ಗೊಮ್ಮಟ' ಎಂದು ಕರೆದು ಪ್ರ ಚಾ ರ ನೀಡಿ ಅವರನ್ನು ದೊಡ್ಡವರನ್ನಾಗಿ ಮಾಡುವ ಪ್ರಯತ್ನ ಈಗಲೂ ಅವ್ಯಾಹತವಾಗಿ ನಡೆಯು ತ್ತಿದೆ. ಈ ಪ್ರಯತ್ನ ಎಂದೆಂದಿಗೂ ಕಪ್ಪಾಗಿಯೇ ಇರುವ ಕರಿಯನಾಯಿಯನ್ನು ಸೋಪುಹಚ್ಚಿ ತೊಳೆದು ಬಿಳಿಯ ನಾಯಿಯನ್ನಾಗಿ ಮಾಡುವ ಪ್ರಯತ್ನದಂತೆ ವ್ಯರ್ಥ ವೆಂಬುದು ವಿದ್ಯಾನಂದರ ಹಂಗಿನಲ್ಲಿರುವ ದಳ್ಳಾಳಿಗಳಿಗೆ ಮತ್ತು ಹೊಗಳುಭಟ್ಟರಿಗೆ ಅರ್ಥವಾಗುವ ವಿಷಯವಲ್ಲ.

ಅಣ್ಣ ಭರತಚಕ್ರವರ್ತಿಯನ್ನೇ ಗೆದ್ದ ಸಮಯದಲ್ಲಿ ಷಟ್ಖಂಡಾಧಿಪತ್ಯವೇ ತನ್ನದಾಗಿರುವಾಗ, ಅದರ ಪ್ರಲೋಭನೆಗೊಳಗಾಗದೆ ಆ ಸಾಮ್ರಾಜ್ಯ ಪದವಿಯನ್ನು ಸ್ಥಿರ ವೈರಾಗ್ಯಭಾವದಿಂದ ಕ್ಷಣಮಾತ್ರದಲ್ಲಿ ತ್ಯಾಗಮಾಡಿದ ಮಹಾಮಹಿಮ ಆ ಗೊಮ್ಮಟನೆಲ್ಲಿ! ಮುನಿದೀಕ್ಷೆ ಪಡೆದಿದ್ದರೂ ಸಹ ಕಾಮಕ್ರೋಧ, ಲೋಭಮೋಹ, ಮದಮಾತ್ಸರ್ಯಗಳ ಸುಳಿಗೆ ಒಳಗಾಗಿ ಕುಯುಕ್ತಿ–ವಂಚನೆ–ಕುತಂತ್ರಗಳ ಮೂಲಕ ಸಮಸ್ತ ದುರ್ವ್ಯವಹಾರಗಳನ್ನೂ ಮಾಡುತ್ತಾ, ಎಲ್ಲಾ ಬಗೆಯ ಪರಿಗ್ರಹಗಳಿಗೆ ಮನದ ಬಾಗಿಲನ್ನು ಸದಾ ತೆರೆದಿಟ್ಟಿರುವ ವಿದ್ಯಾನಂದರೆಲ್ಲಿ? ಪುರಾಣದ ಆ ಗೋಮಟೇಶ್ವರ ಮಾತನಾಡಿದ್ದು ಬಹಳ ಕಡಿಮೆ. ಆದರೆ ಆಡಿದ ಒಂದೊಂದು ಮಾತಿನಲ್ಲೂ ಉನ್ನತವಾದ ಸ್ವಾಭಿಮಾನ, ಆತ್ಮಸಂಪತ್ತು, ವೈರಾಗ್ಯಗುಣ ಧೀಮಂತಿಕೆಗಳು ಉಕ್ಕಿ ಹರಿಯುತ್ತಿದ್ದವು. ಆಡಿದಂದಕ್ಕಿಂತಲೂ ಹೆಚ್ಚಾಗಿ ಆಚರಿಸಿ ತೋರಿಸಿದ ಮಹಾಪುರುಷ ಆತ. ಕಲಿಗಾಲದ ಈ ವಿದ್ಯಾನಂದರು ಮಾತನಾಡುವುದೇ ಹೆಚ್ಚು. ಅದರಲ್ಲಿ ಆತ್ಮಸ್ತುತಿ, ಪರನಿಂದೆ, ಸುಳ್ಳುಗಾರಿಕೆ ಮತ್ತು ಅಸಂಬದ್ಧ ಮಾತುಗಳಿಗೆ ಸದಾ ಮನ್ನಣೆ, ಆಚರಣೆಯಂತೂ ಸರ್ವಥಾ ಶೂನ್ಯ. ಇವರ ಧರ್ಮಭ್ರಷ್ಟ ಮಾತುಗಳಿಗೆ ಪ್ರತಿಯಾಗಿ ವಾದಮಾಡುವವರು ಬಂದಾಗ ಈ ಮಾತನಾಡುವ ಗೊಮ್ಮಟ ಬೆನ್ನು ತಿರುಗಿಸಿ ನಿಂತು ಶಾಶ್ವತವಾಗಿ ಮೌನವಾಗಿ ಬಿಡುತ್ತಾನೆ. ಇಷ್ಟಾದರೂ ಇವರ ಆಚರಣೆಯಿಲ್ಲದ ಮಾತಿನ ಆರ್ಭಟ ಕೆಲವು ಗೂಂಡಾಗಳ ಬೆಂಗಾವಲಿನೊಂದಿಗೆ ನಡೆಯುತ್ತಲೇ ಇರುತ್ತದೆ.

### 50 ಸಾವಿರ ಕೇಳಿದ್ದು

ಮಾತನಾಡುವ ಗೊಮ್ಮಟರು ಕೆಲವು ಸಮಯಗಳಲ್ಲಿ ದುಡ್ಡು ಕೇಳುವ ಗೊಮ್ಮಟರಾಗುವುದೂ ಉಂಟು. 1980ರಲ್ಲಿ ಶ್ರವಣಬೆಳಗೊಳಕ್ಕೆ ಹೋಗುವ ಮಾರ್ಗದಲ್ಲಿ ವಿದ್ಯಾನಂದರು ಹುಬ್ಬಳ್ಳಿಯಲ್ಲಿ ತಂಗಿದ್ದರು. ಆ ಸಂದರ್ಭದಲ್ಲಿ ಹುಬ್ಬಳಿಯ ಪ್ರಸಿದ್ಧ ದಾನಿಗಳಾದ ಸ್ತ್ರೀಯರೊಬ್ಬರಿಗೆ ಇವರಿಂದ ಕರೆ ಹೋಯಿತು. ಆ ಶ್ರೀಮಂತ ಮಹಿಳೆ ವಿದ್ಯಾನಂದರನ್ನು ಕಂಡಾಗ ವಿದ್ಯಾನಂದರು ಆಕೆಗೆ ಶ್ರವಣಬೆಳಗೊಳ ಮಠಕ್ಕೆ ಐವತ್ತು ಸಾವಿರ ರೂಪಾಯಿ ದಾನ ಕೊಡುವಂತೆ ಒತ್ತಾಯಪಡಿಸಿದರು. ಈ ಒತ್ತಾಯದ ದಾನಕ್ಕೆ ಆಕೆ ಒಪ್ಪಲಿಲ್ಲ. ಕಡೆಗೆ ಹತ್ತುಸಾವಿರ ರೂಪಾಯಿಗಳನ್ನು ನೀಡಲು ಸಮ್ಮತಿಸಿದರು. ಇದಕ್ಕೆ ವಿದ್ಯಾನಂದರು ಒಪ್ಪದೆ ಆಕೆಯ ಮುಂದೆ ತಮ್ಮ ಕೋಪತಾಪಗಳನ್ನು ಪ್ರದರ್ಶಿಸಿದರು. ಆ ಸಭ್ಯಮಹಿಳೆ ವಿದ್ಯಾನಂದರ ಅಸಭ್ಯ ನಡವಳಿಕೆಯನ್ನು ವಿರೋಧಿಸಿ ಹತ್ತುಸಾವಿರ ರೂಪಾಯಿಗಳನ್ನೂ ತಾವು ಕೊಡುವುದಿಲ್ಲವೆಂದು ಹೇಳಿ ಅಲ್ಲಿಂದ ಕಾಲ್ತೆಗೆದರು. ಮುಂದೆ 1982ರಲ್ಲಿ ಈ ಶ್ರೀಮಂತ ಮಹಿಳೆ ವಿದ್ಯಾನಂದರನ್ನು ವಿರೋಧಿಸುತ್ತಿದ್ದ ಜೈನಮಠವೊಂದಕ್ಕೆ ಐವತ್ತುಸಾವಿರ ರೂಪಾಯಿಗಳನ್ನು ದಾನವಾಗಿ ನೀಡಿದರು.

## ತಿರುಪತಿ ಮಾಡಿದ್ದು

ವಿದ್ಯಾನಂದರು 1980ರ ಜುಲೈ ತಿಂಗಳಿನಲ್ಲಿ ಶ್ರವಣಬೆಳಗೊಳಕ್ಕೆ ಬಂದು ಸ್ಥಾಪಿತರಾದ ಮೇಲೆ ಅನೇಕ ಸಂದರ್ಶಕರ ಮುಂದೆ "ಈ ಕ್ಷೇತ್ರವನ್ನು ನಾನು ತಿರುಪತಿಗಿಂತ ದೊಡ್ಡದಾಗಿ ಮಾಡುವವರೆಗೂ ಇಲ್ಲಿಂದ ಹೊರಡುವುದಿಲ್ಲ" ಎಂದು ಪದೇ ಪದೇ ಹೇಳುತ್ತಿದ್ದರು. ಈ ಮಾತನ್ನು ಕೇಳಿದ ಮುಗ್ಧ ಅಭಿಮಾನಿಗಳು ಶ್ರವಣಬೆಳಗೊಳದಲ್ಲಿ ಹಣದ ಮಳೆಯೇ ಸುರಿದು ಕ್ಷೇತ್ರ ತಿರುಪತಿಯನ್ನು ಮೀರಿಸಿ ಮುನ್ನಡೆಯುತ್ತದೆ ಎಂದು ಭ್ರಾಂತಿಗೊಳಗಾದರು. 1981ರ ಮಹಾಮಸ್ತಕಾಭಿಷೇಕ ಸಮಾರಂಭಗಳನ್ನು ಕೇವಲ ಹಣಸಂಪಾದನೆಯ ಪ್ರಧಾನ ಉದ್ದೇಶದಿಂದ ವ್ಯವಸ್ಥೆಗೊಳಿಸಿದ ವಿದ್ಯಾನಂದರು ಕ್ಷೇತ್ರದ ಹೆಸರಿನಲ್ಲಿ ಬಂದ ಲಕ್ಷಾಂತರ ರೂಪಾಯಿಗಳ ಹಣದಲ್ಲಿ ಸುಮಾರು ಐವತ್ತು ಲಕ್ಷ ರೂಪಾಯಿಗಳಷ್ಟು ಹಣವನ್ನು ತಮ್ಮ ಅಂಕಿಗೆ ಒಳಪಡಿಸಿಕೊಂಡು ಕ್ಷೇತ್ರದ ಮುಜರಾಯಿ ಕಮಿಟಿಗೆ ದೊಡ್ಡ ಪಂಗನಾಮ ಹಾಕಿದರು. ಈ ರೀತಿ ಕ್ಷೇತ್ರಕ್ಕೂ ಜನಗಳಿಗೂ ಮೋಸ ಮಾಡಿದರು.

ಶ್ರವಣಬೆಳಗೊಳದಲ್ಲಿ ಒಂದು ಪ್ರಥಮ ದರ್ಜೆ ಕಾಲೇಜನ್ನು ಸ್ಥಾಪಿಸುತ್ತೇವೆಂಬ ಒಂದು ಸುಳ್ಳು ಭರವಸೆಯನ್ನು ಊರಿನ ಗೋಡೆಗಳ ಮೇಲೆ ಬರೆಸಿ ಜನರನ್ನು ಮರುಳು ಮಾಡಿದರು. ಕಡೆಗೆ ಅವರ ಎಲ್ಲಾ ಭರವಸೆಗಳಂತೆ ಇದೂ ಸಹ ಸುಳ್ಳಾಯಿತು. ಮೊದಲೆಲ್ಲಾ ತಿರುಪತಿ ಮಾಡುವವರೆಗೂ ಕದಲುವುದಿಲ್ಲ ಎಂದು ಹೇಳುತ್ತಿದ್ದವರು 1981ರ ಡಿಸೆಂಬರ್‌ನಲ್ಲಿ ಸನ್ಮಾನ ಮಾಡಿಸಿಕೊಂಡು ಶ್ರವಣಬೆಳಗೊಳ ಬಿಟ್ಟು ಹೊರಟರು. ವಿದ್ಯಾನಂದರ ವಿರುದ್ಧ ಮೈಸೂರಿನ ಸಿ. ಬಿ. ಎಂ. ಚಂದ್ರಯ್ಯನವರು ತೋರಿದ ಪ್ರತಿಭಟನೆ ಮತ್ತು ಬಿ. ಎಸ್. ನಂದಕುಮಾರರು 'ಮುನಿವಿದ್ಯಾನಂದರು ಸುಳ್ಳಾಡಿದೇಕೆ ?' ಪುಸ್ತಕದ ಮೂಲಕ ಬಹಿರಂಗ ಪಡಿಸಿದ ವಾಸ್ತವ ಸತ್ಯಗಳಿಂದಾಗಿ ವಿದ್ಯಾನಂದರು ಶ್ರವಣಬೆಳಗೊಳದಲ್ಲಿ ನೆಲೆಸುವುದು ಅಸಾಧ್ಯವಾಗಿ ಪರಿಣಮಿಸಿತು. ಅಂತೂ 'ತಿರುಪತಿ ಮಾಡುತ್ತೇನೆ' ಎಂಬ ಅವರ ಮಾತು ಕ್ಷೇತ್ರದ ಭಂಡಾರವನ್ನು ಲೂಟಿಹೊಡೆಯುತ್ತೇನೆ ಎಂಬ ವ್ಯಂಗ್ಯಾರ್ಥದಲ್ಲಿಯಾದರೂ ನಿಜವಾದಂತಾಯಿತು.

## ರಾಜಕೀಯ ಸಂಪರ್ಕ

ಪ್ರಮುಖ ಅಧಿಕಾರಸ್ಥ ರಾಜಕಾರಣಿಗಳೊಂದಿಗೆ ಫೋಟೋ ತೆಗೆಸಿಕೊಂಡು ಅದನ್ನು ಪ್ರಚಾರಕ್ಕೆ ನೀಡಿ ತಮಗೆ ಅನೇಕ ಉನ್ನತ ರಾಜಕಾರಣಿಗಳು ಶಿಷ್ಯರಾಗಿದ್ದಾರೆ ಎಂದು ತೋರ್ಪಡಿಸಿಕೊಳ್ಳುವುದು ವಿದ್ಯಾನಂದರ ಒಂದು ಪ್ರಮುಖ ಪ್ರಚಾರದ ಸ್ಟಂಟ್ ಆಗಿದೆ. ಉನ್ನತಾಧಿಕಾರಗಳು ಕೇಂದ್ರೀಕೃತವಾದ ಅಧಿಕಾರಸ್ಥ ರಾಜಕಾರಣಿಗಳು ಬಂದಾಗ ವಿದ್ಯಾನಂದರು ತಾವು ಮುನಿಯೆಂಬುದನ್ನೂ ಮರೆತು ಆ ರಾಜಕಾರಣಿಗಳು ಇಳಿದುಕೊಂಡಿರುವ ಕಡೆಗೇ ಹೇಗೆ ಆತುರಾತುರವಾಗಿ ಹೋಗುತ್ತಾರೆ ಎಂಬುದನ್ನು ಶ್ರವಣಬೆಳಗೊಳದಲ್ಲಿ ಸೇರಿದ್ದ ಸಾವಿರಾರು ಜನರು ಪ್ರತ್ಯಕ್ಷವಾಗಿ ಕಂಡಿದ್ದಾರೆ.

ತಮಗೆ ರಾಜಕೀಯ ವ್ಯಕ್ತಿಗಳ ಸಂಪರ್ಕವಿದೆಯೆಂಬ ಅಹಂಕಾರದಲ್ಲಿ ತಮಗಾಗದ ಜನರನ್ನು ಬೆದರಿಸುವುದೂ ವಿದ್ಯಾನಂದರ ಒಂದು ಪ್ರಧಾನವಾದ ದುಷ್ಟ ಮನೋವೃತ್ತಿಯಾಗಿದೆ. ತಾ. 13–7–80ರಂದು ಬೆಳ್ಳೂರಿನಲ್ಲಿ ಇವರು ನಮ್ಮ ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರ ಹೆಸರನ್ನು ಹೀಗೆ ದುರುಪಯೋಗ ಪಡಿಸಿಕೊಂಡು "ಇಂದಿರಾಗಾಂಧಿಯವರಿಗೆ ಹೇಳಿ ಚಂದ್ರಯ್ಯನವರಿಗೆ ಕೈಕೋಳ ಹಾಕಿಸುತ್ತಿದ್ದೆ" ಎಂದು ಮೈಸೂರಿನ ಶ್ರೀ ಎಸ್. ಪಿ. ಶಾಂತರಾಜರ ಮುಂದೆ ಆಕ್ರೋಶದಿಂದ ಹೇಳಿದರು. ಮತ್ತೆ ತಾ. 21–7–80ರಂದು ಶ್ರವಣಬೆಳಗೊಳದಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳು ಭಾಗವಹಿಸಿದ್ದ ಬಹಿರಂಗ ಸಭೆಯಲ್ಲಿ ಪುನಃ ಸಿ. ಬಿ. ಎಂ. ಚಂದ್ರಯ್ಯನವರ ವಿರುದ್ಧ ಸುಳ್ಳು ಆಪಾದನೆಗಳನ್ನು ಹೊರಿಸಿ ಮುಖ್ಯಮಂತ್ರಿಯವರನ್ನು ಚಂದ್ರಯ್ಯನವರ ವಿರುದ್ಧ ಎತ್ತಿಕಟ್ಟಲು ಪ್ರಯತ್ನಿಸಿದರು[1]. ಆದರೆ ಮುಖ್ಯಮಂತ್ರಿ ಶ್ರೀ ಗುಂಡೂರಾವ್‌ರವರು ವಿದ್ಯಾನಂದರ ಈ ಕಿತಾಪತಿಗೆ ಕವಡೆಯ ಬೆಲೆಯನ್ನೂ ಕೊಡದೆ ಅವರ ಮಾತುಗಳನ್ನು ಉಪೇಕ್ಷೆ ಮಾಡಿದರು.

ದೇಶದ ಯಾವುವೇ ರಾಜ್ಯದಲ್ಲಾಗಲೀ ಜೈನಜನಾಂಗದ ರಾಜಕಾರಣಿಯೊಬ್ಬರಿಗೆ ಮಂತ್ರಿಸ್ಥಾನ ಸಿಕ್ಕಿದರೆ ಅದು ತಮ್ಮ ಶಿಫಾರಸಿನಿಂದ ಸಿಕ್ಕಿತು ಎಂದು ವಿದ್ಯಾನಂದರು ತಮ್ಮ ದಳ್ಳಾಳಿಗಳ ಮೂಲಕ ಪ್ರಚಾರ ಮಾಡಿಸುತ್ತಾರೆ. ಇಂತಹ ಸುಳ್ಳು ಪ್ರಚಾರದಿಂದ ಜುಗುಪ್ಸೆಪಟ್ಟ ಒಂದಿಬ್ಬರು ಮಂತ್ರಿಗಳು ತಾವೇನೂ ವಿದ್ಯಾನಂದರ ಶಿಫಾರಸಿನಿಂದ ಮಂತ್ರಿಯಾಗಿಲ್ಲ ಎಂಬುದನ್ನು ಬಹಿರಂಗ ಸಭೆಗಳಲ್ಲಿ ಸ್ಪಷ್ಟಪಡಿಸಿದ್ದಾರೆ.

ವಿದ್ಯಾನಂದರಿಗೆ ರಾಜಕೀಯ ಪ್ರಭಾವವಿದೆಯೆಂದು ಭ್ರಮಿಸಿ ಅನೇಕ ರಾಜಕಾರಣಿಗಳು ಎಂ.ಎಲ್.ಎ. ಮತ್ತು ಎಂ.ಎಲ್.ಸಿ. ಟಿಕೆಟ್‌ಗಳಿಗಾಗಿ ದೆಹಲಿಯಾತ್ರೆ ಮಾಡಿ ವಿದ್ಯಾನಂದರನ್ನು ಕಂಡಿರುವುದೂ ಉಂಟು. ಅವರು ನೀಡಿರುವ ಹುಸಿ ಆಶ್ವಾಸನೆಗಳನ್ನು ನಂಬಿ ಕಡೆಗೆ ಮುಖ ಒಣಗಿಸಿಕೊಂಡು ಹಿಂತಿರುಗಿರುವುದೂ ಉಂಟು. ಚಳ್ಳಕೆರೆಯ ರಾಜಕಾರಣಿಯೊಬ್ಬರು ಇಂತಹ ಹತಾಶೆಗೊಳಗಾದವರಲ್ಲಿ ಒಬ್ಬರಾಗಿದ್ದಾರೆ. ಅನೇಕ ಸಂದರ್ಭಗಳಲ್ಲಿ ವಿದ್ಯಾನಂದರು ಚುನಾವಣೆಯ ಟಿಕೆಟ್ ಕೊಡಿಸುತ್ತೇವೆ ಎಂಬ ಆಶ್ವಾಸನೆಯನ್ನು ಅನೇಕ ಲೋಭಿಗಳಿಗೆ ನೀಡಿ ಅಂತಹವರಿಂದ ತಮ್ಮ ಮೆರವಣಿಗೆ ಮತ್ತು ಸಮಾರಂಭಗಳನ್ನು ಊರೂರುಗಳಲ್ಲಿ ಏರ್ಪಡಿಸಿಕೊಂಡಿದ್ದಾರೆ.

---

1. ವಿದ್ಯಾನಂದರು ಮುಖ್ಯಮಂತ್ರಿ ಗುಂಡೂರಾಯರನ್ನು ಚಂದ್ರಯ್ಯನವರ ವಿರುದ್ಧ ಎತ್ತಿಕಟ್ಟಲು ಮಾಡಿದ ಸಾರ್ವಜನಿಕ ಭಾಷಣ ಧ್ವನಿಮುದ್ರಿತವಾಗಿದೆ. ಇದನ್ನು ಯಾರು ಬೇಕಾದರೂ ಚಂದ್ರಯ್ಯನವರ ಹತ್ತಿರ ಹೋಗಿ ಆಲಿಸಬಹುದು.

ಅಧಿಕಾರಸ್ಥರು ಮತ್ತು ಹಣವಂತರ ಜೊತೆ ಅತಿ ಸ್ನೇಹ ಬೆಳೆಸದೆ ದೂರವಿರ ಬೇಕಾದ ಮುನಿ ಬಹಿರಂಗವಾಗಿಯೇ ಈ ವರ್ಗದ ಜನಗಳೊಂದಿಗೆ ಬೆರೆಯಲು ಹಾತೊ ರೆಯುತ್ತಿರುವುದು ಅವರ ಸೋಗಿನ ಮುನಿಧರ್ಮದ ಪ್ರತ್ಯಕ್ಷ ನಿದರ್ಶನವಾಗಿದೆ.

**ಅಂಚೆಯ ವ್ಯವಹಾರ**

ವಿದ್ಯಾನಂದರು ತಮ್ಮ ವಿಳಾಸಕ್ಕೆ ಬರುವ ಅಂಚೆ ಪತ್ರಗಳನ್ನು ಗಮನಿಸದೇ ಇರುವವರೇನಲ್ಲ. ಸಮಸ್ತ ಪರಿಗ್ರಹ ಮತ್ತು ವ್ಯವಹಾರಗಳಲ್ಲಿ ಮುಳುಗಿರುವ ಮುನಿ ಗಳಿಗೆ ಅಂಚೆಯಲ್ಲಿ ಪತ್ರಗಳಿಲ್ಲದಿರುವುದು ಹೇಗೆ ! ಅವುಗಳನ್ನು ಆಸಕ್ತಿಯಿಂದ ಗಮನಿಸು ತ್ತಾರೆ. ತೊಡಕುಗಳಿಲ್ಲದೇ ಇರುವ ಪತ್ರಗಳಿಗೆ ಉತ್ತರವನ್ನು ತಮ್ಮ ಆಪ್ತ ಸಹಾಯ ಕರ ಮೂಲಕ ಕಳುಹಿಸುತ್ತಾರೆ. ಆ ಸಂಸ್ಥೆಗೆ ಈ ಸಂಸ್ಥೆಗಳಿಗೆ ದೊಡ್ಡ ಮೊತ್ತದ ಹಣ ವನ್ನು ದಾನ ನೀಡುತ್ತೇವೆ ಎಂದು ಬರುವ ಪತ್ರಗಳಿಗೆ ಇವರು ತಕ್ಷಣ ಗಮನಕೊಟ್ಟು ಆ ಹಣವನ್ನು ಆದಷ್ಟು ಬೇಗ ತರಿಸಲು ಏರ್ಪಾಟು ಮಾಡುತ್ತಾರೆ.

ತಮ್ಮ ವ್ಯವಹಾರಕ್ಕೆ ತೊಡಕನ್ನುಂಟು ಮಾಡುವಂತಹ ಪತ್ರಗಳು ಮತ್ತು ತಮ್ಮ ನಡವಳಿಕೆಯನ್ನು ಪ್ರಶ್ನಿಸಿ ಬರುವ ಪತ್ರಗಳಿಗೆ ವಿದ್ಯಾನಂದರು ಏನೇ ಆದರೂ ಉತ್ತರ ಕೊಡುವುದಿಲ್ಲ. ಇಂತಹ ಪತ್ರಗಳೆಲ್ಲಾ ನೇರವಾಗಿ ಕಸದ ಬುಟ್ಟಿಯನ್ನು ಸೇರುತ್ತವೆ. ತಮ್ಮ ಹೆಸರಿನಲ್ಲಿ ಬರುವ ರಿಜಿಸ್ಟರ್ಡ್ ಅಂಚೆ ಪತ್ರಗಳನ್ನು ವಿದ್ಯಾನಂದರು ತಾವೇ ನೇರ ವಾಗಿ ರುಜು ಹಾಕಿ ತೆಗೆದುಕೊಳ್ಳದೆ ತಮ್ಮ ಮಧ್ಯವರ್ತಿಗಳ ಮೂಲಕ ತೆಗೆದುಕೊಳ್ಳು ತ್ತಾರೆ. ಇಂತಹ ಅಂಚೆಪತ್ರ ತಮ್ಮ ನಡವಳಿಕೆಯನ್ನು ಪ್ರಶ್ನಿಸಿದ್ದರೆ ಅಂತಹುದಕ್ಕೆ ಉತ್ತರ ನೀಡಲು ಹೋಗುವುದಿಲ್ಲ. ಹೀಗೆ ರಿಜಿಸ್ಟರ್ಡ್ ಅಂಚೆಯ ಮೂಲಕ ಅಧಿಕೃತ ವಾಗಿ ಪ್ರಶ್ನಿಸುವವರು ಮತ್ತೆ ಮತ್ತೆ ರಿಜಿಸ್ಟರ್ಡ್ ಅಂಚೆಗಳನ್ನು ಕಳುಹಿಸಿದರೆ ವಿದ್ಯಾ ನಂದರು ಅಂತಹ ಅಂಚೆಗಳನ್ನು ಯಾವ ಅಳುಕೂ ಸಹ ಇಲ್ಲದೆ ತಿರಸ್ಕರಿಸಿ ಹಿಂದಕ್ಕೆ ಕಳುಹಿಸುತ್ತಾರೆ. ಇನ್ನೊಬ್ಬರ ಮಾನನಷ್ಟ ಮಾಡುವ ಹೇಳಿಕೆಗಳನ್ನು ನೀಡುವುದರಲ್ಲಿ ವಿದ್ಯಾನಂದರು ಹುಲಿ. ಆದರೆ ಆ ಹೇಳಿಕೆಗಳನ್ನು ರುಜುವಾತುಪಡಿಸಿ ಎಂದು ಪ್ರತಿ ಸವಾಲಾಗಿ ಬರುವ ಪತ್ರಗಳಿಗೆ ವಿದ್ಯಾನಂದರು ಸದಾ ಇಲಿ !

ವಿದ್ಯಾನಂದರು ಶ್ರವಣಬೆಳಗೊಳದಲ್ಲಿದ್ದಾಗ ತಾ। 3-11-1980 ರಂದು ಅವ ರಿಗೆ ಬಂದ ಪತ್ರವೊಂದರಲ್ಲಿ ಯಾರೋ ಒಬ್ಬರಿಂದ ಶ್ರವಣಬೆಳಗೊಳ ಕ್ಷೇತ್ರಕ್ಕೆ ಐವತ್ತು ಸಾವಿರ ರೂಪಾಯಿಗಳ ದಾನ ನೀಡುವ ಆಶ್ವಾಸನೆಯಿತ್ತು. ವಿದ್ಯಾನಂದರು ತಕ್ಷಣ ಈ ಪತ್ರದ ಕಡೆ ಗಮನ ನೀಡಿ ತಮ್ಮ ಸಮೀಪದಲ್ಲಿದ್ದ ಮಧ್ಯವರ್ತಿಗೆ ಹೇಳಿ ಹಣ ತರಿ ಸಲು ವ್ಯವಸ್ಥೆ ಮಾಡಿದರು.[1]

---

1. ತಾ। 3-11-1980 ರಂದು ಈ ಕೃತಿಯ ಲೇಖಕರು ವಿದ್ಯಾನಂದರನ್ನು ಭೇಟಿಯಾದ ಸಮಯದಲ್ಲಿ ಈ ಹಣ ತರಿಸುವ ವ್ಯವಸ್ಥೆ ನಡೆಯುತ್ತಿದ್ದುದು ಲೇಖಕರ ಗಮನಕ್ಕೆ ಬಂತು.

ವಿದ್ಯಾನಂದರು ಶ್ರವಣಬೆಳಗೊಳದಲ್ಲಿ ವಾಸ್ತವ್ಯ ಹೂಡಿದ ಸಮಯದಲ್ಲಿ ಮಸ್ತಕಾಭಿಷೇಕ ಆರಂಭವಾಗುವುದಕ್ಕೆ ಸಾಕಷ್ಟು ಮುಂಚೆಯೇ ವಿದ್ಯಾನಂದರ ಸಹಪಾಠಿಯೊಬ್ಬರು ವಿದ್ಯಾನಂದರಿಗೆ ಒಂದು ಪತ್ರ ಬರೆದರು. ಅದರಲ್ಲಿ ಅವರು : "ಯಾರು ಮದ್ಯ ಮಾಂಸಗಳನ್ನು ಈ ಕ್ಷಣದಿಂದಲೇ ಸಂಪೂರ್ಣವಾಗಿ ಬಿಟ್ಟು ಬಿಡುತ್ತೇವೆ ಎಂದು ಪ್ರಮಾಣವಚನ ತೆಗೆದುಕೊಳ್ಳುತ್ತಾರೋ ಅಂತಹವರಿಗೆ ಮಾತ್ರ ಗೋಮಟೇಶ್ವರನ ಮೇಲೆ ಅಭಿಷೇಕ ಮಾಡಲು ಅವಕಾಶ ಎಂಬ ಒಂದು ನಿಯಮವನ್ನು ಗೊತ್ತುಪಡಿಸಿ ಅಂಥ ಪ್ರಮಾಣವಚನ ಸ್ವೀಕರಿಸಲು ಒಪ್ಪಿದವರಿಗೆ ಮಾತ್ರ ಅಭಿಷೇಕಕ್ಕೆ ಅವಕಾಶವನ್ನು ನೀಡಿದರೆ ಒಳ್ಳೆಯದಲ್ಲವೆ" ಎಂಬ ಸಲಹೆ ನೀಡಿದರು. ಮತ್ತು ಇದರ ಬಗ್ಗೆ ಅವರ ಅಭಿಪ್ರಾಯವನ್ನು ಕೇಳಿದರು. ಈ ಪತ್ರಕ್ಕೆ ವಿದ್ಯಾನಂದರಿಂದ ಇದುವರೆಗೂ ಉತ್ತರ ಹೋಗಿಲ್ಲ.

ಈ ಕೃತಿಯ ಲೇಖಕರೇ ವಿದ್ಯಾನಂದರಿಗೆ ಇದುವರೆಗೆ ಆರು ರಿಜಿಸ್ಟರ್ಡ್ ಅಂಚೆಗಳನ್ನು ಕಳುಹಿಸಿದ್ದಾರೆ. ಇವುಗಳಲ್ಲಿ ಮೊದಲ ಎರಡು ಅಂಚೆಗಳನ್ನು ಮಾತ್ರ ವಿದ್ಯಾನಂದರು ತಮ್ಮ ಸಹಾಯಕರ ಮೂಲಕ ತೆಗೆದುಕೊಂಡಿದ್ದಾರೆ. ಉಳಿದ ನಾಲ್ಕನ್ನು ತಿರಸ್ಕರಿಸಿ ಹಿಂದಕ್ಕೆ ಕಳುಹಿಸಿದ್ದಾರೆ. ತೆಗೆದುಕೊಂಡಿರುವ ಪತ್ರಗಳಿಗೆ ಅವರಿಂದ ಇದುವರೆಗೂ ಯಾವ ಉತ್ತರವೂ ಬಂದಿಲ್ಲ.

### ಶೇಡಬಾಳದ ಕಿತಾಪತಿ

ಶೇಡಬಾಳದ ಶಾಂತಿನಾಥ ಜಿನಮಂದಿರದ ದಿನನಿತ್ಯದ ಪೂಜಾಕಾರ್ಯಗಳನ್ನು ಕಾಳಪ್ಪ ಉಪಾಧ್ಯೆಯವರ ಮನೆತನದವರು ನಡೆಸಿಕೊಂಡು ಬರುತ್ತಿದ್ದಾರೆ. ಈ ದೇವಸ್ಥಾನದ ಜೀರ್ಣೋದ್ಧಾರವನ್ನೂ ಸಹ ಇತ್ತೀಚೆಗೆ ಮಾಡಿಸಿದ್ದಾರೆ. ಜೀರ್ಣೋದ್ಧಾರಕ್ಕಾಗಿ ಯಾರು ಹಣ ನೀಡಿದರು ಅವರ ಶುಭ ನಾಮಧೇಯವೇನು? ಯಾರು ಯಾರಿಂದ ಹಣ ಸಂಗ್ರಹಿಸಿದರು. ಸಂಗ್ರಹಿಸಿದ ಹಣವೆಷ್ಟು ಎಂಬುದಕ್ಕೆ ಯಾವ ಲೆಕ್ಕ ಪತ್ರಗಳೂ ಲಭ್ಯವಿಲ್ಲ. "ಜೀರ್ಣೋದ್ಧಾರದ ಹೆಸರಿನಲ್ಲಿ ನಾನಾ ಮೂಲಗಳಿಂದ ಲಕ್ಷಾಂತರ ರೂಪಾಯಿಗಳನ್ನು ಸಂಗ್ರಹಿಸಿದ್ದಾರೆ, ಸಂಗ್ರಹಿಸಿದವರು ಅವುಗಳ ಲೆಕ್ಕಪತ್ರಗಳನ್ನು ಬಹಿರಂಗಪಡಿಸಿಲ್ಲ" ಎಂದು ಶೇಡಬಾಳದ ಬಹುಜನರು ಹೇಳುತ್ತಾರೆ.

ಈ ದೇವಸ್ಥಾನದ ಸ್ವಾಮ್ಯದ ವಿಚಾರವಾಗಿ ನ್ಯಾಯಾಲಯದಲ್ಲಿ ಒಂದು ಮೊಕದ್ದಮೆಯೂ ಸಹ ಸುಮಾರು ಮೂವತ್ತು ವರ್ಷಗಳಿಂದ ನಡೆಯುತ್ತಿದೆ. ದೇವಸ್ಥಾನ ಪುರೋಹಿತ ವರ್ಗಕ್ಕೆ ಮಾತ್ರ ಸೇರಿದ್ದು ಎಂದು ಪುರೋಹಿತರುಗಳು ವಾದಿಸುತ್ತಿದ್ದಾರೆ. ದೇವಸ್ಥಾನ ಊರಿನ ಸಮಸ್ತ ದಿಗಂಬರ ಜೈನ ಸಮಾಜಕ್ಕೆ ಸೇರಿದ್ದು ಎಂದು ಊರಿನ ಶ್ರಾವಕರು ವಾದಿಸುತ್ತಿದ್ದಾರೆ. ಶೇಡಬಾಳದ 'ಜೈನ ಪಂಚಾಯತ ಕಮಿಟಿ'

ಶ್ರಾವಕರ ಪರವಾಗಿ ಮೊಕದ್ದಮೆಯನ್ನು ನಡೆಸುತ್ತಿದೆ. 1981ರಲ್ಲಿ ಕೋರ್ಟಿನ ತೀರ್ಪು ಶ್ರಾವಕರ ಪರವಾಗಿ ಬಂದಿದೆಯೆಂದು ಊರಿನವರು ಹೇಳುತ್ತಾರೆ. ಪುರೋಹಿತ ವರ್ಗ ಇದರ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಿದ್ದಾರೆಂದು ತಿಳಿದು ಬಂದಿದೆ. ಪುರೋಹಿತ ವರ್ಗದವರು ದೇವಸ್ಥಾನ ತಮ್ಮದೆಂದು ಹಠ ಸಾಧಿಸಲು ಅವರಿಗೆ ವಿದ್ಯಾನಂದರ ಕುಮ್ಮಕ್ಕು ಮತ್ತು ಸಮಸ್ತ ರೀತಿಯ ಬೆಂಬಲವಿರುವುದೇ ಮೂಲ ಕಾರಣವೆಂದು ಊರಿನ ಅನೇಕ ಜನರು ಹೇಳುತ್ತಾರೆ.

## ಕೈಮುರಿದ ಘಟನೆ

ವಿದ್ಯಾನಂದರು ತಾ। 3-11-1981 ರಂದು ಶ್ರವಣಬೆಳಗೊಳದ ದೊಡ್ಡ ಬೆಟ್ಟದಿಂದ ಉರುಳಿಬಿದ್ದು ತಮ್ಮ ಬಲಗೈಯನ್ನು ಮುರಿದುಕೊಂಡ ಘಟನೆ ಈಗಾಗಲೇ ಎಲ್ಲರಿಗೂ ತಿಳಿದ ವಿಚಾರ. ಬಹುಶಃ ಶ್ರವಣಬೆಳಗೊಳದ ಇತಿಹಾಸದಲ್ಲಿಯೇ ಮುನಿ ವೇಷಧಾರಿಯೊಬ್ಬರಿಗೆ ಇಂತಹ ಸ್ಥಿತಿಯುಂಟಾದುದು ಇದೇ ಮೊದಲೆಂದು ಕಾಣುತ್ತದೆ

ಇವರು ಬಿದ್ದು ಕೈಮುರಿದುಕೊಂಡಾಗ ಎಲ್ಲರಂತೆ ಇವರಿಗೂ ಪಾಶ್ಚಾತ್ಯ ವೈದ್ಯಕೀಯ ಪದ್ಧತಿಯ ವೈದ್ಯರು ಮತ್ತು ವಿಜ್ಞಾನದ ಉಪಕರಣಗಳ ಸಹಾಯವೇ ಬೇಕಾಯಿತು ! ಇವರ ಶಿವಾಲಯದ ತಪಶ್ಶಕ್ತಿಯಾಗಲೀ, ಅಥವಾ ದ್ವಾರಪಾಲಕನನ್ನು ಹೊರಗೆ ನಿಲ್ಲಿಸಿ, ಬಾಗಿಲು ಭದ್ರಪಡಿಸಿಕೊಂಡು ಸ್ತ್ರೀ ಸಮೇತವಾಗಿ ಮಾಡಿದ ತಪಶ್ಶಕ್ತಿಯಾಗಲೀ ಈ ಸಂದರ್ಭದಲ್ಲಿ ನೆರವಿಗೆ ಬರದೇ ಇದ್ದುದು ಆಶ್ಚರ್ಯಕರ! ಪುದ್ಗಲರೂಪಿಯಾದ ಈ ಶರೀರ ಹೇಗಿದ್ದರೂ ಸ್ಥಿರವಲ್ಲ. ಅಂತರಾತ್ಮನೇ ಸ್ಥಿರನಾದವನು. ಜಾರಿ ಬಿದ್ದಾಗ ಅಂತರಾತ್ಮನಿಗಂತೂ ಯಾವ ಪೆಟ್ಟೂ ಆಗಿಲ್ಲ. ಆದ್ದರಿಂದ ನಾಳೆ ಹೋಗಲಿರುವ ಈ ಶರೀರ ಈ ದಿನವೇ ಮುರಿದು ಹೋಗಲಿ. ಯಾವ ವೈದ್ಯರೂ ಬೇಡ ; ಯಾವ ಔಷಧಿಯೂ ಬೇಡ ; ಯಾವ ಉಪಕರಣವೂ ಬೇಡ ಎಂಬ ರೋಗಪರೀಷಹ ಸಹನೆಯ ತೀವ್ರ ವೈರಾಗ್ಯಭಾವ, ಸಂತ ಶಿರೋಮಣಿಗಳೂ ತಾರಕ ತಪಸ್ವಿಗಳೂ ಎಂದೆನಿಸಿಕೊಂಡ ವಿದ್ಯಾನಂದರಿಗೆ ಉಂಟಾಗದೇ ಇದ್ದುದು ಮತ್ತಷ್ಟು ಆಶ್ಚರ್ಯಕರ !

ಎಲ್ಲಾ ಸಾಮಾನ್ಯ ಮನುಷ್ಯರಂತೆ ವೈದ್ಯಕೀಯ ನೆರವನ್ನು ಬಯಸಿ ಈ ವಿಚಾರದಲ್ಲಿ ಮುನಿಧರ್ಮವನ್ನು ಕಡೆಗಾಣಬಹುದಾದರೆ ಮುನಿಗಳಾದವರು ನಗ್ನತ್ವವನ್ನು ಧಾರಣೆ ಮಾಡಬೇಕೆಂಬ ನಿಯಮವನ್ನು ಕಡೆಗಂಡು ವಸ್ತ್ರಧಾರಣೆಯನ್ನೇಕೆ ಮಾಡಬಾರದು ? ಮುನಿಗಳಿಗೆ ಸಿಗುವ ಪೂಜ್ಯತೆ ಮರ್ಯಾದೆ ಇವೆಲ್ಲಾ ಬೇಕು ಆದರೆ ಮುನಿಗಳು ಸಹಿಸಲೇಬೇಕಾದ ಪರೀಷಹಗಳ ಕಷ್ಟಗಳು ಮಾತ್ರ ಬೇಡ ಎಂಬುದು ಯಾವ ನ್ಯಾಯ ?

## ಬೆಂಗಳೂರಿನ ದಳ್ಳಾಳಿ

ವಿದ್ಯಾನಂದರಿಗೆ ಭಾರತದೇಶಾದ್ಯಂತ ದಳ್ಳಾಳಿಗಳಿದ್ದಾರೆ. ಇವರು ಬೀಡುಬಿಟ್ಟ ಕಡೆ ಅಲ್ಲಲ್ಲಿಯೇ ಸ್ಥಳೀಯವಾಗಿಯೂ ದಳ್ಳಾಳಿಗಳು ಹುಟ್ಟಿಕೊಳ್ಳುತ್ತಾರೆ. ಸಮಾಜ ಘಾತುಕ ವ್ಯಕ್ತಿಗಳು ಬಹಳ ಬೇಗನೆ ವಿದ್ಯಾನಂದರ ಸಂಪರ್ಕ ಪಡೆದು ಅವರ ಮೂಲಕ ದಳ್ಳಾಳಿ ಪಟ್ಟವನ್ನು ಗಳಿಸಿಕೊಳ್ಳುತ್ತಾರೆ.

ಕರ್ನಾಟಕದಲ್ಲಿ ವಿದ್ಯಾನಂದರ ದಳ್ಳಾಳಿಗಳು ಅನೇಕರಿದ್ದಾರೆ. ಅವರಲ್ಲಿ ಮುಖ್ಯನಾದ ದಳ್ಳಾಳಿಯೊಬ್ಬ ಬೆಂಗಳೂರಿನಲ್ಲಿ ವಾಸಿಸುತ್ತಿದ್ದಾನೆ. ತುಮಕೂರು ಜಿಲ್ಲೆಯಲ್ಲಿ ಹುಟ್ಟಿದ ಈ ದಳ್ಳಾಳಿ ಈ ಮೊದಲು ಬೆಂಗಳೂರಿನ ಕಾರ್ಖಾನೆಯೊಂದರಲ್ಲಿ ಸಾಮಾನ್ಯ ಕೆಲಸಗಾರನಾಗಿದ್ದು ಅನಂತರ ಕಮೀಷನ್ ಏಜೆಂಟಾಗಿ ಮದರಾಸು-ಬೊಂಬಾಯಿಗಳನ್ನು ಸೇರಿದನು. ಈ ಊರುಗಳಲ್ಲಿದ್ದಾಗ ಈತ ಚಿನ್ನ ಮುತ್ತಿನಂತಹ ಬೆಲೆಬಾಳುವ ವಸ್ತುಗಳ ಕಳ್ಳಸಾಗಾಣಿಕೆಯಲ್ಲಿ ಚೆನ್ನಾಗಿ ಪಳಗಿದನು. ಕಪ್ಪು ಹಣವೂ ಯಥೇಚ್ಛವಾಗಿ ಸಂಗ್ರಹವಾಯಿತು. ದೊಡ್ಡ ಸಂಸ್ಥೆಯೊಂದರ ಪಾಲುದಾರನೂ ಆದನು. ಕಡೆಗೆ ಆ ಸಂಸ್ಥೆಯ ಪಾಲುದಾರರನ್ನೇ ಮುಳುಗಿಸುವ ಈತನ ಕುತಂತ್ರ ಪತ್ತೆಯಾದಾಗ ಆ ಪಾಲುದಾರರೆಲ್ಲಾ ಸೇರಿ ಇವನ ಭಾಗದ ಪಾಲನ್ನು ಕೊಟ್ಟು ಇವನನ್ನು ಸಂಸ್ಥೆಯಿಂದ ಹೊರದೂಡಿದರು.

ಈತ ತನ್ನದೇ ಆದ ಅಖಿಲಭಾರತ ವ್ಯಾಪ್ತಿಯ ಸಂಸ್ಥೆಯೊಂದನ್ನು ಕಟ್ಟಲು ತನ್ನ ಪಾಲಿನ ಹಣವನ್ನು ನೀರಿನಂತೆ ಖರ್ಚು ಮಾಡಿದನು. ಆದರೆ ಇವನ ಅದೃಷ್ಟ ಕೈಕೊಟ್ಟು ಕನಸು ಭಗ್ನವಾಗಿ ಆಸೆ ನುಚ್ಚು ನೂರಾಯಿತು. ಬಿತ್ತಿದ ಹಣ ಮೊಳೆಯಲೇ ಇಲ್ಲ. ಕಡೆಗೆ ಬೆಂಗಳೂರಿನಲ್ಲಿ ಕಟ್ಟಿಸಿದ್ದ ದೊಡ್ಡ ಬಂಗಲೆಯೊಂದು ಈತನ ಪಾಲಿಗುಳಿಯಿತು. ಈ ಹೊತ್ತಿಗಾಗಲೇ ಈತ ತನ್ನ ವಾಸಸ್ಥಳವನ್ನು ಬೊಂಬಾಯಿಯಿಂದ ಬೆಂಗಳೂರಿಗೆ ಬದಲಾಯಿಸಿದ್ದನು. ಕಳ್ಳ ವ್ಯಾಪಾರದಿಂದ ತನ್ನ ಕೈ ನಡೆಯುತ್ತಿದ್ದ ಕಾಲದಲ್ಲಿ ಈತ ಕರ್ನಾಟಕದಲ್ಲಿ ಅಲ್ಪಸ್ವಲ್ಪ ಹಣವನ್ನು ದೇವಸ್ಥಾನ, ಮಠ, ಸಂಸ್ಥೆ, ವಿದ್ಯಾರ್ಥಿಗಳಿಗೆ ದಾನ ಮಾಡುತ್ತಾ ತಾನೊಬ್ಬ ದಾನಶೂರಕರ್ಣ ಎಂಬಂತೆ ತನ್ನ ಹೊಗಳು ಭಟ್ಟರಿಂದ ಪ್ರಚಾರ ಮಾಡಿಸಿಕೊಂಡನು.

ಈ ಪ್ರಚಾರಬಲದಿಂದ ಕರ್ನಾಟಕದ ಅನೇಕ ಧಾರ್ಮಿಕ ಸಂಘಸಂಸ್ಥೆಗಳಲ್ಲಿ ಇವನು ಒಂಟೆಯಂತೆ ಪ್ರವೇಶಿಸಿ ಅಧಿಕಾರ ಸ್ಥಾನಗಳನ್ನು ಆಕ್ರಮಿಸಿಕೊಂಡನು. ಒಂದು ಶಿಕ್ಷಣ ಸಂಸ್ಥೆಯನ್ನು ಕುತಂತ್ರ ಮಾಡಿ ತನ್ನ ವಶಕ್ಕೆ ತೆಗೆದುಕೊಳ್ಳಲು ವಿಫಲ ಪ್ರಯತ್ನ ಮಾಡಿದನು. ಈ ಪ್ರಯತ್ನದಲ್ಲಿ ಕಾಲೇಜಿನ ಅಧ್ಯಾಪಕನೊಬ್ಬನು ಇವನ ಪರವಾಗಿ ನರ್ಮಸಚಿವನಂತೆ ಸಹಾಯಕನಾಗಿ ಕೆಲಸ ಮಾಡಿದನು. ಧಾರ್ಮಿಕ ಸಭೆ ಸಮಾರಂಭ

ಗಳಲ್ಲಿ ಭಾಗವಹಿಸಲು ಇವನು ಬರುತ್ತಿದ್ದಾಗ ಈತ ಗೋಮುಖ ವ್ಯಾಘ್ರನೆಂದು ತಿಳಿಯದ ಕೆಲವು ಹಿಂಬಾಲಕರು ಕ್ಷಣ ಕ್ಷಣಕ್ಕೂ ಈತನ ನಾಮಸ್ಮರಣೆ ಮಾಡುತ್ತಾ, ಕೇಲು ಕೊಟ್ಟು ಬೊಂಬೆಗಳಾಗಿ ಇವನ ಹಿಂದೆ ಮುಂದೆ ಸುತ್ತಾಡುತ್ತಿದ್ದರು.

ಈತನ ವ್ಯವಹಾರದ ಹಡಗು ಸಂಪೂರ್ಣವಾಗಿ ಮುಳುಗಿ ಹೋದ ಮೇಲೆ ಸಮಾಜೋದ್ಧಾರದ ಹೆಸರಿನಲ್ಲಿ ಧಾರ್ಮಿಕ ಸಂಘ ಸಂಸ್ಥೆಗಳ ಹೆಸರಿನಲ್ಲಿ ನಾನಾ ರೂಪಗಳಲ್ಲಿ ಹಣಸಂಗ್ರಹ ಮಾಡಿ ಅದನ್ನು ನಯವಾಗಿ ನುಂಗುವುದೇ ಈತನ ಪ್ರಧಾನ ಕಸುಬಾಯಿತು. ಈತನ ನೇತೃತ್ವದಲ್ಲಿ ನಡೆದ ದೇವಸ್ಥಾನ ಕಟ್ಟಡದ ಹಣಸಂಗ್ರಹ ಕಾರ್ಯ, ಧಾರ್ಮಿಕ ಸಂಸ್ಥೆಯ ಪರವಾಗಿ ಹಣಸಂಗ್ರಹಿಸುವ ಕಾರ್ಯ–ಇತ್ಯಾದಿ ಸಂದರ್ಭಗಳಲ್ಲಿ ಈತ ಸಂಗ್ರಹಿಸಿದ ಹಣ ಮತ್ತು ವೆಚ್ಚ ಮಾಡಿದ ಹಣದ ವಿಚಾರವಾಗಿ ಇದುವರೆಗೂ ಲೆಕ್ಕಪತ್ರಗಳು ಬಹಿರಂಗವಾಗಿಲ್ಲ. ಹಣನುಂಗುವುದರಲ್ಲಿ ಪಾಲು ಪಡೆದ ಅವನ ಜೊತೆಗಾರರೂ ಲೆಕ್ಕಕ್ಕಾಗಿ ಒತ್ತಾಯಪಡಿಸಿಲ್ಲ. ಪುಣ್ಯಕ್ಷೇತ್ರಗಳ ಯಾತ್ರೆಯ ಉದ್ದೇಶದಿಂದ ಜನರಿಂದ ತೆಗೆದುಕೊಂಡ ಹಣವನ್ನೂ ಇವನು ಮಾಯ ಮಾಡಿರುವುದುಂಟು. ಧರ್ಮಕ್ಕೆಂದು ಕೊಟ್ಟಹಣದ ಲೆಕ್ಕ ಕೇಳುವವರಿಗೆ ಇವನು ಬೆದರಿಕೆ ಹಾಕಿರುವ ಪ್ರಕರಣಗಳೂ ಇವೆ.

1981 ರ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕಕ್ಕೆ ವಿದ್ಯಾನಂದರು ಹಣ ದೋಚುವ ಪ್ರಧಾನ ಉದ್ದೇಶದಿಂದ ಬಂದಾಗ ಈ ಬೆಂಗಳೂರಿನ ಗೋಮುಖವ್ಯಾಘ್ರ ಅವರ ಪ್ರಮುಖ ದಳ್ಳಾಳಿಯಾಗಿ ಕೆಲಸಮಾಡಿದನು. ವಿದ್ಯಾನಂದರ ದುಷ್ಕೃತ್ಯಗಳಿಗೆಲ್ಲಾ ಬೆಂಗಾವಲಾಗಿ ನಿಂತನು.

ಈ ಕೃತಿಯ ಲೇಖಕ 1890 ರಲ್ಲಿ ವಿದ್ಯಾನಂದರಿಗೆ ನಾಲ್ಕು ಬಹಿರಂಗಪತ್ರಗಳನ್ನು ಬರೆದು ಅವರ ಚಾರಿತ್ರ್ಯಹೀನತೆಯನ್ನು ಬಯಲು ಮಾಡಿದಾಗ ಈ ಬೆಂಗಳೂರಿನ ದಳ್ಳಾಳಿ ತಾ. 28–12–1980 ರಂದು ಭದ್ರಾವತಿಗೆ ಬಂದು ಈ ಕೃತಿಯ ಲೇಖಕರನ್ನು ಭೇಟಿ ಮಾಡಿದನು. ವಿದ್ಯಾನಂದರು ದೊಡ್ಡವರು ಅವರನ್ನು ಪ್ರಶ್ನಿಸಲು ನಿಮಗೆ ಹಕ್ಕಿಲ್ಲ. ಅವರು ಮಾಡಿದ ಪಾಪವನ್ನು ಅವರು ಅನುಭವಿಸುತ್ತಾರೆ. ನಿಮ್ಮ ಪತ್ರಗಳಿಗೆ ಅವರೇಕೆ ಉತ್ತರ ನೀಡಬೇಕು ಎಂದು ಮುಂತಾಗಿ ಹುಂಬ ಮಾತುಗಳನ್ನಾಡಿದನು. ಈ ಮಾತುಗಳಿಗೆ ಮನ್ನಣೆ ಸಿಗದೆ ಹೋದಾಗ ಈ ದಳ್ಳಾಳಿ ತನ್ನಲ್ಲೇ ಗೊಣಗಿಕೊಳ್ಳುವುದರ ಮೂಲಕ ಸಮಾಧಾನ ಮಾಡಿಕೊಳ್ಳುತ್ತಾ ಎದ್ದು ಹೋದನು.

ತಾ. 20–3–1982 ರಂದು ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರದಲ್ಲಿ ಶ್ರವಣಬೆಳಗೊಳದ ಚಾರುಕೀರ್ತಿಸ್ವಾಮಿ ಧೂಬಿಟ್ಟು ಮೂವರು ಪುಂಡರು ಬಿ. ಎಸ್.

ನಂದಕುಮಾರರ ಮೇಲೆ ಹಲ್ಲೆ ಮಾಡಿದರು. ಆ ಸಮಯದಲ್ಲಿ ಅಲ್ಲಿಯೇ ಇದ್ದ ಈ ಬೆಂಗಳೂರಿನ ದಳ್ಳಾಳಿ ಹಲ್ಲೆಗಾರರಿಗೆ ಬೆಂಗಾವಲಾಗಿ ನಿಂತನು. ಮಾರನೆಯ ದಿನ ಹೊರನಾಡಿನ ಪ್ರಮುಖರೊಬ್ಬರು ನರಸಿಂಹರಾಜಪುರಕ್ಕೆ ಬಂದಾಗ ಈ ಹಲ್ಲೆಯ ಸುದ್ದಿ ಅವರಿಗೆ ತಿಳಿಯಿತು. ತಕ್ಷಣ ಅವರು ಅಲ್ಲಿಯೇ ವಾಸ್ತವ್ಯ ಹೂಡಿದ್ದ ಈ ಬೆಂಗಳೂರಿನ ದಳ್ಳಾಳಿಯನ್ನು ಕಂಡು "ಇದೇನು ನಿಮ್ಮಂತಹವರು ಇದ್ದರೂ ಕ್ಷೇತ್ರದಲ್ಲಿ ಇಂತಹ ಹಿಂಸಾಚಾರಕ್ಕೆ ಅವಕಾಶ ಮಾಡಿಕೊಡಬಹುದೆ ?" ಎಂದು ಪ್ರಶ್ನಿಸಿದರು. ಇದಕ್ಕೆ ಬೆಂಗಳೂರಿನ ದಳ್ಳಾಳಿ "ಪರಿಸ್ಥಿತಿ ನನ್ನ ಕೈಮೀರಿ ಹೋಗಿತ್ತು" ಎಂದು ತನ್ನ ನಡವಳಿಕೆ ಯನ್ನು ಸಮರ್ಥಿಸಿಕೊಂಡನು. ಈಗ ಈ ಬೆಂಗಳೂರಿನ ದಳ್ಳಾಳಿ ಕ್ರಿಮಿನಲ್ ಮೊಕದ್ದಮೆಯೊಂದರಲ್ಲಿ ಕೋರ್ಟಿನ ಕಟ್ಟೆಯನ್ನೂ ಹತ್ತುವಂತಾಗಿದೆ. ಧರ್ಮಸಂಸ್ಥೆ ಯೊಂದರ ದೊಡ್ಡ ಮೊತ್ತದ ಹಣವನ್ನು ಈತ ತಾನು ಆ ಸಂಸ್ಥೆಯ ಅಧ್ಯಕ್ಷನಾಗಿದ್ದ ಅವಧಿಯಲ್ಲಿ ಲೆಕ್ಕಕೊಡದೆ ತಿಂದುಹಾಕಿರುವ ವಂಚನೆಯ ಆಪಾದನೆ ಮೇಲೆ ಈತನ ವಿರುದ್ಧ ತಾ. 20-8-82 ರಂದು ಕ್ರಿಮಿನಲ್ ಮೊಕದ್ದಮೆಯೊಂದು ದಾಖಲಾಗಿದೆ.

### ಕೊನೆಗಾಣದ ಅಪರಾಧ ಪ್ರಜ್ಞೆ

ವಿದ್ಯಾನಂದರ ಜೀವನರಹಸ್ಯಗಳು ಮತ್ತು ಅವರು ಮಾಡಿರುವ ಸಮಾಜಘಾತುಕ ದುಷ್ಕೃತ್ಯಗಳು ಒಂದಲ್ಲ ಎರಡಲ್ಲ ನೂರಾರು ಸಾವಿರಾರು ! ಒಂದು ತಪ್ಪನ್ನು ಮುಚ್ಚಲು ಅವರು ನೂರಾರು ತಪ್ಪುಗಳನ್ನು ಮಾಡುತ್ತಲೇ ಹೋಗುತ್ತಾರೆ. ಶ್ರವಣಬೆಳಗೊಳದ ಚಾರುಕೀರ್ತಿ ಸ್ವಾಮಿಗಳ ಮೋಸದ ರಶೀದಿಪುಸ್ತಕಗಳ ಮೂಲಕ ಮಾಡುತ್ತಿದ್ದ ಕಳ್ಳ ತನವನ್ನು ಮೈಸೂರಿನ ಸಿ.ಬಿ.ಎಂ. ಚಂದ್ರಯ್ಯನವರು ಬಯಲು ಮಾಡಿದರು. ಚಾರು ಕೀರ್ತಿಗಳ ಕಳ್ಳ ಕಾರ್ಯಕ್ಕೆ ಬೆಂಬಲವಾಗಿ ನಿಂತ ವಿದ್ಯಾನಂದರು ಚಂದ್ರಯ್ಯನವರನ್ನು ನಿರ್ನಾಮ ಮಾಡಲು ಕಂಕಣತೊಟ್ಟರು. ಇದಕ್ಕಾಗಿ ಅನೇಕ ಅಪರಾಧಗಳನ್ನು ವಿದ್ಯಾ ನಂದರು ನಿರಂತರವಾಗಿ ಮಾಡಬೇಕಾಯಿತು. ಹೀಗೆ ಕೊನೆಗಾಣದ ಅಪರಾಧಪ್ರಜ್ಞೆ ಅವರ ಜೀವನದ ಉಸಿರಾಗಿ ಹೋಗಿದೆ. ಅವರಲ್ಲಿರುವ ಇಂತಹ ಅಪರಾಧಪ್ರಜ್ಞೆ ಯಿಂದಾಗಿ ಅವರ ಕಪಟ ಜೀವನವನ್ನು ಬಟ್ಟಬಯಲು ಮಾಡುವ ಈ ಪುಸ್ತಕ ರಚನೆ ಯಾಗುವ ಸನ್ನಿವೇಶ ನಿರ್ಮಾಣವಾಗುವಂತಾಯಿತು. ನೂರಾರು ಸಾಕ್ಷ್ಯಾಧಾರಗಳನ್ನು ಕೊಟ್ಟು ಇಂತಹ ನೂರಾರು ಪುಸ್ತಕಗಳನ್ನು ಬರೆದರೂ ಸಹ ವಿದ್ಯಾನಂದರು ತಮ್ಮ ನಡತೆಯನ್ನು ತಿದ್ದಿಕೊಳ್ಳುವವರೇನಲ್ಲ. ಪ್ರತಿವಾದಿಗಳಿಗೆ ಬೆದರಿಕೆ ಹಾಕುವ ಇಲ್ಲವೆ ಅವರಿಗೆ ಬೆನ್ನುತೋರಿಸಿ ಓಡುವ ಕಲೆ ಅವರಲ್ಲಿ ರಕ್ತಗತವಾಗಿ ಹೋಗಿದೆ. ವಸ್ತ್ರತ್ಯಾಗ ದೊಂದಿಗೆ [ಚಾರಿತ್ರ್ಯವನ್ನೂ ತ್ಯಾಗಮಾಡಿದ ದಿಗಂಬರರು ಮಾತ್ರ ಇಂತಹ ಭಂಡ ಜೀವನವನ್ನು ನಡೆಸಬಲ್ಲರು ಎಂಬುದು ಸಾಮಾನ್ಯರಿಗೂ ತಿಳಿಯುವ ವಿಚಾರ.



# ಉಪಸಂಹಾರ

ನುಡಿಯುವುದು ಅತಿಸುಲಭ, ಆದರೆ ಅದರಂತೆ ನಡೆಯುವುದು ಬಹಳ ಕಷ್ಟ. ವಿದ್ಯಾನಂದರು ತಾವು ರಾಮಾಯಣದ ಬಹುತೇಕ ಗ್ರಂಥಗಳನ್ನು ಅಭ್ಯಾಸಮಾಡಿರುವುದಾಗಿ ಹೇಳಿಕೊಳ್ಳುತ್ತಾರೆ. ರಾಮಾಯಣದ ಬಗ್ಗೆ ಇವರು ಉಪನ್ಯಾಸ ಮಾಡುತ್ತಾ ಸೀತಾಪರಿತ್ಯಾಗದ ಕರುಣಾಜನಕ ಪ್ರಸಂಗವನ್ನು ಜನರಿಗೆ ವಿವರಿಸಿ ಹೇಳುತ್ತಾರೆ. ಆ ಸಂದರ್ಭದಲ್ಲಿ ಇವರು "ನನ್ನನ್ನು ಬಿಟ್ಟಹಾಗೆ ಧರ್ಮವನ್ನು ಮಾತ್ರ ಬಿಡಬೇಡವೆಂದು ರಾಮನಿಗೆ ಹೇಳು" ಎಂದು ಸೀತೆ ಲಕ್ಷ್ಮಣನಿಗೆ ಹೇಳುವ ಮಾತುಗಳನ್ನು ತಪ್ಪದೆ ಹೇಳುತ್ತಾರೆ. ಹಾಗೆಯೇ "ನಾವು ರಾಮನನ್ನು ಕಂಡಿಲ್ಲ ಕೇಳಿದ್ದು ಮಾತ್ರ ಆದರೆ ಅವನ ಬಗೆಗೆ ನಮ್ಮ ಮನಸ್ಸಿನಲ್ಲಿ ಅಪಾರಶ್ರದ್ಧೆಯಿದೆ, ಭಕ್ತಿಯಿದೆ ಏಕೆಂದರೆ ರಾಮ ತನ್ನ ಜೀವನದ ಆದರ್ಶ ಇತಿಹಾಸವನ್ನು ಬಿಟ್ಟುಹೋಗಿದ್ದಾನೆ. ಆ ಸಚ್ಚಾರಿತ್ರ್ಯದ ಮುಂದೆ ನಮ್ಮ ತಲೆ ಬಾಗುತ್ತದೆ." ಎಂದೂ ಸಹ ಉಪದೇಶ ಮಾಡಿದ್ದಾರೆ.

ಈ ಸಂದರ್ಭದಲ್ಲಿ ವಿದ್ಯಾನಂದರ ಮೇಲಿನ ಮಾತುಗಳನ್ನು ಅವರಿಗೇ ಅನ್ವಯಿಸಿ ಪ್ರಶ್ನಿಸಬೇಕಾಗಿದೆ.

ಶ್ರೀರಾಮ ತನ್ನ ಬಗ್ಗೆ ಜನಾಭಿಪ್ರಾಯಗಳನ್ನು ತಿಳಿದುಕೊಳ್ಳುವುದಕ್ಕಾಗಿ ಗೂಢಚಾರರನ್ನು ನೇಮಿಸಿದ್ದ. ಒಮ್ಮೆ ಮಡಿವಾಳನೊಬ್ಬನು ಬಹಳ ದಿನಗಳ ಕಾಲ ತೌರಿನಲ್ಲಿದ್ದು ಬಂದ ತನ್ನ ಹೆಂಡತಿಯನ್ನು ಮನೆಗೆ ಸೇರಿಸಲು ಇಷ್ಟಪಡದೆ "ನಿನ್ನನ್ನು ಮನೆಗೆ ಸೇರಿಸಿಕೊಳ್ಳಲು ನಾನೇನು ರಾಮನಲ್ಲ" ಎಂದು ಹೇಳುತ್ತಾನೆ. ಆತ ತನ್ನ ಮನೆಯ ಏಕಾಂತದಲ್ಲಿ ಆಡಿದ ಮಾತುಗಳು ಗೂಢಚಾರರ ಕಿವಿಗೆ ಬಿದ್ದು ಅದು ರಾಮನನ್ನು ತಲುಪುತ್ತದೆ.

ಎಲ್ಲರ ಮುಂದೆ ಅಗ್ನಿಪರೀಕ್ಷೆಗೊಳಗಾದ ಸೀತೆಯ ವಿಚಾರವಾಗಿ ಅಪಾರ್ಥ ಬರುವಹಾಗೆ ಅನುಚಿತವಾಗಿ ಮಾತನಾಡಿದ ಆ ಮಡಿವಾಳನನ್ನು ರಾಮ ಇಷ್ಟಪಟ್ಟಿದ್ದರೆ ಶಿಕ್ಷಿಸಬಹುದಾಗಿತ್ತು. ಅಥವಾ ಯಾರೋ ಒಬ್ಬ ಅದರಲ್ಲೂ ತನ್ನ ಮನೆಯಲ್ಲಿ ಮಾತನಾಡಿಕೊಂಡಿದ್ದಾನೆ. ಬಹಿರಂಗವಾಗದ ಈ ಸಣ್ಣ ಮಾತಿಗೆ ಗಮನ ಕೊಡಬೇಕಾದ್ದಿಲ್ಲ, ಅಲ್ಲದೆ ಅವನು ನನ್ನನ್ನೇನೂ ನೇರವಾಗಿ ಪ್ರಶ್ನಿಸಿಲ್ಲವಲ್ಲ ಎಂದು ರಾಮ ಆತನ ಮಾತುಗಳನ್ನು ಉಪೇಕ್ಷೆಮಾಡಬಹುದಾಗಿತ್ತು. ಅಥವಾ ಮಡಿವಾಳನಿಗೆ ಸೀತೆಯ ಅಗ್ನಿಪರೀಕ್ಷೆಯ ವಿಚಾರ ಹೇಳಿ ಸೀತೆಯ ಪರಿಶುದ್ಧತೆಯನ್ನು ಮನದಟ್ಟು ಮಾಡಿಕೊಟ್ಟು ಅವನ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಬಹುದಿತ್ತು. ರಾಮನೇನಾದರೂ ಈ ರೀತಿಗಳಲ್ಲಿ ನಡೆದುಕೊಂಡಿದ್ದರೆ ಅವನ ಕೀರ್ತಿಗೆ ಕಳಂಕ ಬರುವ

ಸಂಘವನ್ನೂ ಬಹುಶಃ ಇರುತ್ತಿರಲಿಲ್ಲ. ಆದರೆ ರಾಮ ಜನಾಭಿಪ್ರಾಯಕ್ಕೆ ಮನ್ನಣೆ ಕೊಟ್ಟವನೂ, ಲೋಕಾಪವಾದಭಯವುಳ್ಳವನೂ ಆದ ಮಹಾಪುರುಷ. ಇದರಿಂದಾಗಿ ಅವನು ಪ್ರಜೆಯೊಬ್ಬನ ತಪ್ಪುತಿಳುವಳಿಕೆಯ ಮಾತುಗಳನ್ನೂ ಸಹ ಜನಾಭಿಪ್ರಾಯ ವೆಂದು ಪರಿಗಣಿಸಿ ಅದಕ್ಕೆ ಮಾನ್ಯತೆ ನೀಡಿ ನಿಷ್ಕಳಂಕಿತೆಯಾದ ತನ್ನ ಪ್ರೀತಿಪಾತ್ರ ಪತ್ನಿ ಯನ್ನು ಅದೂ ಆಕೆ ಗರ್ಭಿಣಿಯಾಗಿದ್ದರೂ ತೊರೆಯುವ ಅಚಲನಿರ್ಧಾರ ಮಾಡಿದನು.

ರಾಮನ "ಆ ಸಚ್ಚಾರಿತ್ರ್ಯದ ಮುಂದೆ ನಮ್ಮ ತಲೆ ಬಾಗುತ್ತದೆ." ಎಂದು ವಿದ್ಯಾನಂದರು ಹೇಳಿರುವಾಗ ಜನಾಭಿಪ್ರಾಯಕ್ಕೆ ಮನ್ನಣೆ ನೀಡುವ ರಾಮನ ಉದಾತ್ತಗುಣಕ್ಕೂ ವಿದ್ಯಾನಂದರು ತಲೆಬಾಗುತ್ತಾರೆಂದು ಅರ್ಥವಾಗುತ್ತದೆ. ವಿದ್ಯಾ ನಂದರ ನಡವಳಿಕೆ ಹೀಗಿದ್ದ ಪಕ್ಷದಲ್ಲಿ, ಈ ಕೃತಿಯ ಲೇಖಕನಾದ ನಾನು ವಿದ್ಯಾನಂದರು ಧರ್ಮಬಿಟ್ಟು ನಡೆಯುತ್ತಿರುವುದನ್ನು ಸಾಕ್ಷ್ಯಾಧಾರಗಳ ಸಮೇತ ಪುಸ್ತಕರೂಪದಲ್ಲಿ ಬರೆದು ಮುದ್ರಿಸಿ ಪುಸ್ತಕಗಳನ್ನು ಸಾರ್ವತ್ರಿಕವಾಗಿ ಹಂಚಿದ್ದರೂ ವಿದ್ಯಾನಂದರು ಏಕೆ ಏನೂ ತಿಳಿಯದವರಂತೆ ಇದ್ದಾರೆ ? ಪುಸ್ತಕವನ್ನೇ ಅವರಿಗೆ ಕಳುಹಿಸಿದರೂ ಏಕೆ ಅದನ್ನು ತೆಗೆದುಕೊಳ್ಳುತ್ತಿಲ್ಲ ? ಶ್ರೀರಾಮನನ್ನು ಹೊಗಳಿ ಅವನ ಆದರ್ಶವನ್ನು ಅನುಸರಿಸಿರಿ ಎಂದು ಜನರಿಗೆಲ್ಲಾ ಉಪದೇಶ ಮಾಡುವ ವಿದ್ಯಾನಂದರು ತಮ್ಮ ಮೇಲೆಯೇ ಗಂಭೀರವಾದ ಮತ್ತು ಗುರುತರವಾದ ಆಪಾದನೆಗಳು ಆಧಾರಯುತವಾಗಿ ಬಹಿರಂಗವಾಗಿ ಬಂದಾಗ ಏಕೆ ಉಸಿರನ್ನು ಅಡಗಿಸಿಕೊಂಡಿದ್ದಾರೆ ?

ಈ ಗ್ರಂಥ ಪ್ರಕಟವಾದ ಮೇಲೂ ವಿದ್ಯಾನಂದರು ತಾವು ಆಷಾಢಭೂತಿ ಗಳಲ್ಲ ಎಂದು ಹೇಳುವುದಾದರೆ ಅವರು ಹೇಡಿತನವನ್ನು ಬಿಟ್ಟು ನನ್ನ ಬರವಣಿಗೆಗಳಿಗೆ ಪ್ರಾಮಾಣಿಕವಾದ ಪ್ರತಿಕ್ರಿಯೆ ತೋರಲಿ. ಅಥವಾ ನನ್ನೊಂದಿಗೆ ಬಹಿರಂಗವಾಗಿ ವಾದಕ್ಕೆ ಇಳಿಯಲಿ.

ಬಿ.ಎಸ್. ನಂದಕುಮಾರ್
ತಾ. 22-8-1982
ಭದ್ರಾವತಿ

—o—

# ಕೆಲವು ಭಾವಚಿತ್ರಗಳು



**ಜಂಬುಕುಮಾರ್ ಪಾರ್ಶ್ವನಾಥ ಶಿರಟಿ**

ಆಷಾಢಭೂತಿ ವಿದ್ಯಾನಂದರು ಹಿಂದೆ ಶೇಡಬಾಳದ ಅನಾಥಾಶ್ರಮದಲ್ಲಿ ಪಾರ್ಶ್ವಕೀರ್ತಿಗಳೆಂಬ ಹೆಸರಿನಿಂದ ಅಧಿಷ್ಠಾತರಾಗಿ ಆಡಳಿತ ನಡೆಸುತ್ತಿದ್ದಾಗ ಅವರ ದುರಾಚಾರಗಳನ್ನು ವಿರೋಧಿಸಿದ ಸಾತ್ವಿಕ ಪುರುಷರು ಶಿರಟೆಯವರು. ಇವರಿಂದಾಗಿ ಪಾರ್ಶ್ವಕೀರ್ತಿಗಳು ಆಶ್ರಮದಿಂದ ಉಚ್ಚಾಟನೆಗೊಂಡರು. ಶಿರಟೆಯವರು ಈಗ ಸಾಂಗಲಿಯಲ್ಲಿ ನಿವೃತ್ತ ಜೀವನ ನಡೆಸುತ್ತಿದ್ದಾರೆ. ಇವರ ವಯಸ್ಸು ಸುಮಾರು 65 ವರ್ಷ,



**ನ್ಯಾಯಮೂರ್ತಿ ಪಿ. ಹೆಚ್. ಗುಂಜಾಳ್**

ಆಷಾಢಭೂತಿ ವಿದ್ಯಾನಂದರು ಕ್ಷುಲ್ಲಕ ಪಾರ್ಶ್ವಕೀರ್ತಿಗಳಾಗಿದ್ದಾಗ ಅವರು ಹೊಂಬುಜ ಕ್ಷೇತ್ರದ ಉತ್ತರಾಧಿಕಾರಿಯಾಗುವುದನ್ನು ಪ್ರಬಲವಾಗಿ ಬಹಿರಂಗವಾಗಿ ವಿರೋಧಿಸಿದ ಧರ್ಮಪ್ರೇಮಿಗಳು ಗುಂಜಾಳರು. ಇವರು ತಾ. 5-10-1967ರಂದು ದೈವಾಧೀನರಾದರು. (ಅಧ್ಯಾಯ 10ನ್ನು ನೋಡಿ)



ಗುಳಕೊಪ್ಪ ಪದ್ಮರಾಜಯ್ಯ

ಆಷಾಢಭೂತಿ ವಿದ್ಯಾನಂದರು ಪಾರ್ಶ್ವಕೀರ್ತಿಗಳಾಗಿದ್ದಾಗ ಅವರು ಹೊಂಬುಜದಲ್ಲಿ ಮಾಡಿದ ವ್ಯಭಿಚಾರದ ಸುದ್ದಿಯನ್ನು ಆಗಿನ ಶ್ರೀ ದೇವೇಂದ್ರಕೀರ್ತಿಸ್ವಾಮಿಗಳಿಗೆ ಮೊದಲು [illegible] ಸಾಹಸಿಗಳು ಪದ್ಮರಾಜಯ್ಯನವರು. ಪದ್ಮಾವತಿದೇವಿಯ ನಿಷ್ಠಾವಂತ ಭಕ್ತರಾದ ಇವರಿಂದಾಗಿ ಪಾರ್ಶ್ವಕೀರ್ತಿಗಳು ಹೊಂಬುಜದಿಂದ ಪಲಾಯನ ಮಾಡಬೇಕಾಯಿತು. ಇವರು ಈಗಲೂ ಹೊಂಬುಜದಲ್ಲಿ ವಾಸಿಸುತ್ತಿದ್ದಾರೆ. ಕುಂಭದ ರಥೋತ್ಸವದಲ್ಲಿ ಇವರಿಗೆ ಸುತ್ತುಸೇವೆಯ ಒಂದು ಪ್ರಮುಖ ಜವಾಬ್ದಾರಿಯುಂಟು.

ಇವರ ಜನ್ಮದಿನ ತಾ॥ 22-11-1922



ಹೊಂಬುಜದ ರಥೋತ್ಸವದ ದಿನ ಸಂಜೆ ನಡೆಯುವ ಪದ್ಮಾವತಿದೇವಿಯ ಸುತ್ತು ಸೇವೆಯ- ಕಾರ್ಯಕ್ರಮ. ಇದರಲ್ಲಿ ದೇವಿಯನ್ನು ಗರ್ಭಗುಡಿಗೆ ಸ್ವಾಗತಿಸುವ ಕಾರ್ಯದಲ್ಲಿ ಪದ್ಮರಾಜಯ್ಯನವರು ನಿರತರಾಗಿರುವುದನ್ನು ಕಾಣಬಹುದು. ಈ ಚಿತ್ರ 1982ನೇ ರಥೋತ್ಸವದಲ್ಲಿ ತೆಗೆದದ್ದು. (ಅಧ್ಯಾಯ 11 ಮತ್ತು 12ನ್ನು ನೋಡಿ)



ಎಡದಿಂದ ಬಲಕ್ಕೆ: ಆಷಾಢಭೂತಿ ವಿದ್ಯಾನಂದರು. ಅವರ ಮಧ್ಯವರ್ತಿಗಳಲ್ಲಿ ಒಬ್ಬರಾದ ಶ್ರವಣಬೆಳಗೊಳದ ಚಾರುಕೀರ್ತಿ ಭಟ್ಟಾರಕರು. ವಿದ್ಯಾನಂದರ ಕುತಂತ್ರಕ್ಕೆ ಒಳಗಾಗಿ ಅವರಿಗೆ ತಾ. 17-11-78ರಂದು ಅಕ್ರಮವಾಗಿ ಏಲಾಚಾರ್ಯ ಪದವಿ ನೀಡಿದವರಲ್ಲಿ ಒಬ್ಬರಾದ ಕೊಲ್ಲಾಪುರದ ಲಕ್ಷ್ಮಿಸೇನ ಭಟ್ಟಾಗಕರು.
(20ನೇ ಅಧ್ಯಾಯ ನೋಡಿ)



ಎಡದಿಂದ ಬಲಕ್ಕೆ : ಆಷಾಢಭೂತಿ ವಿದ್ಯಾನಂದಮುನಿ, ಮೂಡಬಿದರೆಯ ಚಾರುಕೀರ್ತಿ ಭಟ್ಟಾರಕರು, ಶ್ರವಣಬೆಳಗೊಳದ ಚಾರುಕೀರ್ತಿಭಟ್ಟಾರಕರು, ಕೊಲ್ಲಾಪುರದ ಲಕ್ಷ್ಮಿಸೇನ ಭಟ್ಟಾರಕರು, ನರಸಿಂಹರಾಜಪುರದ ಲಕ್ಷ್ಮಿಸೇನ ಭಟ್ಟಾರಕರು, ಮತ್ತು ನಾಂದಣಿಯ ಜಿನಸೇನ ಭಟ್ಟಾರಕರು. ಈ ಚಿತ್ರವನ್ನು ತಾ. 19-11-78ರಂದು ದೆಹಲಿಯಲ್ಲಿ ತೆಗೆಯಲಾಯಿತು.



ಆಷಾಢಭೂತಿ ವಿದ್ಯಾನಂದಮುನಿಗಳಿಂದ ಹೆತ್ತತಾಯಿಗೆ ಆಶೀರ್ವಾದ.
(ಪುಟ 157ನ್ನು ನೋಡಿ)




ವಿದ್ಯಾನಂದರ ಆಷಾಢಭೂತಿತನವನ್ನು ಸಮರ್ಥಿಸುವ ಒಂದು ಅಂಚೆಯ ಪುರಾವೆ.

ವಿದ್ಯಾನಂದರು 1980ರಲ್ಲಿ ನಡೆಸಿದ ದೌರ್ಜನ್ಯಗಳಿಗೆ ಪ್ರತಿಕ್ರಿಯೆಯಾಗಿ 1981ರಲ್ಲಿ ಪ್ರಕಟವಾದ 'ಮುನಿ ವಿದ್ಯಾನಂದರು ಸುಳ್ಳಾಡಿದ್ದೇಕೆ ?' ಪುಸ್ತಕವನ್ನು ಅಂಚೆಯ ಮೂಲಕ ಅವರಿಗೇ ಕಳುಹಿಸಿದಾಗ ಅವರು ಪುಸ್ತಕವನ್ನು ತೆಗೆದುಕೊಳ್ಳಲು ನಿರಾಕರಿಸಿ ತಮ್ಮ ಕಪಟತನವನ್ನು ಸಾಬೀತುಪಡಿಸಿದರು.

# ಅನುಬಂಧ : ೧



ಕಾಶೀಬಾಯಿ ದತ್ತು ಘೋರ್ಪಡೆ

ಹಿಂದೆ ಶೇಡಬಾಳದ ಅನಾಥಾಶ್ರಮದಲ್ಲಿ ಕೆಲಸಮಾಡುತ್ತಿದ್ದ ಹೆಣ್ಣಾಳುಗಳ ಪೈಕಿ ಒಬ್ಬಾಕೆ. ಆಷಾಢಭೂತಿ ವಿದ್ಯಾನಂದರು ಪಾರ್ಶ್ವಕೀರ್ತಿಗಳಾಗಿ ಶೇಡಬಾಳದ ಅನಾಥಾಶ್ರಮದಲ್ಲಿ ಆಡಳಿತ ನಡೆಸುತ್ತಿದ್ದಾಗ ಈಕೆ ಅಲ್ಲಿ ದುಡಿಯುತ್ತಿದ್ದಳು. ತನಗೆ ಬರಬೇಕಾದ ಪಗಾರ (ಸಂಬಳ)ದ ಪೈಕಿ 200 ರೂಪಾಯಿಗಳನ್ನು ಕೊಡದೆ ವಂಚಿಸಿದ್ದಾರೆಂದು ಈಕೆ ಅಂದಿನ ಆಡಳಿತಗಾರರ ಮೇಲೆ ಆಪಾದನೆ ಹೊರಿಸುತ್ತಾಳೆ. ಈಗಲೂ ಇವಳು ಸಾಂಗಲಿಯಲ್ಲಿ ಬಡತನದ ಜೀವನವನ್ನು ನಡೆಸುತ್ತಿದ್ದಾಳೆ. ಈಗ ಈಕೆಯ ವಯಸ್ಸು, ಸುಮಾರು 60–65 ಇರಬಹುದು ಈ ಭಾವಚಿತ್ರ, 1982ನೇ ವರ್ಷದಲ್ಲಿ ತೆಗೆದದ್ದು.

# ಅನುಬಂಧ : ೨

ಈ ಪುಸ್ತಕ ಅಚ್ಚಿಗೆ ಹೋಗಲು ಸಿದ್ಧವಾಗಿದ್ದಾಗ ತಾ. 2–9–82ರ ಅಂಚೆ ಯಲ್ಲಿ, ಶೇಡಬಾಳದವರೊಬ್ಬರಿಂದ ನನ್ನ ವಿಳಾಸಕ್ಕೆ ಒಂದು ಪತ್ರ ಬಂದಿತು. ವಿವಾ ಹಿತ ಮಹಿಳೆಯೊಬ್ಬರ ಮೇಲೆ ಅತ್ಯಾಚಾರ ಮಾಡಿದ ತಮ್ಮ ಸಂಬಂಧಿಕನೊಬ್ಬನಿಗೆ ವಿದ್ವಾಂಸರು ಹೇಗೆ ರಕ್ಷಣೆ ಕೊಡುತ್ತಿದ್ದಾರೆ ಎಂಬ ವಿಚಾರ ಆ ಪತ್ರದಲ್ಲಿತ್ತು. ಪತ್ರದ ಮುಖ್ಯ ವಿವರ ಕೆಳಗಿದೆ :

"ನೀವು ನ್ಯಾಯ–ನೀತಿಗಳನ್ನು ಎತ್ತಿಹಿಡಿಯುವ ನ್ಯಾಯ ನಿಷ್ಠುರವಾದಿಗಳೆಂದು ಪ್ರಸಿದ್ಧ ಆಗಿದ್ದೀರಿ. ಬೆಳಕಿಗೆ ತರುತ್ತಿರುವ ಶೇಡಬಾಳ ಊರ ಇತಿಹಾಸದಲ್ಲಿ ದುರ್ಘ ಟನೆ ಸಂಭವಿಸಿದೆ. ಕನ್ನಡ ಮರಾಠಿ-ದಿನಪತ್ರಿಕೆಗಳಲ್ಲಿ ಸುದ್ದಿ ಬಂದಿದೆ. ಸಂಗಡ ಇದ್ದ ಸುದ್ದಿಯನ್ನು.. ....ಪ್ರಕಟಿಸಿ ನಾಲ್ಕಾರು ಅದರ ಪ್ರತಿಗಳನ್ನು ಕೆಳಗಿನ ಪತ್ತೆಯ ಮೇಲೆ ಕಳಿಸಿರಿ. ನೀವು ಸಮಯ ಸಿಕ್ಕಾಗ ಊರಿಗೆ ಒಂದರೆ ಎಲ್ಲ ವಿವರ ತಿಳಿಯುತ್ತದೆ."

ಪತ್ರದ ಜೊತೆಗಿದ್ದ ಸುದ್ದಿ ಹೀಗಿದೆ :

**ಬಸ್ತಿಯ ಅರ್ಚಕನ ಕರ್ಮ ಕಥೆ**

ಬೆಳಗಾವಿ ಜಿಲ್ಲೆಯಲ್ಲಿ ಶೇಡಬಾಳ ಎಂಬುದು ಒಂದು ಊರು. ಜೈನಧರ್ಮದ ಜಾಗ್ರತೆಯಿಂದ ಕೂಡದ ಸಮಾಜವಿದೆ. ಶ್ರೀ.. ...ಜಿನಮಂದಿರ ಪುರಾತನವಿದ್ದು ಸಮಾಜದ ಅಧೀನಕ್ಕೆ ಒಳಪಟ್ಟಿದೆ. ಪ್ರತಿ ವರುಷ ಪಾಳಿಯ ಪ್ರಕಾರ ಅರ್ಚಕರಿಂದ ಪೂಜೆ–ಪುರಸ್ಕಾರ ನಡೆಯುತ್ತಿದೆ.....................ಎಂಬುವನು ಆಧ್ಯತೆಯ ಅರ್ಚಕ. ನೋಂಪಿ ವಿಧಿ–ವಿಧಾನಗಳಲ್ಲಿ ಬಲ್ಲವನೆಂದು ಗರ್ವದಿಂದ ಮೆರೆಯುತ್ತಿದ್ದಾನೆ. ಅವನು ತುಂಬಾ ವಿಷಯಲಂಪಟ, ಕಾಮಾಸಕ್ತ. ವಯಸ್ಸು ೫೦ರ ಮೇಲೆ. ಹಲವು ಕಡೆಗೆ ಅವನು ವಿಷಯವಾಸನೆ ಹರಿ ಬಿಟ್ಟಿದ್ದ. ಆದರೆ ಅದು ಗುಪ್ತವಾಗಿತ್ತು. ಆದರೆ ಕೆಲವು ದಿನಗಳ ಹಿಂದೆ ತಮ್ಮ ಸ್ವಬಂಧುವರ್ಗದ ಎಳೆವಯಸ್ಸಿನ (೨೦ ವರ್ಷ) ಮಹಿ ಳೆಯ ಮೇಲೆ ಬಲಾತ್ಕಾರ ಮಾಡಿದ. ಗಂಡನು ಸಂಭಾವಿತನಿದ್ದು ದಿಕ್ಕು ತೋರದೆ ಊರಲ್ಲಿಯ ಕೆಲವು ಜೈನ ಮುಖಂಡರಿಗೆ ತನ್ನ ದುಃಖವನ್ನು ತೋಡಿಕೊಂಡನು. ಪುಂಡ ಪಂಡಿತನಿಗೆ ಹೇಳುವ ಧೈರ್ಯ ಮಾಡಲಿಲ್ಲ ಆ ಮುಖಂಡರು. ಆ ಅವಿಚಾರಿ ಅರ್ಚಕನ ದುಷ್ಟತನಕ್ಕೆ ಹೆದರಿ ಆ ಬಡಪಾಯಿಯು ತನ್ನ ಹೆಂಡತಿಯನ್ನು ಕರೆದುಕೊಂಡು ನೆರೆ ಹಳ್ಳಿಗೆ ಹೋದನು.

ಈ ಸುದ್ದಿ ಊರಲ್ಲೆಲ್ಲಾ ಹರಡಿತು. ತರುಣರಕ್ತ ಕುದಿಯಿತು. ಅನ್ಯಾಯಕ್ಕಾಗಿ ಜನ ಸಿಡಿದೆದ್ದಿತು. ದಿನಾಂಕ ೨೬. ೭–೮೨ನೇ ದಿವಸ ಸಂಜೆಗೆ ಸುಮಾರು ಎರಡು ಸಾವಿರ ಜನರು ಮಂದಿರದ ಆವರಣದಲ್ಲಿ ಕೂಡಿದರು. ಅವನು ಶೀಲಭ್ರಷ್ಟನಿದ್ದು ಮನೆಗೆ ಹೋಗಲು ಹಾಗೂ ಭಗವಂತನ ಪೂಜಾವಿಗಳನ್ನು ಮಾಡಲು ಅಯೋಗ್ಯನೆಂದು ನಿರ್ಧರಿಸಿ ಬಸ್ತಿಯಿಂದ ಹೊರಗೆ ಹಾಕಿದರು. ಅವನು ಹೆದರಿ ಊರುಬಿಟ್ಟು ಹೋಗಿ ತಮ್ಮವರಾದ ಶ್ರೀ ಏಲಾಚಾರ್ಯ ವಿದ್ಯಾನಂದ ಮುನಿಗಳಿಗೆ ಶರಣು ಹೋದನು. ಮಹಾವ್ರತಧಾರಿಗಳಾದ ಆ ಮುನಿಗಳು ಸಾರಾಸಾರಾ ವಿಚಾರ ಮಾಡದೆ ತಮ್ಮ ಪ್ರತಿಷ್ಠೆಯ ಪ್ರಶ್ನೆವೆಂದು ಆ ಅರ್ಚಕನ ಬೆನ್ನು ಕಟ್ಟಿದರು. ದಕ್ಷಿಣ ಭಾರತ ಜೈನ ಸಭೆಯ ಮುಖಂಡರನ್ನು ಊರಿಗೆ ಕಳಿಸಿ ಜನರನ್ನು ಹೆದರಿಸ ಹತ್ತಿದರು. ಪೋಲೀಸ ಅಧಿಕಾರಿಗಳ ಕೂಡ ಪಾರ್ಟಿಯೊಂದಿಗೆ ಆ ಅರ್ಚಕನನ್ನು ಊರಿಗೆ ಕಳುಹಿಸಿದರು. ಸರಕಾರಿ ಚಾವಡಿಯಲ್ಲಿ ಸಾವಿರಾರು ಜನಸೇರಿ ಸಾಧ್ಯಂತವಾಗಿ ವಿವರಣೆ ನೀಡಿದರು. "ನಮ್ಮ ಸಮಾಜ, ಹಾಗೂ ಧರ್ಮದ ಗೌರವದ ಪ್ರಶ್ನೆಯಿದೆ. ನೀವು ಹಸ್ತಕ್ಷೇಪ ಮಾಡುವುದು ಸರಿಯಾಗಲಾರದು" ಎಂದು ತಿಳಿಸಿದರು. ಜನತೆಯ ಅನಿಸಿಕೆ ಹಾಗೂ ಅವರ ಐಕ್ಯವನ್ನು ಕಂಡು ಪೋಲೀಸ ಅಧಿಕಾರಿಗಳು ಅವನನ್ನು ಕರೆದುಕೊಂಡು ಬಂದಂತೆ ತಿರುಗಿ ಹೋದರು. ಇದರಿಂದ ಆ ಅರ್ಚಕನ ಬೆಂಬಲಿಗರಿಗೆ ಮತ್ತಷ್ಟು ಸಿಟ್ಟು ಬಂತೇನೋ ! ಕೆಲವು . .. .. ಅಧಿಕಾರಿಗಳಿಗೆ ಆಸೆ–ಆಮಿಷ ತೋರಿಸಿ, ಕೆಲವು ಗುಂಡಾ ಜನರ ದರ್ಪವನ್ನು ಪ್ರದರ್ಶಿಸುತ್ತಾ ಆ ಅರ್ಚಕನನ್ನು ಮನೆಯಲ್ಲಿ ತಂದು ಬಿಟ್ಟಿದ್ದಾರೆ. ಮನೆಗೆ ದಿನಾಲು ಪೋಲೀಸ ಕಾವಲು ಇದೆ. ಸಮಾಜಕ್ಕೆ ಈ ದಬ್ಬಾಳಿಕೆ ಒಂದು ಸವಾಲು ಆಗಿದೆ. ತ್ರಾಸ ಕೊಡುವ ಉದ್ದೇಶದಿಂದ ಅವನಿಗೆ ಆಗದವರನ್ನು ಮನೆಯ ಆಸ್ತಿ ಕಳವು ಆಗಿದೆಯೆಂದು ಅಪವಾದ ಹೊರಿಸಿದ್ದಾನೆ.

ಸಾಧು, ಸಭ್ಯ ಸಮಾಜಕ್ಕೆ ನ್ಯಾಯ ದೊರೆಯುವುದು ಧರ್ಮದ ಗೌರವ ಕಾಪಾಡುವುದು ಕಠಿಣವಾಗಿದೆ. ಪುಂಡಗಿರಿಯೇ ನ್ಯಾಯವೆನ್ನುವಂತಾಗಿದೆ. ಈ ಕಾಲಕ್ಕೆ ಧರ್ಮಪೀಠವಾದರೂ ಜಾಗೃತವಾಗಿ ಆ ಅರ್ಚಕನನ್ನು ದೇವಪೂಜೆಯಿಂದ ಸಸ್ಪೆಂಡ ಮಾಡುವ ನ್ಯಾಯ ನಿಷ್ಠುರತೆ ತೋರಿಸಬಲ್ಲುದೋ ನೋಡಬೇಕು—**ಚಿತ್ರಗುಪ್ತ.**

ಶೇಡಬಾಳದ ಇನ್ನೊಬ್ಬರು ತಾ. 7–9–82 ರಂದು ಬರೆದ ಪತ್ರ ನನ್ನ ಕೈ ಸೇರಿತು. ಅದರ ಮುಖ್ಯಾಂಶ ಹೀಗಿದೆ :

"ತಾವು ಬರೆದ ಮುನಿವಿದ್ಯಾನಂದರು ಸುಳ್ಳಾಡಿದ್ದೇಕೆ ? ಎಂಬ ಪುಸ್ತಕವನ್ನು ಓದಿ ತುಂಬಾ ಸಂತೋಷವಾಯಿತು. ಕಾರಣ ತಾವು ಮಾಡಿದ ಕಾರ್ಯ ನಮ್ಮ ಜೈನ ಸಮಾಜಕ್ಕೆ ಉಪಯುಕ್ತ ಹಾಗೂ ಎಚ್ಚರಿಕೆ ಮಾಡಲು ಒಂದು ಮಾಧ್ಯಮ ಎಂದು ತಿಳಿಯಲು ಸಂದೇಹವಿಲ್ಲ.

ಆದರೆ ವಿದ್ಯಾನಂದ ಮಹಾರಾಜರು ನಮ್ಮ ಧರ್ಮ ನೇಮವನ್ನು ಬಿಟ್ಟು ಮುನಿ ವಾಸ್ತವ್ಯ ಆಚರಿಸುತ್ತಿರುವ ಅನೇಕ ಉದಾಹರಣೆ ಇನ್ನೂ ಉಂಟು. ಇದಲ್ಲದೆ ನಮ್ಮ ಊರಿನಲ್ಲಿಯ ಒಬ್ಬ ಅರ್ಚಕನು ವಿವಾಹಿತಳಾದ ತರುಣಿ ಮಹಿಳೆಯ ಮೇಲೆ ಬಲಾತ್ಕಾರಿಸಿ ಒಂದು ಘೋರ ಅನ್ಯಾಯವನ್ನು ಮಾಡಿ ಶೇಡಬಾಳ ಬಿಟ್ಟು ವಿದ್ಯಾನಂದರ ಕಡೆಗೆ ಆಶ್ರಯಿಸಲು ಹೋದನು, ಹಾಗೂ ಮುನಿಯವರು ಅಪರಾಧಿಗೆ ತುಂಬಾ ಆಶ್ರಯ ನೀಡಿದ್ದಾರೆ. ಇದಲ್ಲದೆ ರಾಜಕೀಯ ಲೀಡರ ಹಾಗು .....ಆಫೀಸರನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡು ಆರೋಪಿಯಾದ ಅರ್ಚಕನಿಗೆ ಯಾವುದೇ ತರದ ತೊಂದರೆ ಬರದ ಹಾಗೆ ಪ್ರಯತ್ನಿಸುತ್ತಿದ್ದಾರೆ. ಇದು ಸುಮಾರು ಒಂದೂವರಿ ತಿಂಗಳ ಪೂರ್ವದಲ್ಲಿ ಆದದ್ದು ಘಟನೆ ಇದ್ದರೂ ಕೂಡ ಇನ್ನೂವರೆಗೆ ಭಯಂಕರ ಜ್ವಲಂತವಾಗಿ ಮೊರೆಯುತ್ತಿರುವ ನಮ್ಮ ಭಾಗದ ಮುಖ್ಯ ವಿಷಯವಾಗಿದೆ.

ಕಾರಣ ತಾವು ಶೇಡಬಾಳಕ್ಕೆ ಸ್ವಂತ ಬಂದು ಪೂರ್ತಿ ಸಮಾಚಾರವನ್ನು ಕೇಳಿಕೊಂಡು ಹೋಗಬೇಕಾಗಿ ನಮ್ರ ವಿನಂತಿ. ತಾವೇ ಬಂದರೆ ಅನೇಕ ಲೇಖಿಸಾಕ್ಷಿ ಮತ್ತು ಜವಾಬನ್ನು ಕೊಡುತ್ತೇವೆ. ಕಾರಣ ತಾವು ಬೇಗನೆ ಬಂದು ಧರ್ಮಕ್ಕೆ ಆಗುತ್ತಿರುವ ಅವಮಾನವನ್ನು ತಡಿಯಲು ಪ್ರಯತ್ನಿಸಬೇಕು.''

ಇದೇ ರೀತಿಯ ಅಭಿಪ್ರಾಯವುಳ್ಳ ತಾ. 6–9-82ರ ದಿನಾಂಕದ ಶೇಡಬಾಳದ ಅಂಚೆ ಕಛೇರಿಯ ಮುದ್ರೆಯುಳ್ಳ ಮತ್ತೊಂದು ಪತ್ರ ನನ್ನ ಕೈಸೇರಿದೆ. ಈ ಪತ್ರದಲ್ಲಿ ಅತ್ಯಾಚಾರ ಮಾಡಿದ ಅಪರಾಧಿ ಅರ್ಚಕ ವಿದ್ಯಾನಂದರ ಸಂಬಂಧಿ ಎಂದು ಹೇಳಲಾಗಿದೆ.

ಶೇಡಬಾಳದ ಈ ಸುದ್ದಿ ತಾ. 7-10-1982ನೇ ತಾರೀಖಿನ 'ಪ್ರಜಾವಾಣಿ' ದಿನ ಪತ್ರಿಕೆಯಲ್ಲಿ ಕೆಳಗಿನ ರೂಪದಲ್ಲಿ ವರದಿಯಾಗಿದೆ :

**ಪೂಜಾರಿಯ ನೀತಿಬಾಹಿರ ನಡವಳಿಕೆ ವಿರುದ್ಧ ಕ್ರಮಕ್ಕೆ ಮನವಿ**

ಅಥಣಿ ಅ ೬–ಪೂಜಾರಿಯೊಬ್ಬನ ''ನೀತಿಬಾಹಿರ'' ನಡವಳಿಯ ವಿರುದ್ಧ ಕ್ರಮ ಜರುಗಿಸಬೇಕೆಂದು ಅಥಣಿ ತಾಲ್ಲೋಕು ಶೇಡಬಾಳ ಪಟ್ಟಣದ ಜೈನರು ಪೋಲಿಸರಿಗೆ ಮನವಿ ಸಲ್ಲಿಸಿದ್ದಾರೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ನೊಂದ ವ್ಯಕ್ತಿಗಳಿಂದ ನಿರ್ದಿಷ್ಟ ದೂರು ಬರದೆ ಮನವಿಯ ಬಗ್ಗೆ ಏನು ಕ್ರಮ ತೆಗೆದುಕೊಳ್ಳಬೇಕೆಂಬ ಬಗ್ಗೆ ಪೇಚಿಗೆ ಶೇಡಬಾಳ ಪೋಲೀಸರು ಸಿಲುಕಿದ್ದಾರೆ.

ಶೇಡಬಾಳದ ಪೂಜಾರಿಯೊಬ್ಬ ಮತ್ತೊಬ್ಬ ಪೂಜಾರಿಯ ಪತ್ನಿ ಜೊತೆಗೆ ಅನೈತಿಕ ಸಂಬಂಧವಿರಿಸಿಕೊಂಡಿದ್ದಾನೆಂದು ಹೇಳಲಾಗಿರುವುದು ಜೈನರ ಕೋಪಕ್ಕೆ ಕಾರಣವಾಗಿದೆ. ಈ ಬಗ್ಗೆ ಹಿಂದೆ ಕೂಡ ಗಲಾಟೆಯಾಗಿದ್ದು ಆಪಾದಿತ ಪೂಜಾರಿಯನ್ನು

## ಮುಂದಿನ ಪ್ರಕಟಣೆ

ಅಷ್ಟಾಢಭೂತಿ ವಿದ್ಯಾನಂದಮುನಿಗಳಿಂದ ಶಿಕ್ಷಣ ಪಡೆದ
ದಕ್ಷಿಣ ಭಾರತದ ಜೈನಮಠವೊಂದರ ಸನ್ಯಾಸಿಯ ವಿಚಿತ್ರ
ಜೀವನವನ್ನು ಕುರಿತ ಪುಸ್ತಕ

# ಕಪಟ ಭಟ್ಟಾರಕ

ಲೇಖಕ : ಬಿ. ಎಸ್. ನಂದಕುಮಾರ್

ಕುಂದಕುಂದ ಪ್ರಕಾಶನ
ಭದ್ರಾವತಿ